॥ ಶ್ರೀ ಶ್ರೀ ಶ್ರೀ ಗುರುಗೌರಾಂಗಾ ಜಯತಃ ॥

# ಆತ್ಮಸಾಕ್ಷಾತ್ಕಾರ ವಿಜ್ಞಾನ

ಮೂಲ

**ಶ್ರೀ ಶ್ರೀಮದ್**

**ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ**

ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಸ್ಥಾಪನಾಚಾರ್ಯ

ಅನುವಾದ

**ಶ್ರೀ ಕಂಠೀರಾವ್**

ನಿವೃತ್ತ ಭಾಷಾಂತರ ನಿರ್ದೇಶಕರು



ಭಕ್ತಿವೇದಾಂತ ಬುಕ್ ಟ್ರಸ್ಟ್ (ಬಿ.ಬಿ.ಟಿ.)

ನ್ಯೂಯಾರ್ಕ್-ಲಾಸ್ ಏಂಜಲಿಸ್–ಲಂಡನ್–ಬೊಂಬಾಯಿ–ಬೆಂಗಳೂರು

ಈ ಪುಸ್ತಕದ ವಿಷಯದಲ್ಲಿ ಆಸಕ್ತರಾದವರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ, ಬೆಂಗಳೂರು ಶಾಖೆಯ ಅಧ್ಯಕ್ಷರೊಂದಿಗೆ ಪತ್ರವ್ಯವಹಾರ ಮಾಡಬಹುದು.

K128.1
PRA

ವಿಳಾಸ

210, ಬಳ್ಳಾರಿ ರಸ್ತೆ, ಸದಾಶಿವನಗರ

ಬೆಂಗಳೂರು–560 080

ದೂರವಾಣಿ : 361539

© 1987, ಭಕ್ತಿವೇದಾಂತ ಬುಕ್ ಟ್ರಸ್ಟ್

ಎಲ್ಲ ಹಕ್ಕುಗಳನ್ನು ಕಾದಿರಿಸಲಾಗಿದೆ

C97804

(Special Thanks to BBT-Australia for their contribution for the publication of this book)

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಗ್ರಂಥ ಭಂಡಾರ
ಕ್ರಮ ಸಂಖ್ಯೆ 14987
ವರ್ಗ
ವರ್ಗ ಸಂಖ್ಯೆ
ಬಂದ ತಾ||
ಬೆಲೆ

ಮೊದಲನೆಯ ಮುದ್ರಣ : 1986, 5000 ಪ್ರತಿಗಳು

ಮುದ್ರಕರು

**ಸದರನ್ ಪ್ರಿಂಟರ್ಸ್**

897, ಕಾಂತರಾಜ ಅರಸ್ ರಸ್ತೆ,

ಲಕ್ಷ್ಮೀಪುರಂ, ಮೈಸೂರು-570 004

ದೂರವಾಣಿ : 20159

# ವಿಷಯಸೂಚಿ



## ಅರ್ಪಣೆ

ನಮಗೆ ಪರಮ ಪ್ರೀತ್ಯಾಸ್ಪದರಾದ, (ಗುರುಗಳಾದ, ಮಾರ್ಗದರ್ಶಕರಾದ ಮತ್ತು ಮಿತ್ರರಾದ) ಶ್ರೀ ಶ್ರೀಮದ್ ಎ. ಸಿ. ಭಕ್ತಿ ವೇದಾಂತ ಸ್ವಾಮಿ ಪ್ರಭುಪಾದರು ಐಹಿಕ ದೃಷ್ಟಿಯಿಂದ 1977ರ ನವೆಂಬರ್ 14ರಂದು ಇಹಲೋಕವನ್ನು ತ್ಯಜಿಸಿದರು. ಆದರೆ ಅವರು ನಿಜವಾಗಿ ಈಗಲೂ ನಮ್ಮೊಡನೆ ಇದ್ದಾರೆ. ಶ್ರೀಲ ಪ್ರಭುಪಾದರೇ ಅನೇಕ ಸಲ ಹೇಳುತ್ತಿದ್ದಂತೆ ಗುರು ಸನ್ನಿಧಾನಕ್ಕೆ ಎರಡು ಮಾರ್ಗಗಳಿವೆ : ಒಂದು ಅವರ ದೈಹಿಕ ಸನ್ನಿಧಾನ (ವಪುಃ) ಮತ್ತೊಂದು ಅವರ ಉಪದೇಶಗಳು (ವಾಣಿ). ನಾವು ಕೆಲವು ಸಲ ಅವರ ದೈಹಿಕ ಸನ್ನಿಧಾನವನ್ನು ಹೊಂದಬಹುದು ಮತ್ತು ಕೆಲವು ಸಲ ಹಾಗಿಲ್ಲದೆ ಹೋಗಬಹುದು. ಆದರೆ ನಾವು ಅವರ ಉಪದೇಶಗಳ ಮೂಲಕ ಸದಾ ಅವರ ಸನ್ನಿಧಾನದಲ್ಲಿರಬಹುದು.

—ಸಂಪಾದಕರು

# ಲೇಖಕರ ಪರಿಚಯ

ಶ್ರೀಕೃಷ್ಣ ಕೃಪಾಮೂರ್ತಿಗಳಾದ ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು 1896ರಲ್ಲಿ ಭಾರತದ ಕಲಕತ್ತಾ ನಗರದಲ್ಲಿ ಜನಿಸಿದರು. 1922ರಲ್ಲಿ ಕಲಕತ್ತೆಯಲ್ಲಿ ಅವರು ತಮ್ಮ ಗುರುಮಹಾರಾಜರಾದ ಶ್ರೀಲ ಭಕ್ತಿಸಿದ್ಧಾಂತ ಸರಸ್ವತೀ ಗೋಸ್ವಾಮಿಯವರನ್ನು ಪ್ರಥಮ ಬಾರಿಗೆ ಕಂಡರು. ಸುಪ್ರಸಿದ್ಧ ಧರ್ಮತತ್ವವೇತ್ತರೂ, ತಮ್ಮ ಕಾಲದ ವಿದ್ವಾನ್ ಭಕ್ತರೂ ಆದ ಶ್ರೀಲ ಭಕ್ತಿಸಿದ್ಧಾಂತರು 64 ಶಾಖೆಗಳನ್ನುಳ್ಳ ಗೌಡೀಯ ಮಠವನ್ನು ಸ್ಥಾಪಿಸಿದವರಾಗಿದ್ದರು. ಈ ಸುಶಿಕ್ಷಿತ ನವಯುವಕನನ್ನು ಮೆಚ್ಚಿಕೊಂಡರು ಮತ್ತು ವೈದಿಕ ಜ್ಞಾನ ಪ್ರಚಾರಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿಡಿಸಲು ಅವರಿಗೆ ಪ್ರೇರಣೆಯನ್ನಿತ್ತರು ಶ್ರೀಲ ಪ್ರಭುಪಾದರು ಅವರ ಛಾತ್ರರಾಗಿ ಹನ್ನೊಂದು ವರ್ಷಗಳ ಅನಂತರ ಅಂದರೆ 1933 ರಲ್ಲಿ ಪ್ರಯಾಗ (ಅಲಹಾಬಾದ) ದಲ್ಲಿ ತಮ್ಮ ಗುರುಗಳಿಂದ ವಿಧಿವತ್ತಾಗಿ ದೀಕ್ಷೆ ತೆಗೆದುಕೊಂಡು ಅವರು ಶಿಷ್ಯರಾದರು.

1922ರಲ್ಲಿ ತಮ್ಮ ಪ್ರಥಮ ಭೆಟ್ಟಿಯಲ್ಲಿಯೆ ಶ್ರೀಲ ಭಕ್ತಿ ಸಿದ್ಧಾಂತ ಸರಸ್ವತೀ ಠಾಕೂರರು ಶ್ರೀಲ ಪ್ರಭುಪಾದರಿಗೆ ಆಂಗ್ಲ ಭಾಷಾ ಮಾಧ್ಯಮದಿಂದ ವೈದಿಕ ಜ್ಞಾನದ ಪ್ರಚಾರ ಮಾಡಬೇಕೆಂದು ನಿವೇದಿಸಿದ್ದರು. ಮುಂದಿನ ವರ್ಷಗಳಲ್ಲಿ ಶ್ರೀಲ ಪ್ರಭುಪಾದರು ಶ್ರೀಮದ್ಭಗವದ್ಗೀತೆಯ ಮೇಲೆ ಒಂದು ಟೀಕೆಯನ್ನು ಬರೆದರು. ಗೌಡೀಯ ಮಠದ ಕಾರ್ಯಗಳಲ್ಲಿ ಸಹಯೋಗವನ್ನಿತ್ತರು ಹಾಗೂ 1944ರಲ್ಲಿ ಯಾರ ನೆರವಿಲ್ಲದೆ ಒಂದು ಆಂಗ್ಲ ಪಾಕ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿ, ಅದರ ಸಂಪಾದನೆ, ಬೆರಳಚ್ಚಿನ ಪ್ರತಿಗಳ ಸಿದ್ಧತೆ, ಮುದ್ರಣ ದೋಷ ತಿದ್ದುವಿಕೆ ಮುಂತಾದ ಕಾರ್ಯಗಳನ್ನು ಸ್ವತಃ ತಾವೆಯೇ ನೋಡಿಕೊಂಡರಲ್ಲದೆ. ಅದರ ಪ್ರತಿಗಳನ್ನು ತಾವೆಯೇ ಉಚಿತವಾಗಿ ಹಂಚಿದರು. ಆ ಪ್ರಕಟನೆಯನ್ನು ಮುಂದುವರೆಸಲು ಹೆಣಗಿದರು.

ಶ್ರೀಲ ಪ್ರಭುಪಾದರ ದಾರ್ಶನಿಕ ಜ್ಞಾನ ಮತ್ತು ಭಕ್ತಿಯ ಮಹತ್ವವನ್ನು ಅರಿತುಕೊಂಡು "ಗೌಡೀಯ ವೈಷ್ಣವ ಸಮಾಜ" ವು 1947ರಲ್ಲಿ "ಭಕ್ತಿ ವೇದಾಂತ" ಎಂಬ ಬಿರುದಿನೊಂದಿಗೆ ಅವರನ್ನು ಸನ್ಮಾನಿಸಿತು. 1959ರಲ್ಲಿ ಅಂದರೆ ಅವರ 50 ನೆಯ ವಯಸ್ಸಿನಲ್ಲಿ ಶ್ರೀಲ ಪ್ರಭುಪಾದರು ಗೃಹಸ್ಥಾಶ್ರಮದಿಂದ ನಿವೃತ್ತರಾಗಿ, ನಾಲ್ಕು ವರ್ಷಗಳ ಅನಂತರ ಅಧ್ಯಯನ ಮತ್ತು ಲೇಖನ ಕಾರ್ಯಗಳಿಗೆ ಸಮಯವನ್ನು ಹೊಂದುವ ಉದ್ದೇಶದಿಂದ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದರು. ಅನಂತರ ಶ್ರೀ ವೃಂದಾವನ ಯಾತ್ರೆ ಕೈಗೊಂಡರು. ಅಲ್ಲಿಯ

ಇತಿಹಾಸ ಪ್ರಸಿದ್ಧ ರಾಧ-ದಾಮೋದರ ಮಂದಿರದಲ್ಲಿಯ ಒಂದು ಚಿಕ್ಕ ಕೋಣೆಯಲ್ಲಿದ್ದು ಕೊಂಡು ಅನೇಕ ವರ್ಷಗಳವರೆಗೆ ಗಂಭೀರವಾದ ಅಧ್ಯಯನ ಮತ್ತು ಲೇಖನದಲ್ಲಿ ಮಗ್ನರಾದರು. 1959ರಲ್ಲಿ ಅವರು ಸಂನ್ಯಾಸಗ್ರಹಣ ಮಾಡಿದರು. ಶ್ರೀ ರಾಧ–ದಾಮೋದರ ಮಂದಿರದಲ್ಲಿದ್ದಾಗಲೇ ಶ್ರೀಲ ಪ್ರಭುಪಾದರು ತಮ್ಮ ಜೀವನದ ಶ್ರೇಷ್ಠ ಹಾಗೂ ಮಹತ್ವ ಪೂರ್ಣವಾದ ಗ್ರಂಥ ರಚನೆಯನ್ನು ಆರಂಭಿಸಿದರು. ಹದಿನೆಂಟು ಸಾವಿರ ಶ್ಲೋಕ ಸಂಖ್ಯೆಯ ಶ್ರೀಮದ್ ಭಾಗವತ ಪುರಾಣದ ಅನೇಕ ಖಂಡಗಳ ಇಂಗ್ಲಿಷ್ ಅನುವಾದ ಮತ್ತು ವ್ಯಾಖ್ಯಾನವೇ ಆ ಗ್ರಂಥವಾಗಿತ್ತು. ಅಲ್ಲಿಯೆ ಇದ್ದಾಗ ಅವರು 'ಇತರ ಗ್ರಹಗಳಿಗೆ ಸುಗಮ ಯಾತ್ರೆ' ಎಂಬ ಗ್ರಂಥವನ್ನೂ ಬರೆದಿದ್ದರು.

ಶ್ರೀಮದ್ ಭಾಗವತದ ಮೊದಲನೆಯ ಮೂರು ಖಂಡಗಳನ್ನು ಪ್ರಕಾಶಗೊಳಿಸಿದ ಅನಂತರ, ತಮ್ಮ ಗುರುದೇವರ ಧರ್ಮಕಾರ್ಯವನ್ನು ಪೂರ್ತಿಗೊಳಿಸಲು ಅವರು ಅಮೆರಿಕೆಗೆ ತೆರಳಿದರು. ಶ್ರೀಲ ಪ್ರಭುಪಾದರು ಭರತವರ್ಷದ ಶ್ರೇಷ್ಠವಾದ ದಾರ್ಶನಿಕ ಹಾಗೂ ಧಾರ್ಮಿಕ ಗ್ರಂಥಗಳ ಅನುವಾದಗಳು, ಟೀಕೆಗಳು, ಸಂಕ್ಷಿಪ್ತ ಅಧ್ಯಯನ–ಸಾರಗಳು ಹೀಗೆ 60ಕ್ಕಿಂತಲೂ ಹೆಚ್ಚು ಗ್ರಂಥರತ್ನಗಳನ್ನು ಪ್ರಕಾಶಪಡಿಸಿದರು

1965ರಲ್ಲಿ ಸರಕು ಸಾಗಿಸುವ ಹಡಗಿನಿಂದ ಅವರು ಪ್ರಥಮ ಸಲ ನ್ಯೂಯಾರ್ಕ್ ನಗರಕ್ಕೆ ಬಂದಾಗ ಅವರ ಹತ್ತಿರ ಒಂದು ಪೈಸೆ ಕೂಡ ಇರಲಿಲ್ಲ. ಅದರ ಅನಂತರ ಕಷ್ಟ ಕಾರ್ಪಣ್ಯಗಳ ಒಂದು ವರ್ಷದ ಅನಂತರ 1966ರಲ್ಲಿ ಅವರು "ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾ ಸಂಘ" ವನ್ನು ಸ್ಥಾಪಿಸಿದರು. 1977ರ ನವೆಂಬರ್ 14ರಂದು ಶ್ರೀ ವೃಂದಾವನ ಧಾಮದಲ್ಲಿ ಪ್ರಕಟವಾಗುವ ತನಕವೂ ಅವರು ತಮ್ಮ ಕುಶಲ ನಿರ್ದೇಶನದಿಂದ ಈ ಸಂಘವು ಪ್ರಪಂಚಾದ್ಯಂತ ನೂರಕ್ಕಿಂತಲೂ ಹೆಚ್ಚು ಮಂದಿರಗಳು, ಆಶ್ರಮಗಳು, ವಿದ್ಯಾಲಯಗಳು, ಸಂಸ್ಥೆಗಳು, ಕೃಷಿಕ್ಷೇತ್ರಗಳು ಮುಂತಾದವುಗಳನ್ನು ಹೊಂದಿ ಬೃಹತ್ ಸಂಘಟನೆಯಾಗಿ ಬೆಳೆಯುವಂತೆ ನೋಡಿಕೊಂಡರು.

1968ರಲ್ಲಿ ಪ್ರಾಯೋಗಿಕವಾಗಿ ವೈದಿಕ ಸಮಾಜ ರೀತಿಯನ್ನು ಆಧರಿಸಿ ಪಶ್ಚಿಮ ವರ್ಜಿನಿಯಾದಲ್ಲಿ ಪರ್ವತಪ್ರಾಂತ್ಯದಲ್ಲಿ ಒಂದು ನವವೃಂದಾವನವನ್ನು ಸ್ಥಾಪಿಸಿದರು. ಈ ಸಮೃದ್ಧವಾದ ನವ-ವೃಂದಾವನವು ಒಂದು ಸಹಸ್ರ ಎಕರೆಗಳಿಗಿಂತಲೂ ಹೆಚ್ಚು ಪ್ರದೇಶದಲ್ಲಿ ಒಕ್ಕಲುತನವನ್ನು ಹೊಂದಿದೆ. ಅದರಿಂದ ಪ್ರೋತ್ಸಾಹಿತರಾದ ಅವರ ಶಿಷ್ಯರು ಅಮೆರಿಕಾ ಹಾಗೂ ಇತರ ದೇಶಗಳಲ್ಲಿ ಅಂಥ ಅನೇಕ ಸಮುದಾಯಗಳನ್ನು ಸ್ಥಾಪಿಸಿದರು.

1975ರಲ್ಲಿ ಟೆಕ್ಸಾಸದ ಡಲ್ಲಾಸ್‌ದಲ್ಲಿ ಅವರು ಗುರುಕುಲ ವಿದ್ಯಾಲಯವೊಂದನ್ನು ಸ್ಥಾಪಿಸಿ, ಪಶ್ಚಿಮ ದೇಶಗಳಲ್ಲಿ ವೈದಿಕ ಶಿಕ್ಷಣ ಪ್ರಣಾಲಿಯನ್ನು ಪ್ರಾಥಮಿಕವಾಗಿಯೂ, ಮಾಧ್ಯಮಿಕವಾಗಿಯೂ ಪ್ರಾರಂಭಿಸಿದರು. ಅಂದಿನಿಂದ ಅವರ ನಿರ್ದೇಶನದಲ್ಲಿ ಅವರ ಶಿಷ್ಯರು ಪ್ರಪಂಚದಲ್ಲಿ ಹತ್ತಕ್ಕೂ ಹೆಚ್ಚು ಇಂತಹ ಗುರುಕುಲಗಳನ್ನು ಸ್ಥಾಪಿಸಿದ್ದಾರೆ. 1975ರಲ್ಲಿ ಭಾರತದ ವೃಂದಾವನದಲ್ಲಿ ಶ್ರೀಲ ಪ್ರಭುಪಾದರ ಭವ್ಯವಾದ ಕೃಷ್ಣ–ಬಲರಾಮ ಮಂದಿರ ಹಾಗೂ ಅಂತಾರಾಷ್ಟ್ರೀಯ ಅತಿಥಿಗೃಹವು ಸ್ಥಾಪಿತವಾದವು. 1978ರಲ್ಲಿ ಮುಂಬಯಿಯ ಜುಹು ಭಾಗದಲ್ಲಿ ನಾಲ್ಕು ಎಕರೆಗಳ ಪ್ರದೇಶದಲ್ಲಿ ಒಂದು ಮಂದಿರ, ಒಂದು ನವೀನ ಮಾದರಿಯ

ರಂಗಮಂದಿರ, ಒಂದು ಅತಿಥಿಗೃಹ ಹಾಗೂ ಒಂದು ಶಾಖಾಹಾರಿ ಭೋಜನಗೃಹ–ಇವು ಗಳಿಂದ ಸಮಾವಿತವಾದ ಒಂದು ಸಾಂಸ್ಕೃತಿಕ ಕೇಂದ್ರವು ಸಂಘಟಿತವಾಯಿತು. ಪಶ್ಚಿಮ ಬಂಗಾಲದ ಮಾಯಾಪುರದಲ್ಲಿಯ ಐವತ್ತು ಸಹಸ್ರ ರಹವಾಸಿಗಳ ಒಂದು ಯೋಜನಾಬದ್ಧ ನಗರವು ಶ್ರೀಲ ಪ್ರಭುಪಾದರ ಅತ್ಯಂತ ಮಹತ್ವಾಕಾಂಕ್ಷಿಯಾದ ಯೋಜನೆಯಾಗಿದೆ. ಸಹಸ್ರ ವರ್ಷಗಳ ಹಿಂದಿನ ವೈದಿಕ ಬದುಕಿನ ಸತ್ವಕ್ಕೆ ಅದು ಮಾದರಿಯಾಗಿದೆ.

ಆದರೆ ಶ್ರೀಲ ಪ್ರಭುಪಾದರ ಶ್ರೇಷ್ಠ ಕಾಣಿಕೆಗಳೆಂದರೆ ಅವರ ಗ್ರಂಥಗಳೇ ಆಗಿವೆ. ತಮ್ಮ ಪ್ರಾಮಾಣ್ಯ, ಗಾಂಭೀರ್ಯ ಹಾಗೂ ಸ್ಪಷ್ಟತ್ವಗಳಿಂದಾಗಿ ಈ ಗ್ರಂಥಗಳು ವಿದ್ವದ್ ಲೋಕದಲ್ಲಿ ಸರ್ವಮಾನ್ಯತೆಯನ್ನು ಪಡದಿವೆ, ಅನೇಕ ಮಹಾವಿದ್ಯಾಲಯಗಳಲ್ಲಿ ಉನ್ನತ ಸ್ತರದಲ್ಲಿ ಪಠ್ಯಪುಸ್ತಕಗಳಾಗಿವೆ. ಅವರ ರಚನೆಗಳು 25 ಭಾಷೆಗಳಲ್ಲಿ ಅನುವಾದಿತವಾಗಿವೆ. ಭಕ್ತಿವೇದಾಂತ ಬುಕ್ ಟ್ರಸ್ಟ್ 1972 ರಲ್ಲಿ ಸ್ಥಾಪಿತವಾಯಿತು; ಅದು ಭಾರತೀಯ ಧರ್ಮ ಮತ್ತು ಪ್ರಕಾಶನಕ್ಕೆ ಮೀಸಲಾದ ಪ್ರಕಾಶನ; ಈ ವಿಷಯಗಳ ಕ್ಷೇತ್ರದಲ್ಲಿ ಅದು ಪ್ರಪಂಚದಲ್ಲಿ ಅತ್ಯಂತ ವಿಶಾಲವಾದ ಪ್ರಕಾಶನವಾಗಿದೆ. ಬಂಗಾಲಿ ಭಾಷೆಯಲ್ಲಿ 'ಶ್ರೀ ಚೈತನ್ಯ ಚರಿತಾಮೃತ' ಗ್ರಂಥವನ್ನು ಶ್ರೀಲ ಪ್ರಭುಪಾದರು ಇಂಗ್ಲಿಷಿನಲ್ಲಿ ವ್ಯಾಖ್ಯಾನ ಸಹಿತವಾಗಿ 17 ಸಂಪುಟಗಳ ವಿರಾಡ್ ಗಾತ್ರದಲ್ಲಿ ಬರೆದಿದ್ದನ್ನು ಪ್ರಕಾಶಿಸುವದು ಈ ಪ್ರಕಾಶನದ ಮಹತ್ವದ ಯೋಜನೆಯಾಗಿದೆ. ಶ್ರೀಲ ಪ್ರಭುಪಾದರು ಈ 17 ಸಂಪುಟಗಳನ್ನು 18 ತಿಂಗಳುಗಳಲ್ಲಿ ಬರೆದು ಮುಗಿಸಿದ್ದು ಒಂದು ಅದ್ಭುತವೇ ಸರಿ.

ತಮ್ಮ ವೃದ್ಧಾಪ್ಯದ ಬಗ್ಗೆ ಚಿಂತಿಸದೆ 12 ವರ್ಷಗಳಲ್ಲಿ ಅವರು ಆರು ಖಂಡಗಳನ್ನು 14 ಸಲ ತಮ್ಮ ವ್ಯಾಖ್ಯಾನಗಳಿಗಾಗಿ ಸಂಚರಿಸಿದ್ದಾರೆ. ಇಂತಹ ಕಾರ್ಯಬಾಹುಳ್ಯದ ಮಧ್ಯೆಯೂ ಶ್ರೀಲ ಪ್ರಭುಪಾದರ ಲೇಖನಿಯು ಅವ್ಯಾಹತವಾಗಿ ಕೃತಿರಚನೆಯಲ್ಲಿ ತೊಡಗಿರುತ್ತದೆ. ವೈದಿಕ ಧರ್ಮ, ದರ್ಶನ, ಸಾಹಿತ್ಯ ಮತ್ತು ಸಂಸ್ಕೃತಿಗಳ ವಿಷಯವಾಗಿ ಅವರು ರಚಿಸಿದ ಕೃತಿಗಳು ಸ್ವತಂತ್ರವಾದೊಂದು ಪುಸ್ತಕಾಲಯಕ್ಕೆ ಸಮಾನವಾಗಿವೆ.

ಶ್ರೀ ಕಂಠೀರಾವ್ ಅವರು, **"ಆತ್ಮ ಸಾಕ್ಷಾತ್ಕಾರ ವಿಜ್ಞಾನ"** ಎಂಬ ಶ್ರೀಲ ಪ್ರಭುಪಾದರ ಕೃತಿಯನ್ನು ಬಹು ಸುಂದರವಾದ ಕನ್ನಡಕ್ಕೆ ಅನುವಾದಿಸಿದ್ದಾರೆ. ಶ್ರೀ ಎನ್. ಎಸ್. ಶಾರದಾ ಪ್ರಸಾದ್ ಮತ್ತು ಶ್ರೀಮತಿ ಅಕ್ಕಮಹಾದೇವಿಯವರು ಮುದ್ರಣ ಕರಡನ್ನು ಪರಿಶೋಧಿಸಿದ್ದಾರೆ. ಇವರೆಲ್ಲರಿಗೂ ಭಕ್ತಿ ವೇದಾಂತ ಬುಕ್ ಟ್ರಸ್ಟ್ ಋಣಿಯಾಗಿದೆ.

**ಭಕ್ತಿವೇದಾಂತ ಬುಕ್ ಟ್ರಸ್ಟ್**

ಬೆಂಗಳೂರು



ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ
ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಸಂಸ್ಥಾಪನಾಚಾರ್ಯರು
ಮತ್ತು ಪಾಶ್ಚಾತ್ಯ ಜಗತ್ತಿನಲ್ಲಿ ಕೃಷ್ಣಪ್ರಜ್ಞೆಯ ಮಹೋನ್ನತ ಪ್ರತಿಪಾದಕರು.



ಕಲಿಯುಗದಲ್ಲಿ ಬುದ್ಧಿವಂತರು ಸಂಗಡಿಗರಿಂದ ಕೂಡಿದ ಶ್ರೀ ಚೈತನ್ಯರನ್ನು ನಾಮ ಸಂಕೀರ್ತನೆಯಿಂದ ಅರ್ಚಿಸುತ್ತಾರೆ. (ಭಾಗವತ 11-5-32)




ದೈವೀ ಗುಣಗಳು ಮೋಕ್ಷಕ್ಕೆ ಕಾರಣವಾಗುತ್ತವೆ. ಅಸುರೀ ಗುಣಗಳು ಭವ ಬಂಧಕ್ಕೆ ಕಾರಣವಾಗುತ್ತವೆ.



ಆತ್ಮನು ಭೌತಿಕ ದೇಹದಲ್ಲಿ ಒಬ್ಬ ಪ್ರವಾಸಿ. ಬುದ್ಧಿ ಅದರ ಚಾಲಕ, ಮನಸ್ಸು ಚಾಲನ ಸಾಧನ ಮತ್ತು ಇಂದ್ರಿಯಗಳು ಅಶ್ವಗಳು. ಹೀಗೆ ಆತ್ಮನು ಮನಸ್ಸು ಮತ್ತು ಇಂದ್ರಿಯಗಳ ಸಂಪರ್ಕದಿಂದ ಸುಖಿಯೋ, ದುಃಖಿಯೋ ಆಗುತ್ತಾನೆ.



ಪಂಡಿತರು ಉಳಿದವರಿಗಾಗಿ ಅಥವಾ ಅಳಿದವರಿಗಾಗಿ ಶೋಕಿಸುವುದಿಲ್ಲ ಎಂದು ಪರಮದೇವೋತ್ತಮ ಪುರುಷನು ನುಡಿದನು.

Exposure
MAG

ಮರಣಕಾಲದಲ್ಲಿದ್ದ ಪ್ರಜ್ಞೆಯು ಆತನನ್ನು ಮುಂದಿನ ದೇಹಕ್ಕೆ ಕೊಂಡೊಯ್ಯು
ತ್ತದೆ. (ಭ. ಗೀ. 15-8)



ನಾಲ್ಕು ಬಗೆಯ ಸಜ್ಜನರು ಕೃಷ್ಣನಿಗೆ ಶರಣಾಗತರಾಗುತ್ತಾರೆ. ಮತ್ತು ನಾಲ್ಕು ಬಗೆಯ ದುರ್ಜನರು ಶರಣಾಗತರಾಗುವುದಿಲ್ಲ.



ಮಂದ ಮತಿಗಳು ಅನ್ಯ ದೇವತೆಗಳನ್ನು ಆರಾಧಿಸಿ ತಮ್ಮ ಇಚ್ಛೆಗಳನ್ನು ಪೂರೈಸಿಕೊಳ್ಳುತ್ತಾರೆ. ಅಂಥ ಫಲಗಳು ಅನಿತ್ಯವಾಗಿದ್ದು, ಮರಣದೊಂದಿಗೆ ಕೊನೆಗೊಳ್ಳುತ್ತವೆ. ನಿಜವಾಗಿ ಈ ಎಲ್ಲ ಫಲಗಳು ಕೃಷ್ಣನಿಂದಲೇ ದೊರೆಯುತ್ತವೆ.

# ಮುನ್ನುಡಿ

ಪ್ರಾರಂಭದಿಂದಲೇ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ನಾನು ಕಂಡ ವ್ಯಕ್ತಿಗಳಲ್ಲಿ ಅತ್ಯಂತ ಅಸಾಧಾರಣ ವ್ಯಕ್ತಿಯಾಗಿದ್ದರೆಂದು ನಾನು ಬಲ್ಲೆ. ನನ್ನ ಅವರ ಮೊದಲ ಭೇಟಿಯು ನ್ಯೂಯಾರ್ಕ್ ನಗರದಲ್ಲಿ 1966ರ ಬೇಸಿಗೆಯಲ್ಲಿ ನಡೆಯಿತು. ಮ್ಯಾನ್ ಹ್ಯಾಟನ್‌ನ ಬೌರಿಯಲ್ಲಿ "ಒಬ್ಬ ವೃದ್ಧ ಭಾರತೀಯ ಸ್ವಾಮಿಯ" ಭಾಷಣವನ್ನು ಕೇಳಲು ನನ್ನ ಒಬ್ಬ ಮಿತ್ರನು ನನ್ನನ್ನು ಕರೆದಿದ್ದನು. ಒಬ್ಬ ಸ್ವಾಮಿಯು ಸ್ಕಿಡ್‌ರೋದಲ್ಲಿ ಉಪನ್ಯಾಸ ಮಾಡುವರೆಂಬ ಬಗ್ಗೆ ಅತಿ ಕುತೂಹಲಿಯಾಗಿ ನಾನು ಅಲ್ಲಿಗೆ ಹೋದೆ ಮತ್ತು ಅತ್ಯಂತ ಕತ್ತಲು ಮುಸುಕಿದ ಮೆಟ್ಟಿಲುಗಳನ್ನೇರಿ ಆ ಸ್ಥಳವನ್ನು ತಲುಪಿದೆ. ನಾನು ಮೇಲೇರುತ್ತಿದ್ದಂತೆ ಒಂದು ಘಂಟಾನಾದದಂಥ ಲಯಬದ್ಧ ಧ್ವನಿಯು ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತ ಬಂತು. ನಾನು ಕೊನೆಗೆ ನಾಲ್ಕನೆಯ ಮಹಡಿಯನ್ನು ತಲುಪಿ ಬಾಗಿಲನ್ನು ತೆರೆದೆ, ಅಲ್ಲಿ ಅವರಿದ್ದರು.

ನಾನು ನಿಂತಲ್ಲಿಂದ 50 ಅಡಿ ದೂರದಲ್ಲಿ ಆ ಕಡೆಗೆ ಕತ್ತಲು ಕೋಣೆಯಲ್ಲಿ ಅವರು ಒಂದು ಚಿಕ್ಕ ವೇದಿಕೆಯ ಮೇಲೆ ಕುಳಿತಿದ್ದರು. ಅವರ ಮುಖ ಮತ್ತು ಕಾವಿವಸ್ತ್ರಗಳು, ಒಂದು ಚಿಕ್ಕ ದೀಪದ ಬೆಳಕಿನಲ್ಲಿ ಪ್ರಕಾಶಿಸುತ್ತಿದ್ದವು. ಅವರು ವಯಸ್ಸಿನಲ್ಲಿ ಹಿರಿಯರಾಗಿದ್ದರು. ಪ್ರಾಯಃ ಅವರಿಗೆ 60 ಆಗಿರಬಹುದೆಂದು ನಾನು ಭಾವಿಸಿದೆ. ಅವರು ನೇರವಾಗಿ ಗಂಭೀರವಾಗಿ ಕುಳಿತಿದ್ದರು. ಅವರು ಶಿಖಾಧಾರಿಯಾಗಿದ್ದರು. ಅವರ ತೇಜಃಪುಂಜವಾದ ಮುಖ ಮತ್ತು ಕೆಂಪು ಛಾಯೆಯ ಕಟ್ಟುಗಳುಳ್ಳ ಕನ್ನಡಕವು, ಅವರು ತಮ್ಮ ಬಹುಪಾಲು ಜೀವನವನ್ನು ಅಧ್ಯಯನದಲ್ಲಿಯೇ ಕಳೆದ ಒಬ್ಬ ಮಹಾಪುರುಷನೆಂದು ಹೇಳುವಂತಿದ್ದವು. ಅವರು ಕಣ್ಣು ಮುಚ್ಚಿದ್ದರು ಮತ್ತು ಮೆಲ್ಲನೆ ಮೃದಂಗವನ್ನು ಬಾರಿಸುತ್ತ ಒಂದು ಯಾವುದೋ ಸರಳ ಸಂಸ್ಕೃತ ಪ್ರಾರ್ಥನೆಯನ್ನು ಹೇಳುತ್ತಿದ್ದರು. ಅವರ ಮುಂದೆ ಕುಳಿತಿದ್ದ ಒಂದು ಚಿಕ್ಕ ವೃಂದವು ಆಗಾಗ ಅವರು ಹೇಳಿದ್ದನ್ನು ಪುನರುಚ್ಚರಿಸುತ್ತ ಅವರೊಡನೆ ದನಿಗೂಡಿಸುತ್ತಿತ್ತು. ಅವರಲ್ಲಿ ಕೆಲವರು ಕೈತಾಳಗಳನ್ನು **ನುಡಿಸುತ್ತಿದ್ದರು,** ಅದು ನಾನು ಹಿಂದೆ ಕೇಳಿದ್ದ ಗಂಟೆಯ ಶಬ್ದದಂತಿತ್ತು. ನಾನು ಸುಮ್ಮನೆ ಹಿಂಬದಿಗಡೆ ಕುಳಿತುಕೊಂಡೆ ಮತ್ತು ಭಜನೆಯಲ್ಲಿ ಆಶ್ಚರ್ಯ ಚಕಿತನಾಗಿನಾಗಿ ಭಾಗವಹಿಸುತ್ತ ಕಾಯುತ್ತಿದ್ದೆ.

ಕೆಲವು ಕ್ಷಣಗಳ ತರುವಾಯ ಆ ಸ್ವಾಮಿಗಳು ತಮ್ಮ ಮುಂದೆ ತೆರೆದಿಟ್ಟಿದ್ದ ಪ್ರಾಯಃ ಒಂದು ದೊಡ್ಡ ಸಂಸ್ಕೃತ ಸಂಪುಟದಿಂದ ಇಂಗ್ಲೀಷಿನಲ್ಲಿ ಭಾಷಣ ಪ್ರಾರಂಭಿಸಿದರು. ಅವರು ಹೆಚ್ಚಾಗಿ ನೆನಪಿನ ಬಲದಿಂದಲೇ ಉಪನ್ಯಾಸ ಮಾಡುತ್ತಿದ್ದರು. ಆಗಾಗ ಪುಸ್ತಕದಿಂದ ಉದ್ಧರಿಸುತ್ತಿದ್ದರು. ಅವರ ಧ್ವನಿಯು ಕೇಳಲು ಇಂಪಾಗಿತ್ತು. ಅವರು ಪ್ರತಿಯೊಂದು ಶ್ಲೋಕವನ್ನು ಚಾಚೂ ತಪ್ಪದೆ ವಿಸ್ತಾರವಾಗಿ ವಿವರಿಸುತ್ತಿದ್ದರು.

ಅವರೊಬ್ಬ ಮಹಾವಿದ್ವಾಂಸರಂತೆ ಕಾಣುತ್ತಿದ್ದರು. ಅವರು ಬಳಸುತ್ತಿದ್ದ ಶಬ್ದ ಸಂಪತ್ತು ಜಟಿಲವಾದ ವೇದಾಂತ ಪರಿಭಾಷೆಗಳು ಮತ್ತು ನುಡಿಗಟ್ಟುಗಳಿಂದ ಶೋಭಿಸುತ್ತಿತ್ತು. ಮಾತನಾಡುತ್ತಿದ್ದಾಗ ಅವರ ಸುಂದರ ಹಸ್ತವಿನ್ಯಾಸಗಳು ಮತು ಅವರ ಚೈತನ್ಯ ಮುಖಭಾವ ಗಳು ಅವರ ಭಾಷಣಕ್ಕೆ ವಿಶೇಷ ಕಳೆಕೊಟ್ಟಿದ್ದವು. "ನಾನು ಈ ದೇಹದಲ್ಲಿ ಭಾರತೀಯನಲ್ಲ, ನೀವು ಅಮೇರಿಕನ್ನರಲ್ಲ.....ನಾವೆಲ್ಲ ಜೀವಾತ್ಮರು" ಎಂಬ ಅವರ ಉಪನ್ಯಾಸ ವಿಷಯವು ತುಂಬಾ ಗಡುಸಾಗಿತ್ತು. ನಾನು ಹಿಂದೆ ಅಂತಹದನ್ನು ಕೇಳಿರಲಿಲ್ಲ.

ಭಾಷಣವು ಮುಗಿದ ಮೇಲೆ ಯಾರೋ ಒಬ್ಬರು ಭಾರತದಲ್ಲಿ ಮುದ್ರಿತವಾದ ಒಂದು ಕರಪತ್ರವನ್ನು ನನಗೆ ಕೊಟ್ಟರು. ಅದರಲ್ಲಿ ಸ್ವಾಮಿಯವರು ಭಾರತದ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿಯವರಿಗೆ ಮೂರು ಪುಸ್ತಕಗಳನ್ನು ಕೊಡುತ್ತಿರುವ ಚಿತ್ರವಿತ್ತು. ಭಾರತದ ಎಲ್ಲಾ ಸರ್ಕಾರಿ ಗ್ರಂಥಾಲಯಗಳು ಈ ಪುಸ್ತಕಗಳನ್ನು ತರಿಸಿಕೊಳ್ಳಬೇಕೆಂದು ಲಾಲ್ ಬಹದ್ದೂರ್ ಶಾಸ್ತ್ರಿಗಳು ಹೇಳಿದಂತೆ ಒಂದು ಶೀರ್ಷಿಕೆಯು ಅದರಲ್ಲಿತ್ತು. ಅಷ್ಟೇ ಅಲ್ಲ, ಮತ್ತೊಂದು ಚಿಕ್ಕ ವಾಕ್ಯದಲ್ಲಿ "ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಬಹು ದೊಡ್ಡ ಕಾರ್ಯ ಮಾಡುತ್ತಿದ್ದಾರೆ. ಅವರ ಕೃತಿಗಳು ಮಾನವಕೋಟಿಯ ಉದ್ಧಾರಕ್ಕೆ ಬಹುದೊಡ್ಡ ಕೊಡುಗೆಗಳಾಗಿವೆ" ಎಂದೂ ಪ್ರಧಾನಿಯವರು ಬರೆದಿದ್ದರು ನಾನು ಆ ಪುಸ್ತಕಗಳ ಪ್ರತಿಗಳನ್ನು ಕೊಂಡುಕೊಂಡೆ. ಆ ಪುಸ್ತಕಗಳನ್ನು ಸ್ವಾಮಿಯವರು ಭಾರತದಿಂದ ತಂದಿದ್ದರೆಂದು ನನಗೆ ತಿಳಿಯಿತು. ಆ ಪುಸ್ತಕಗಳ ಹೊದಿಕೆ ಪತ್ರಗಳನ್ನು, ಕರಪತ್ರಗಳನ್ನು ಮತ್ತು ವಿವಿಧ ಇತರ ಸಾಹಿತ್ಯವನ್ನು ಓದಿದ ಬಳಿಕ ನಾನು ಭಾರತದ ಒಬ್ಬ ಅತ್ಯಂತ ಗೌರವಾನ್ವಿತ ಆಧ್ಯಾತ್ಮ ಗುರು ಒಬ್ಬರನ್ನು ಕಂಡೆ ಎಂಬ ಭಾವನೆ ನನಗೆ ಮೂಡಲಾರಂಭಿಸಿತು.

ಇಂಥ ಒಬ್ಬ ಮಹಾಪುರುಷನು ಎಲ್ಲ ಸ್ಥಳಗಳನ್ನು ಬಿಟ್ಟು ಈ ಬೌರೀ ಬೀದಿಯಲ್ಲಿ ಬಿಡಾರ ಹೂಡಿ ಅಲ್ಲಿ ಭಾಷಣ ಮಾಡುತ್ತಿರುವುದೇಕೆ ಎಂಬುದು ಅರ್ಥವಾಗಲಿಲ್ಲ. ಅವರು ನಿಜ ವಾಗಿಯೂ ಬಹು ಸುಶಿಕ್ಷಿತರಾಗಿದ್ದರು ಮತ್ತು ಎಲ್ಲಾ ದೃಷ್ಟಿಯಿಂದಲೂ ಒಂದು ಭಾರತೀಯ ಆಢ್ಯ ಕುಟುಂಬದಲ್ಲಿ ಹುಟ್ಟಿ ಬಂದವರಂತೆ ತೋರುತ್ತಿದ್ದರು. ಇವರು ಇಂಥ ದಾರಿದ್ರ್ಯಸ್ಥಿತಿ ಯುಳ್ಳದ್ದಿರುವುದೇಕೆ ? ಯಾವುದು ಇವರನ್ನು ಇಲ್ಲಿಗೆ ಕರೆತಂದಿತು ? ಕೆಲವು ದಿನಗಳ ತರುವಾಯ ನಾವವರನ್ನು ಭೇಟಿಯಾಗಿ ಇದನ್ನೆಲ್ಲ ತಿಳಿದುಕೊಳ್ಳಬೇಕೆಂದು ಒಂದು ಮಧ್ಯಾಹ್ನ ಅಲ್ಲಿಗೆ ಬಂದೆ.

ಶ್ರೀಲ ಪ್ರಭುಪಾದರು (ಆಮೇಲೆ ನಾನು ಅವರನ್ನು ಹಾಗೆ ಕರೆಯಲಾರಂಭಿಸಿದೆ.) ನನ್ನೊಡನೆ ಮಾತನಾಡದಷ್ಟು ಮಗ್ನರಾಗಿರಲಿಲ್ಲವೆಂಬುದು ನನಗೆ ಆಶ್ಚರ್ಯವನ್ನುಂಟುಮಾಡಿತು. ನಿಜ ಹೇಳುವುದಾದರೆ ಇಡೀ ದಿನ ನನ್ನೊಡನೆ ಮಾತನಾಡಲು ಸಿದ್ಧರಿದ್ದಂತೆ ತೋರಿತು. ಅವರು ಸೌಜನ್ಯಪೂರ್ಣರಾಗಿದ್ದರು, ಮತ್ತು ತಾವು ಭಾರತದಲ್ಲಿ 1959ರಲ್ಲಿ ಸನ್ಯಾಸದೀಕ್ಷೆ ಸ್ವೀಕಾರ ಮಾಡಿದರೆಂದು ಮತ್ತು ಅವರು ತಮ್ಮ ಸ್ವಂತ ಆವಶ್ಯಕತೆಗಳಿಗಾಗಿ ಹಣ ಗಳಿಸುತ್ತಿರಲಿಲ್ಲ ಎಂದು ಮಿತ್ರಭಾವದಿಂದ ನನಗೆ ವಿವರಿಸಿದರು. ಅವರು ಅನೇಕ ವರ್ಷಗಳ ಹಿಂದೆಯೇ ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ತಮ್ಮ ಶಿಕ್ಷಣವನ್ನು ಮುಗಿಸಿದ್ದರು. ಆಮೇಲೆ ಮದುವೆಯಾಗಿ ಮಕ್ಕಳನ್ನು ಪಡೆದು, ಆ ಬಳಿಕ ಭಾರತೀಯ ಸನಾತನ ವೈದಿಕ ಸಂಸ್ಕೃತಿಯ ಸಂಪ್ರದಾಯಕ್ಕನು ಗುಣವಾಗಿ ತಮ್ಮ ಕುಟುಂಬದ ಮತ್ತು ವ್ಯವಹಾರದ ವಿಷಯಗಳನ್ನು ತಮ್ಮ ಜ್ಯೇಷ್ಠ ಪುತ್ರರಿಗೆ

ವಹಿಸಿಕೊಟ್ಟರು. ಸನ್ಯಾಸ ದೀಕ್ಷೆಯನ್ನು ಸ್ವೀಕರಿಸಿದ ಬಳಿಕ, ಅವರು ತಮ್ಮ ಕೆಲವು ಮಿತ್ರರ ಮೂಲಕ (ಸಿಂಧಿಯಾ ಹಡಗು ಕಂಪನಿಯ ಜಲದೂತವೆಂಬ) ಭಾರತೀಯ ಹಡಗಿನಲ್ಲಿ ತಮ್ಮ ಉಚಿತ ಪರ್ಯಟನೆಗೆ ಏರ್ಪಾಡು ಮಾಡಿಕೊಂಡರು. 1965ರ ಸೆಪ್ಟೆಂಬರ್‌ನಲ್ಲಿ ಅವರು ಬೊಂಬಾಯಿಯಿಂದ ಬಾಸ್ಟನ್ನಿಗೆ ಹಡಗಿನಲ್ಲಿ ಬಂದಿಳಿದರು. ಅವರು ಜೊತೆಗೆ ಕೇವಲ ಏಳು ಡಾಲರುಗಳಿಗೆ ಸಮನಾದಷ್ಟು ರೂಪಾಯಿಗಳನ್ನು, ಪುಸ್ತಕಗಳ ಒಂದು ಪೆಟ್ಟಿಗೆಯನ್ನು ಮತ್ತು ಕೆಲವೇ ಬಟ್ಟೆಗಳನ್ನು ತಂದಿದ್ದರು. ಅವರ ಗುರುಗಳಾದ ಶ್ರೀ ಶ್ರೀಮದ್ ಭಕ್ತಿಸಿದ್ಧಾಂತ ಸರಸ್ವತಿ ಠಾಕೂರರು ಇಂಗ್ಲೀಷ್ ಮಾತನಾಡುವ ಲೋಕಕ್ಕೆ ಭಾರತದ ವೇದಸಂದೇಶವನ್ನು ತಲುಪಿಸುವಂತೆ ಅವರಿಗೆ ಆದೇಶಿಸಿದ್ದರು. ಅಂತೆಯೇ, ಅವರು ತಮ್ಮ 69ನೇ ವಯಸ್ಸಿನಲ್ಲಿ ಅಮೇರಿಕೆಗೆ ಬಂದರು. ಅವರು ಅಮೇರಿಕನ್ನರಿಗೆ ಭಾರತೀಯ ಸಂಗೀತ, ಪಾಕಶಾಸ್ತ್ರ, ಭಾಷೆಗಳು ಮತ್ತು ಇತರ ಅನೇಕ ಕಲೆಗಳನ್ನು ಕಲಿಸಬಯಸಿದ್ದರು. ನನಗೆ ಸ್ವಲ್ಪ ಆಶ್ಚರ್ಯವಾಯಿತು.

ಶ್ರೀಲ ಪ್ರಭುಪಾದರು ಒಂದು ಚಿಕ್ಕ ಚಾಪೆಯ ಮೇಲೆ ಮಲಗುತ್ತಿದ್ದುದನ್ನು ನಾನು ಕಂಡೆ. ಅವರು ತಮ್ಮ ಬಟ್ಟೆಗಳನ್ನು ಕೋಣೆಯ ಹಿಂದೆ ಸಾಲಾಗಿ ತೂಗುಹಾಕಿರುತ್ತಿದ್ದರು. ಅವು ಅಲ್ಲಿ ಬೇಸಿಗೆಯ ಬಿಸಿಲಲ್ಲಿ ಒಣಗುತ್ತಿದ್ದವು. ಅವರು ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳುತ್ತಿದ್ದರು ಮತ್ತು ತಾವೇ ಸ್ವತಃ ತಯಾರಿಸಿ ಭಾರತದಿಂದ ತಂದ ಒಂದು ದೇಶೀ ಮಾದರಿಯ ಪಾತ್ರೆಯಲ್ಲಿ ತಮ್ಮ ಆಹಾರವನ್ನು ಬೇಯಿಸಿಕೊಳುತ್ತಿದ್ದರು. ಈ ನಾಲ್ಕು ತರದ ಪಾತ್ರೆಯಲ್ಲಿ ಅವರು ಏಕಕಾಲದಲ್ಲಿ ನಾಲ್ಕು ಬಗೆಯ ಪದಾರ್ಥಗಳನ್ನು ಬೇಯಿಸಿಕೊಳ್ಳುತ್ತಿದ್ದರು. ಅವರ ಸುತ್ತಲೂ ಅವರ ಪ್ರಾಚೀನ ಮಾದರಿಯ ಒಂದು ಟೈಪ್‌ರೈಟರ್, ಮತ್ತು ಕೋಣೆಯ ಮತ್ತೊಂದು ಮೂಲೆಯಲ್ಲಿ ಅಸಂಖ್ಯ ಹಸ್ತಪ್ರತಿಗಳು ಕಾಣುತ್ತಿದ್ದವು. ಅವರು ತಮ್ಮ ಜಾಗೃತಾವಸ್ಥೆಯ ಸರಿಸುಮಾರು 20 ಗಂಟೆಗಳನ್ನು, ನಾನು ಕೊಂಡುಕೊಂಡ ಮೂರು ಸಂಪುಟಗಳ ಮುಂದಿನ ಭಾಗಗಳನ್ನು ಬೆರಳಚ್ಚು ಮಾಡುವಲ್ಲಿ ಸವೆಸುತ್ತಿದ್ದರೆಂದು ನನಗೆ ತಿಳಿದು ಬಂತು. ಅದು ಅವರ ಯೋಜನಾಬದ್ಧವಾದ ಶ್ರೀಮದ್ಭಾಗವತದ 60 ಸಂಪುಟಗಳ ಕೆಲಸವಾಗಿತ್ತು. ಅದು ನಿಜವಾಗಿಯೂ ಭಾರತದ ಆಧ್ಯಾತ್ಮ ಜೀವನದ ವಿಶ್ವಕೋಶವೇ ಆಗಿತ್ತೆಂದು ಹೇಳಬಹುದು. ಅದು ಪ್ರಕಟವಾಗಲಿ ಎಂದು ನಾನು ಅವರಿಗೆ ನನ್ನ ಶುಭ ಹಾರೈಕೆಯನ್ನು ತಿಳಿಸಿದೆ. ಅವರು ನನಗೆ ಶನಿವಾರಗಳಲ್ಲಿ ನಡೆಯುವ ಸಂಸ್ಕೃತ ತರಗತಿಗಳಿಗೆ ಮತ್ತು ಮಂಗಳವಾರ, ಬುಧವಾರ, ಹಾಗೂ ಶುಕ್ರವಾರಗಳಂದು ನಡೆಯುವ ಅವರ ಸಾಯಂಕಾಲದ ಉಪನ್ಯಾಸಗಳಿಗೆ ಬರುವಂತೆ ನನ್ನನ್ನು ಆಹ್ವಾನಿಸಿದರು. ನಾನು ಆಭಾರ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತ ಒಪ್ಪಿಕೊಂಡೆ ಮತ್ತು ಅವರ ಅದ್ಭುತ ಮನೋದಾರ್ಢ್ಯವನ್ನು ಕಂಡು ಸೋಜಿಗಪಡುತ್ತ ಅಲ್ಲಿಂದ ಹೊರಟೆ.

ಕೆಲವು ವಾರಗಳ ತರುವಾಯ—ಪ್ರಾಯಃ 1966ರ ಜುಲೈ ತಿಂಗಳು-ಶ್ರೀಲ ಪ್ರಭುಪಾದರು ಅದಕ್ಕಿಂತ ಗೌರವಾನ್ವಿತವಾದ ಪ್ರದೇಶದಲ್ಲಿ, ಸೆಕೆಂಡ್ ಅವೆನ್ಯೂದಲ್ಲಿ ತಮ್ಮ ವಸತಿಯನ್ನು ಹೂಡಲು ಸಹಾಯಕವಾಗುವ ಭಾಗ್ಯ ನನಗೆ ದೊರೆಯಿತು ಅದೇ ಕಟ್ಟಡದಲ್ಲಿ ನಾನು ಮತ್ತು ನನ್ನ ಸ್ನೇಹಿತರು ಸೇರಿ ನೆಲಮಾಳಿಗೆಯಲ್ಲಿ ಒಂದು ಮಳಿಗೆಯನ್ನು ಮತ್ತು ಮುಂದೆ ಸ್ವಲ್ಪ ಬಯಲಿರುವ ಎರಡನೆ ಮಹಡಿಯ ಒಂದು ಕೋಣೆಯನ್ನು ಅವರಿಗಾಗಿ ಬಾಡಿಗೆ ಗೊತ್ತು ಮಾಡಿದೆವು. ಅವರ ಉಪನ್ಯಾಸಗಳು ಮತ್ತು ಭಜನೆ ಮುಂದುವರಿದವು. ಎರಡು ವಾರ

ಕಳೆಯುವುದರೊಳಗಾಗಿ ಶ್ರೋತೃವೃಂದವು ಬಹಳ ಹೆಚ್ಚಾಗಿ ಆ ಮಾಳಿಗೆ ಮತ್ತು ಆ ಕೋಣೆಯು ಸಾಲದೆ ಹೋಯಿತು. (ಅದು ಈಗಾಗಲೇ ಒಂದು ಮಂದಿರವೇ ಆಗಿತ್ತು.) ಶ್ರೀಲ ಪ್ರಭುಪಾದರು ಆಗಲೇ ಕರಪತ್ರಗಳನ್ನು ಮುದ್ರಿಸಿ ಹಂಚುವಂತೆ ತಮ್ಮ ಶಿಷ್ಯರಿಗೆ ಆದೇಶ ನೀಡಿದ್ದರು, ಮತ್ತು ಒಂದು ಧ್ವನಿಮುದ್ರಣ ಕಂಪೆನಿಯವನು ಅವರನ್ನು ಹರೇಕೃಷ್ಣ ಸಂಕೀರ್ತನೆಯನ್ನು ಎಲ್ ಪಿ. ರಿಕಾರ್ಡ್‌ನಲ್ಲಿ ಧ್ವನಿಮುದ್ರಣ ಮಾಡಲು ಆಹ್ವಾನಿಸಿದ್ದನು. ಈ ರಿಕಾರ್ಡು ಬಹು ಯಶಸ್ವಿಯಾಯಿತು. ಅವರು ತಮ್ಮ ಹೊಸ ನಿವಾಸದಲ್ಲಿ ಸಂಕೀರ್ತನೆಯ, ವೈದಿಕ ತತ್ವಜ್ಞಾನದ, ಸಂಗೀತದ, ಜಪಧ್ಯಾನದ, ಲಲಿತಕಲೆಯ ಮತ್ತು ಪಾಕಶಾಸ್ತ್ರದ ಶಿಕ್ಷಣ ನೀಡತೊಡಗಿದರು. ಪ್ರಾರಂಭದಲ್ಲಿ ತಾವೇ ಸ್ವತಃ ಅಡುಗೆ ಮಾಡಿ ತೋರಿಸಿದರು. ಅವರು ಯಾವಾಗಲೂ ನಿದರ್ಶನ ದಿಂದ ಶಿಕ್ಷಣ ನೀಡುತ್ತಿದ್ದರು. ಫಲಿತಾಂಶಗಳು ವಿಸ್ಮಯಕಾರಿಯಾಗಿದ್ದವು. ಅವರು ಕಲಿಸಿ ದಂಥ ಶಾಖಾಹಾರಗಳನ್ನು ನಾನು ಹಿಂದೆಂದೂ ಸವಿದಿರಲಿಲ್ಲ. (ಶ್ರೀಲ ಪ್ರಭುಪಾದರೇ ಸ್ವತಃ ಬಡಿಸುತ್ತಿದ್ದರು!) ಊಟವು ಸಾಮಾನ್ಯವಾಗಿ ಅನ್ನ, ತರಕಾರಿ, ಚಪಾತಿ ಮತ್ತು ಬೇಳೆಯ ಸಾರು–ಇವುಗಳಿಂದ ಕೂಡಿರುತ್ತಿತ್ತು. ಅವರು ಉಪಯೋಗಿಸುತ್ತಿದ್ದ ಮಸಾಲೆಗಳು, ಅಡುಗೆಗೆ ಬಳಸುತ್ತಿದ್ದ ತುಪ್ಪ, ಮತ್ತು ಅಡಿಗೆಗೆ ಅಗತ್ಯವಾದ ಶಾಖ ಮತ್ತು ಇತರ ವಿವರಗಳಿಗೆ ನೀಡುತ್ತಿದ್ದ ತೀವ್ರ ಗಮನದ ಪರಿಣಾಮವಾಗಿ ನಾನು ಹಿಂದೆಂದೂ ನೋಡಿರದಂಥ ರುಚಿಕರವಾದ ಆಹಾರ ಸಿದ್ಧವಾಗುತ್ತಿತ್ತು. 'ಪ್ರಸಾದ'ವೆಂದು ಕರೆಯುತ್ತಿದ್ದ ಆ ಊಟದ ಬಗ್ಗೆ ಇತರ ಅಭಿ–ಪ್ರಾಯಗಳೂ ಕೂಡ ಸಂಪೂರ್ಣವಾದ ನನ್ನ ಅಭಿಪ್ರಾಯವನ್ನೇ ಅನುಮೋದಿಸುವಂತಿದ್ದವು. ಚೀನಾಭಾಷೆಯ ತಜ್ಞನಾದ ಶಾಂತಿ ಶಿಬಿರ ಕಾರ್ಯಕರ್ತನೊಬ್ಬನು ಭಾರತೀಯ ಶೈಲಿಯ ವರ್ಣ ಚಿತ್ರಣವನ್ನು ಶ್ರೀಲ ಪ್ರಭುಪಾದರಿಂದ ಕಲಿಯುತ್ತಿದ್ದನು. ಅವನ ಉತ್ತಮ ಗುಣಮಟ್ಟದ ಮೊದಲ ವರ್ಣಚಿತ್ರಗಳನ್ನು ಕಂಡು ನಾನು ಬೆರಗಾದೆ.

ತಾತ್ವಿಕ ಚರ್ಚೆ ಮತ್ತು ತರ್ಕದಲ್ಲಿ ಶ್ರೀಲ ಪ್ರಭುಪಾದರು ಅಜೇಯ್ಯರು ಮತ್ತು ಅವಿಶ್ರಾಂತರೂ ಆಗಿದ್ದರು. ಚರ್ಚೆಗಾಗಿ ಅವರು ತಮ್ಮ ಭಾಷಾಂತರ ಕಾರ್ಯವನ್ನು ನಿಲ್ಲಿಸಿ ಬಿಡುತ್ತಿದ್ದರು. ಚರ್ಚೆಗಳು ಎಂಟೆಂಟು ಗಂಟೆಗಳಷ್ಟು ದೀರ್ಘಕಾಲ ನಡೆಯುತ್ತಿದ್ದವು. ಕೆಲವು ಸಲ ಅವರು ಕೆಲಸ ಮಾಡುತ್ತಿದ್ದ, ಊಟ ಮಾಡುತ್ತಿದ್ದ, ಅತಿ ಚೊಕ್ಕಟವಾದ ಚಿಕ್ಕ ಕೋಣೆ ಯಲ್ಲಿಯೇ ಏಕಕಾಲದಲ್ಲಿ ಏಳೆಂಟು ಜನ ಕಿಕ್ಕಿರಿದು ಸೇರುತ್ತಿದ್ದರು. ಪ್ರಭುಪಾದರು ಎರಡು ಅಂಗುಲ ದಪ್ಪನಾದ ಮೆತ್ತೆಯ ಮೇಲೆ ಮಲಗುತ್ತಿದ್ದರು. ಶ್ರೀಲ ಪ್ರಭುಪಾದರು ಯಾವಾಗಲೂ "ಸರಳ ಜೀವನ ಮತ್ತು ಉದಾತ್ತ ವಿಚಾರ" ಎಂಬ ತತ್ವವನ್ನು ಒತ್ತಿ ಹೇಳುತ್ತಿದ್ದರು. ಅದಕ್ಕೆ ಅವರೇ ಉದಾಹರಣೆಯಾಗಿದ್ದರು. ಆಧ್ಯಾತ್ಮಿಕ ಜೀವನವೆಂಬುದು ಯುಕ್ತಿ ಮತ್ತು ತರ್ಕಗಳಿಂದ ಸಿದ್ಧಮಾಡಬಹುದಾದಂಥ ಒಂದು ವಿಜ್ಞಾನವಾಗಿದೆ. ಅದು ಕೇವಲ ಭಾವನಾತ್ಮಕ ಅಥವಾ ಅಂಧಶ್ರದ್ಧೆಯ ವಿಷಯವಲ್ಲ ಎಂಬುದನ್ನು ಅವರು ಒತ್ತಿ ಒತ್ತಿ ಹೇಳುತ್ತಿದ್ದರು. ಅವರು ಒಂದು ಹೊಸ ಪತ್ರಿಕೆಯನ್ನು ಪ್ರಾರಂಭಿಸಿದರು. 1936ರ ಶಿಶಿರದಲ್ಲಿ ನ್ಯೂಯಾರ್ಕ್ ಟೈಮ್ಸ್ ನವರು ಅವರ ಮತ್ತು ಅವರ ಶಿಷ್ಯರ ಬಗ್ಗೆ ಒಂದು ಮೆಚ್ಚುಗೆಯ ಚಿತ್ರಕತೆಯನ್ನು ಪ್ರಕಟಿಸಿ ದರು. ಕೆಲವೇ ದಿನಗಳ ತರುವಾಯ ದೂರದರ್ಶನ ತಂಡಗಳು ಅವರನ್ನು ಕಂಡು ಅವರ ಬಗ್ಗೆ ಸಾಕ್ಷ್ಯಚಿತ್ರಕತೆಗಳನ್ನು ಬಿತ್ತರಿಸಿದರು.

ಶ್ರೀಲ ಪ್ರಭುಪಾದರು ಒಬ್ಬ ಕುತೂಹಲಕಾರಿ ವ್ಯಕ್ತಿಯಾಗಿದ್ದರು. ಯೋಗ ಮತ್ತು ಸಂಕೀರ್ತನೆಯ ಸ್ವಯಂಲಾಭದ ನನ್ನ ಇಚ್ಛೆಯಿಂದಲೋ ಅಥವಾ ಕೇವಲ ಒಂದು ಹೊಸ ಆಕರ್ಷಣೆಯಿಂದಲೋ ನಾನು ಅವರ ಪ್ರಗತಿಪರ ಗತಿಯನ್ನು ಹೆಜ್ಜೆಹೆಜ್ಜೆಗೂ ಅನುಸರಿಸುತಾ ನಡೆಯಲಿಚ್ಛಿಸಿದೆನೆಂದು ನನಗೆ ಗೊತ್ತಿದೆ. ಅವರ ವಿಸ್ತರಣಾ ಯೋಜನೆಗಳು ಸಾಹಸಪೂರ್ಣವೂ, ಮತ್ತು ಊಹಾತೀತವೂ ಆಗಿರುತ್ತಿದ್ದವು. ಆದರೆ ಸತ್ಯಸಂಗತಿಯೆಂದರೆ, ಅವು ಸದಾ ಅದ್ಭುತ ಯಶಸ್ಸುಗಳಿಸುತ್ತಿದ್ದವೆಂದು ಕಂಡುಬರುತ್ತಿತ್ತು. ಅವರು 70ರ ಅಂಚಿನಲ್ಲಿದ್ದಂತೆ ತೋರುತ್ತಿದ್ದರು, ಮತ್ತು ಅವರು ಅಮೆರಿಕಕ್ಕೆ ಹೊಸಬರು. ಅವರು ಅಮೆರಿಕಕ್ಕೆ ಪ್ರಸ್ತುತಃ ನಿಷ್ಕಿಂಚನರಾಗಿಯೇ ಬಂದಿದ್ದರು. ಆದರೂ ಕೆಲವೇ ತಿಂಗಳುಗಳಲ್ಲಿ ಅವರು ಏಕಾಕಿಯಾಗಿ ಒಂದು ಮಹಾ ಆಂದೋಲನವನ್ನೇ ಪ್ರಾರಂಭಿಸಿದರು : ಅದು ದಿಗ್ಭ್ರಮೆಗೊಳಿಸುವಂತಿತ್ತು.

ಆಗಸ್ಟ್ ತಿಂಗಳಿನಲ್ಲಿ ಒಂದು ಪ್ರಾತಃಕಾಲ ಸೆಕೆಂಡ್ ಅವೆನ್ಯೂ ಮಳಿಗೆಯ ಮುಂಭಾಗದ ಮಂದಿರದಲ್ಲಿ "ಈ ದಿನ ಭಗವಾನ್ ಕೃಷ್ಣನು ಅವತರಿಸಿದ ದಿನ" ಎಂದು ಶ್ರೀಲ ಪ್ರಭುಪಾದರು ನಮಗೆ ಹೇಳಿದರು. ನಾವು 24 ಗಂಟೆಗಳ ಕಾಲ ಉಪವಾಸದಿಂದಿದ್ದು ಮಂದಿರದೊಳಗೆಯೇ ಇರಬೇಕೆಂದಾಯಿತು. ಆ ದಿನ ಸಾಯಂಕಾಲ ಭಾರತದಿಂದ ಕೆಲವು ಜನ ಅಲ್ಲಿಗೆ ಸಂದರ್ಶನ ವಿತ್ತರು. ಅವರಲ್ಲೊಬ್ಬನು ಬಾಷ್ಪಪೂರಿತನಾಗಿ ಜಗತ್ತಿನ ಈ ಭಾಗದಲ್ಲಿ ಒಂದು ಚಿಕ್ಕ ಭಾರತವನ್ನು ಕಂಡು ಅಪರಿಮಿತ ಆನಂದೋದ್ರೇಕವನ್ನು ವ್ಯಕ್ತಪಡಿಸುತ್ತಿದ್ದನು. ಅವನು ಕನಸಿನಲ್ಲಿಯೂ ಇಂಥದನ್ನು ಕಾಣುವನೆಂದು ಭಾವಿಸಿರಲಿಲ್ಲ. ಅವನು ಶ್ರೀಲ ಪ್ರಭುಪಾದರ ಅತ್ಯಂತ ಗುಣಗಾನ ಮಾಡಿ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸಿ, ಕಾಣಿಕೆ ನೀಡುತ್ತ ಅವರ ಪಾದಗಳಿಗೆ ನಮಸ್ಕರಿಸಿದನು. ಇದು ಎಲ್ಲರಿಗೂ ಹೃದಯಸ್ಪರ್ಶಿಯೆನಿಸಿತು. ಆಮೇಲೆ ಶ್ರೀಲ ಪ್ರಭುಪಾದರು ಆ ಸದ್ಗೃಹಸ್ಥನೊಂದಿಗೆ ಹಿಂದಿಯಲ್ಲಿ ಮಾತನಾಡಿದರು. ನನಗೆ ಅದು ಅರ್ಥವಾಗುವಂತಿರಲಿಲ್ಲ. ಆದರೂ ಅವರ ಪ್ರತಿಯೊಂದು ಅಭಿವ್ಯಕ್ತಿಯು ಮತ್ತು ಹಾವಭಾವಗಳು ಹೃದಯಸ್ಪರ್ಶಿಯಾಗಿದ್ದುವೆಂಬುದನ್ನು ನಾನು ಕಂಡುಕೊಂಡೆ.

ಅನಂತರ ಆ ವರ್ಷ ಸ್ಯಾನ್‌ಫ್ರಾನ್ಸಿಸ್ಕೋದಲ್ಲಿದ್ದಾಗ ನಾನು ಶ್ರೀಲ ಪ್ರಭುಪಾದರಿಗೆ ಪ್ರಥಮ ಭಾರಿಗೆ ವಿಮಾನದ ಟಿಕೆಟ್ಟು ಕಳಿಸಿದೆ. ಅವರು ನ್ಯೂಯಾರ್ಕ್‌ನಿಂದ ಹೊರಟು ಬಂದರು. ನಾವು ಸಾಕಷ್ಟು ಗುಂಪಸೇರಿ ಅವರು ವಿಮಾನದಿಂದಿಳಿದ ಸ್ಥಳದಲ್ಲಿ ಹರೇ ಕೃಷ್ಣ ಮಂತ್ರವನ್ನು ಕೀರ್ತಿಸುತ್ತಾ ಅವರನ್ನು ಸ್ವಾಗತಿಸಿದೆವು. ಆಮೇಲೆ ನಾವು ಅವರನ್ನು ಗೋಲ್ಡನ್ ಗೇಟ್ ಪಾರ್ಕ್ ಪೂರ್ವತುದಿಯಲ್ಲಿರುವ ಹೊಸದಾಗಿ ಬಾಡಿಗೆಗೆ ಹಿಡಿದ ಒಂದು ಮಳಿಗೆಯ ಮುಂಭಾಗದ ಮಂದಿರಕ್ಕೆ ಕರೆದೊಯ್ದೆವು ಅದು ಸರಿಸುಮಾರು ನ್ಯೂಯಾರ್ಕ್‌ನಲ್ಲಿರುವ ಮಂದಿರದಂತೆಯೇ ಇತ್ತು. ನಾವು ಆ ಮಾದರಿಯನ್ನೇ ಅನುಸರಿಸಿಕೊಂಡೆವು ಶ್ರೀಲ ಪ್ರಭುಪಾದರು ಅತ್ಯಂತ ಹರ್ಷಭರಿತರಾಗಿದ್ದರು.

ಕೆಲವು ವಾರಗಳ ತರುವಾಯ ಶ್ರೀಲ ಪ್ರಭುಪಾದರ ಮೊದಲನೆ ಮೃದಂಗವು ಭಾರತದಿಂದ ಸ್ಯಾನ್ ಫ್ರಾನ್ಸಿಸ್ಕೋಗೆ ಬಂದಿಳಿಯಿತು. ನಾನು ಶ್ರೀಲ ಪ್ರಭುಪಾದರ ಕೋಣೆಗೆ ಹೋಗಿ ಆ ವಿಷಯವನ್ನು ಅವರಿಗೆ ತಿಳಿಸಿದಾಗ ಅವರು ಕಣ್ಣರಳಿಸಿ ಕೂಡಲೇ ಕೆಳಗೆ ಹೋಗಿ

ಆ ಪೆಟ್ಟಿಗೆಯನ್ನು ತೆರೆಯಲು ನನಗೆ ಕಾತುರ ಧ್ವನಿಯಲ್ಲಿ ಹೇಳಿದರು. ನಾನು ಕೂಡಲೇ ಲಿಫ್ಟ್‌ನಲ್ಲಿ ಕೆಳಮಾಳಿಗೆಗೆ ಇಳಿದೆ ಮತ್ತು ಮುಂಬಾಗಿಲಿಗೆ ಹೋಗುತ್ತಿದ್ದಾಗ ಅಲ್ಲಿ ಶ್ರೀಲ ಪ್ರಭುಪಾದರನ್ನು ಕಂಡೆ. ಮೃದಂಗವನ್ನು ನೋಡಲು ಅತ್ಯಂತ ಕಾತುರರಾಗಿದ್ದ ಅವರು ಅಷ್ಟು ಬೇಗನೆ ಮೆಟ್ಟಿಲುಗಳನ್ನು ಇಳಿದುಕೊಂಡು ಲಿಫ್ಟಿಗಿಂತ ಮುಂಚೆಯೇ ಅಲ್ಲಿ ಬಂದಿದ್ದರು. ಪೆಟ್ಟಿಗೆಯನ್ನು ತೆಗೆಯಲು ಹೇಳಿದರು. ತಾವು ಉಟ್ಟಿದ್ದ ಒಂದು ಕಾವಿ ವಸ್ತ್ರದ ತುಂಡನ್ನು ಹರಿದು ತೆಗೆದು ಅದರ ವಾದನಾಗ್ರಗಳನ್ನು ಬಿಟ್ಟು ಅದನ್ನು ತಮ್ಮ ಆ ಬಟ್ಟೆಯಲ್ಲಿ ಸುತ್ತಿದರು."ಇದನ್ನು ತೆಗೆಯತಕ್ಕುದಲ್ಲ" ಎಂದು ನುಡಿದರು. ಆಮೇಲೆ ಅದನ್ನು ಹೇಗೆ ನುಡಿಸಬೇಕು ಮತ್ತು ಆ ವಾದನವನ್ನು ಹೇಗೆ ಜೋಕೆಯಿಂದ ನೋಡಿಕೊಳ್ಳಬೇಕು ಎಂಬ ಬಗ್ಗೆ ವಿವರವಾದ ಸೂಚನೆಗಳನ್ನು ನೀಡಿದರು.

1967ರಲ್ಲಿ ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಶ್ರೀಲ ಪ್ರಭುಪಾದರು ರಥಯಾತ್ರೆಯನ್ನು ಉದ್ಘಾಟಿಸಿದರು. ಅದು ಉತ್ಸವಗಳಲ್ಲಿ ಒಂದಾಗಿತ್ತು. ಅದರ ಕೀರ್ತಿ ಅವರಿಗೇ ಸಲ್ಲಬೇಕು. ಅದನ್ನು ಈಗ ವಿಶ್ವದ ಎಲ್ಲೆಡೆಯೂ ಆಚರಿಸಲಾಗುತ್ತಿದೆ. ಭಾರತದಲ್ಲಿ ಎರಡು ಸಾವಿರ ವರ್ಷಗಳಿಂದ ಜಗನ್ನಾಥಪುರಿಯಲ್ಲಿ ರಥಯಾತ್ರೆಯು ಪ್ರತಿವರ್ಷವೂ ನಡೆದುಕೊಂಡು ಬರುತ್ತಿದೆ. 1975ರ ಹೊತ್ತಿಗೆ ಅದು ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಎಷ್ಟು ಜನಪ್ರಿಯವಾಗಿತ್ತೆಂದರೆ, ಅಲ್ಲಿಯ ಮೇಯರರು (ನಗರಪಿತೃ) "ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ರಥಯಾತ್ರಾ ದಿನಾಚರಣೆ" ಎಂಬ ಔಪಚಾರಿಕ ಘೋಷಣೆಯೊಂದನ್ನು ಹೊರಡಿಸಿದರು.

1966ರ ಕೊನೆಕೊನೆಯಲ್ಲಿ ಶ್ರೀಲ ಪ್ರಭುಪಾದರು ಶಿಷ್ಯರನ್ನು ಸ್ವೀಕರಿಸಲಾರಂಭಿಸಿದರು. ಅವರು, ತಮ್ಮನ್ನು ಸರ್ವಥಾ ದೇವರೆಂದು ಭಾವಿಸಕೂಡದು, ತಾನು ದೇವರ ಸೇವಕ ಎಂದು ಅವರು ಒಡನೆಯೇ ಪ್ರತಿಯೊಬ್ಬರಿಗೂ ತಿಳಿಹೇಳಿದರು ಮತ್ತು ತಮ್ಮನ್ನು ದೇವರೆಂದು ಪೂಜಿಸಬೇಕೆಂದು ತಮ್ಮ ಶಿಷ್ಯರಿಗೆ ಹೇಳುವ ಇತರ ಸ್ವಯಂ ಆರೋಪಿತ ಗುರುಗಳನ್ನು ಖಂಡಿಸಿದರು. "ಇವರು ಅಗ್ಗದ ದೇವರುಗಳು" ಎಂದು ಅವರು ಹೇಳುತ್ತಿದ್ದರು. ಒಂದು ದಿನ "ತಾವು ದೇವರೇ ?" ಎಂದು ಒಬ್ಬನು ಅವರನ್ನು ಕೇಳಿದಾಗ "ಇಲ್ಲ ನಾನು ದೇವರಲ್ಲ, ನಾನು ದೇವರ ಒಬ್ಬ ಸೇವಕ" ಎಂದು ಉತ್ತರಿಸಿದರು. ಅವರು ಕ್ಷಣಕಾಲ ಚಿಂತನೆ ಮಾಡಿ "ನಿಜವಾಗಿ ಹೇಳುವುದಾದರೆ ನಾನು ದೇವರ ಸೇವಕನೂ ಅಲ್ಲ. ನಾನು ದೇವರ ಸೇವಕನಾಗಲು ಯತ್ನಿಸುತ್ತಿದ್ದೇನೆ. ದೇವರ ಸೇವಕನು ಸಾಧಾರಣನಲ್ಲ" ಎಂದು ನುಡಿದರು.

ತಮ್ಮ ಎಪ್ಪತ್ತರ ಮಧ್ಯಭಾಗದಲ್ಲಿ ಶ್ರೀಲ ಪ್ರಭುಪಾದರ ಭಾಷಾಂತರ ಮತ್ತು ಪ್ರಕಟನಾ ಕಾರ್ಯವು ಇದ್ದಕ್ಕಿದ್ದ ಹಾಗೇ ಚುರುಕುಗೊಂಡಿತು. ವಿಶ್ವದ ಎಲ್ಲೆಡೆಯಿಂದ ವಿದ್ವಾಂಸರು ಅವರ ಕೃತಿಗಳನ್ನು ಕುರಿತು ಪ್ರಶಂಸನೆಯ ಸುರಿಮಳೆ ಕರೆದರು ಮತ್ತು ಅಮೆರಿಕದ ಸರಿಸುಮಾರು ಎಲ್ಲ ವಿಶ್ವವಿದ್ಯಾನಿಲಯಗಳೂ, ಕಾಲೇಜುಗಳೂ ಅವರ ಗ್ರಂಥಗಳನ್ನು ಶ್ರೇಷ್ಠ ಪುಟ್ಟದ ಪಠ್ಯಪುಸ್ತಕಗಳನ್ನಾಗಿ ಅಂಗೀಕರಿಸಿದವು. ಅವರು ಒಟ್ಟು 80 ಗ್ರಂಥಗಳನ್ನು ರಚಿಸಿದರು. ಅವರ ಶಿಷ್ಯರು 25 ಭಾಷೆಗಳಿಗೆ ಅದನ್ನು ಅನುವಾದಿಸಿದರು ಮತ್ತು ಸುಮಾರು 55 ದಶಲಕ್ಷ ಪ್ರತಿಗಳು ಹಂಚಿಹೋದವು. ಅವರು ವಿಶ್ವದಾದ್ಯಂತ ಒಂದುನೂರ ಎಂಟು ಮಂದಿರ

ಗಳನ್ನು ಸ್ಥಾಪಿಸಿದರು. ಅವರಿಗೆ ಸುಮಾರು 10 ಸಾವಿರ ಜನ ದೀಕ್ಷಾಬದ್ಧ ಶಿಷ್ಯರಾದರು ಮತ್ತು ಲಕ್ಷೋಪಲಕ್ಷ ಜನ ಅವರ ಭಕ್ತವೃಂದವನ್ನು ಸೇರಿದರು. ಶ್ರೀಲ ಪ್ರಭುಪಾದರು ಈ ಭೂಮಿಯ ಮೇಲೆ ಬದುಕಿದಷ್ಟು ಕಾಲ–ತಮ್ಮ 81ನೆಯ ವರ್ಷದ ಕೊನೆಯ ದಿನದವರೆಗೂ-ಕೃತಿ ರಚನೆ ಮತ್ತು ಭಾಷಾಂತರ ಕಾರ್ಯದಲ್ಲಿ ನಿರತರಾಗಿದ್ದರು.

ಶ್ರೀಲ ಪ್ರಭುಪಾದರು ಕೇವಲ ಒಬ್ಬ ಪೌರ್ವಾತ್ಯ ವಿದ್ವಾಂಸ, ಗುರು, ಅನುಭಾವಿ, ಯೋಗಶಿಕ್ಷಕ ಅಥವಾ ಧ್ಯಾನೋಪದೇಶಕರಾಗಿರಲಿಲ್ಲ. ಅವರು ಒಂದು ಪೂರ್ಣ ಸಂಸ್ಕೃತಿಯ ಪ್ರತೀಕವಾಗಿದ್ದರು ಮತ್ತು ಅವರು ಆ ಸಂಸ್ಕೃತಿಯನ್ನು ಪಶ್ಚಿಮದಲ್ಲಿ ಪ್ರತಿಷ್ಠಾಪಿಸಿದರು. ನನ್ನ ಮತ್ತು ಇತರ ಅನೇಕರ ಮಟ್ಟಿಗೆ ಅವರು ತಮ್ಮ ಸಕಲ ಸುಖಗಳನ್ನು ತೊರೆದು ಸದಾ ಪರರ ಹಿತಕ್ಕಾಗಿಯೇ ಶ್ರಮಿಸುವ ಮಹಾನುಭಾವರಾಗಿದ್ದರು. ಅವರಿಗೆ ಸ್ವಂತ ಜೀವನವೆಂಬುದೇ ಇರಲಿಲ್ಲ. ಪರಾರ್ಥವೇ ಅವರ ಜೀವನವಾಗಿತ್ತು. ಅವರು ಅಧ್ಯಾತ್ಮ ವಿದ್ಯೆ, ತತ್ವಜ್ಞಾನ, ವ್ಯವಹಾರ ಜ್ಞಾನ, ಕಲೆಗಳು, ಭಾಷೆಗಳು, ವೈದಿಕ ಜೀವನ ಪದ್ಧತಿ–ನೈರ್ಮಲ್ಯ, ಪೌಷ್ಟಿಕ ಆಹಾರ, ಔಷಧೋಪಚಾರ, ಸೌಜನ್ಯ, ಕುಟುಂಬ ಜೀವನ, ಕ್ಷೇತ್ರವ್ಯವಸಾಯ, ಸಾಮಾಜಿಕ ಸಂಘಟನೆ, ಶಿಕ್ಷಣ, ಅರ್ಥಶಾಸ್ತ್ರ – ಇಷ್ಟೇ ಅಲ್ಲದೆ ಇನ್ನೂ ಅನೇಕ ವಿಷಯಗಳನ್ನು ಜನರಿಗೆ ಬೋಧಿಸಿದರು. ನನ್ನ ಮಟ್ಟಿಗೆ ಅವರು ಒಬ್ಬ ಮಹಾ ಆಚಾರ್ಯರೂ, ತಂದೆಯೂ ಮತ್ತು ನನ್ನ ಅತ್ಯಂತ ಪ್ರೀತಿಯ ಸಖರೂ ಆಗಿದ್ದರು.

ನಾನು ಶ್ರೀಲ ಪ್ರಭುಪಾದರಿಗೆ ಅತ್ಯಂತ ಋಣಿಯಾಗಿದ್ದೇನೆ. ನಾನು ಅವರ ಋಣವನ್ನೆಂದೂ ತೀರಿಸಲಾರೆ, ಆದರೆ ಅವರ ಗ್ರಂಥಗಳನ್ನು ಪ್ರಕಟಿಸಿ ಹಂಚುವ ಕಾರ್ಯದಲ್ಲಿ-ಅದು ಅವರ ಹಿರಿಯ ಆಸೆಯಾಗಿದ್ದು – ಅದನ್ನು ಪೂರೈಸುವಲ್ಲಿ ಅವರ ಇತರ ಅನೇಕ ಶಿಷ್ಯರೊಂದಿಗೆ ನಾನೂ ನೇರ ನನ್ನ ಕೃತಜ್ಞತೆಯನ್ನು ಸಲ್ಲಿಸಬಹುದಷ್ಟೆ.

ಶ್ರೀಲ ಪ್ರಭುಪಾದರು ಒಂದು ಸಲ "ನಾನು ಸಾಯುವುದೇ ಇಲ್ಲ, ನನ್ನ ಗ್ರಂಥಗಳಲ್ಲಿ ನಾನು ಬದುಕಿರುತ್ತೇನೆ" ಎಂದು ನುಡಿದರು. ಅವರು 1977ರ ನವಂಬರ್ 14 ರಂದು ಇಹಲೋಕ ಯಾತ್ರೆಯನ್ನು ಮುಗಿಸಿದರು. ಆದರೆ ಅವರು ಅನಂತುಕಾಲ ಜೀವಿಸಿರುತ್ತಾರೆ ಎಂಬುದು ಖಂಡಿತ.

**ವೈ ಬೀಲ್ ಗ್ರಾಂಟ್ (ಮುಕುಂದ ದಾಸ)**

# ಪ್ರಸ್ತಾವನೆ

"ಶ್ರೀಲ ಪ್ರಭುಪಾದರೆಂದರೆ ಯಾರು ?" ಎಂದು ಅನೇಕ ಸಲ ಜನ ಕೇಳುತ್ತಾರೆ. ಈ ಪ್ರಶ್ನೆಯನ್ನು ಉತ್ತರಿಸುವುದು ಕಷ್ಟ. ಕಾರಣವೇಂದರೆ, ಶ್ರೀಲ ಪ್ರಭುಪಾದರಿಗೆ ಯಾವ ಸಾಂಪ್ರದಾಯಿಕ ನಾಮಾಂಕಿತಗಳೂ ಇರಲಿಲ್ಲ. ಅನೇಕಸಲ ಜನ ಅವರನ್ನು ಒಬ್ಬ ವಿದ್ವಾಂಸ, ಒಬ್ಬ ತತ್ವಜ್ಞಾನಿ, ಸಾಂಸ್ಕೃತಿಕ ದೂತ, ಒಬ್ಬ ಪ್ರಚಂಡ ಲೇಖಕ, ಒಬ್ಬ ಧರ್ಮಗುರು, ಒಬ್ಬ ಅಧ್ಯಾತ್ಮ ಉಪದೇಶಕ, ಒಬ್ಬ ಸಮಾಜ ಸುಧಾರಕ ಮತ್ತು ಒಬ್ಬ ಪುಣ್ಯಪುರುಷ ಎಂದು ಕರೆಯುತ್ತಿದ್ದರು. ನಿಜವಾಗಿ ಅವರು ಇದೆಲ್ಲಕ್ಕಿಂತ ಇನ್ನು ಹೆಚ್ಚಾಗಿದ್ದರು. ನಾವು ಪಾಶ್ಚಾತ್ಯರು ಕೂಡಲೇ ಸುಖಜೀವ ನಡೆಸಲು ತವಕಪಡುತ್ತಿರುವವರು ಮತ್ತು ಅಧ್ಯಾತ್ಮ ವಿಷಯಗಳಿಗೆ ಹೊಸಬರು. ಇವುಗಳನ್ನು ದುರುಪಯೋಗಿಸಿಕೊಂಡು ಸಪ್ಪೆಯಾದ ಪೌರ್ವಾತ್ಯ ಅಧ್ಯಾತ್ಮ ಬೋಧನೆ ಮಾಡಲು ಆಧುನಿಕ ಹವ್ಯಾಸಿ "ಗುರು"ಗಳನೇಕರು ಹೊರಟಿದ್ದಾರೆ. ಶ್ರೀಲ ಪ್ರಭುಪಾದರನ್ನು ಯಾರೂ ಎಂದೂ ಖಂಡಿತ ಇಂತಹ "ಗುರು"ಗಳೊಂದಿಗೆ ಪರಿಗಣಿಸುವಂತಿರಲಿಲ್ಲ. ಶ್ರೀಲ ಪ್ರಭುಪಾದರು ನಿಜವಾಗಿ ಅತ್ಯಂತ ಜ್ಞಾನವುಳ್ಳವರು ಮತ್ತು ಅಧ್ಯಾತ್ಮ ಸೂಕ್ಷ್ಮ ಸಂವೇದನೆಯ ಸಾಧುಗಳಾಗಿದ್ದರು. ನಿಜವಾದ ಆಧ್ಯಾತ್ಮಿಕ ದೃಷ್ಟಿಯ ಅಪಾರ ಕೊರತೆಯಿರುವ ನಮ್ಮ ಸಮಾಜವನ್ನು ಕಂಡು ಅವರು ಬಹಳಷ್ಟು ಚಿಂತಿಸುತ್ತಿದ್ದರು ಮತ್ತು ಮರುಕಗೊಳ್ಳುತ್ತಿದ್ದರು.

ಮಾನವಕುಲದ ಉದ್ಧಾರಕ್ಕಾಗಿ ಶ್ರೀಲ ಪ್ರಭುಪಾದರು ಭಾರತದ ಮಹಾಪ್ರಾಚೀನ ಶಾಸ್ತ್ರಗಳ ಸುಮಾರು 80 ಸಂಪುಟಗಳಷ್ಟು ಭಾಷಾಂತರಗಳನ್ನು, ಸಾರಸಂಗ್ರಹಗಳನ್ನು ರಚಿಸಿದರು. ಅವರ ಗ್ರಂಥಗಳು ಅನೇಕ ವಿದೇಶೀ ಭಾಷೆಗಳಲ್ಲಿ ಮತ್ತು ಇಂಗ್ಲೀಷಿನಲ್ಲಿ ಅಚ್ಚಾಗಿವೆ ಅಲ್ಲದೆ, 1944ರಲ್ಲಿ ಶ್ರೀಲ ಪ್ರಭುಪಾದರು ತಮ್ಮ ಸ್ವಯಂ ಪ್ರಯತ್ನದಿಂದ **ಮರಳಿ ದೇವತ್ವದೆಡೆಗೆ** ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರು. ಅದು ಈಗ ಇಂಗ್ಲೀಷ್ ಭಾಷೆಯೊಂದರಲ್ಲಿಯೇ ತಿಂಗಳಿಗೆ ಐದು ಲಕ್ಷಕ್ಕಿಂತ ಹೆಚ್ಚು ಖರ್ಚಾಗುತ್ತಿದೆ. ಆತ್ಮಸಾಕ್ಷಾತ್ಕಾರ ವಿಜ್ಞಾನ ಎಂಬ ಈ ಗ್ರಂಥಕ್ಕೆ ಆಯ್ದ ಸರಿಸುಮಾರು ಎಲ್ಲ ಸಂದರ್ಶನಗಳು, ಉಪನ್ಯಾಸಗಳು, ನಿಬಂಧನೆಗಳು ಮತ್ತು ಪತ್ರಗಳು ಮೊದಲ ಬಾರಿಗೆ **ಮರಳಿ ದೇವತ್ವದೆಡೆಗೆ** ಎಂಬ ಪತ್ರಿಕೆಯಲ್ಲಿಯೇ ಪ್ರಕಟವಾದುವು.

ಸಾವಿರಾರು ವರ್ಷಗಳ ಹಿಂದೆ ವ್ಯಾಸಮಹರ್ಷಿಗಳು ನೀಡಿದ ಸಂದೇಶವನ್ನೇ ಎಂದರೆ ಪ್ರಾಚೀನ ಭಾರತದ ವೈದಿಕ ಸಂದೇಶವನ್ನೇ ಶ್ರೀಲ ಪ್ರಭುಪಾದರು ಈ ಪುಟಗಳಲ್ಲಿ ನೀಡಿದ್ದಾರೆಂದು ಹೇಳಬಹುದು. ಅವರು ಬಹುಮಟ್ಟಿಗೆ ಲೀಲಾಜಾಲವಾಗಿ ಭಗವದ್ಗೀತೆ, ಶ್ರೀಮದ್ ಭಾಗವತ ಮತ್ತು ಇತರ ಪ್ರಾಚೀನ ವೇದಶಾಸ್ತ್ರಗಳಿಂದ ಉದಾಹರಿಸುತ್ತಾರೆಂಬುದನ್ನು ಈ ಮುಂದೆ ಕಾಣುತ್ತೇವೆ. ಮಹಾ ಆತ್ಮಜ್ಞಾನಿಗಳು ಲಕ್ಷೋಪಲಕ್ಷ ವರ್ಷಗಳಿಂದ ನೀಡುತ್ತ

ಬಂದಿದ್ದ ಕಾಲಾತೀತವಾದ ಜ್ಞಾನವನ್ನೇ ಎಂದರೆ ತಮ್ಮ ಹೃದ್ಗತವಾದ ಆತ್ಮರಹಸ್ಯವನ್ನು, ಪ್ರಕೃತಿ ಮತ್ತು ವಿಶ್ವರಹಸ್ಯವನ್ನು ಮತ್ತು ಸರ್ವವ್ಯಾಪನಾದ ಪರಮಾತ್ಮನ ರಹಸ್ಯವನ್ನು ಬೋಧಿಸುವ ಜ್ಞಾನವನ್ನು ನಮಗೆ ತಂದುಕೊಟ್ಟಿದ್ದಾರೆ. ಶ್ರೀಲ ಪ್ರಭುಪಾದರ ವಾಣಿ ಅತ್ಯಂತ ಸ್ಪಷ್ಟ ಮತ್ತು ಹೃದಯಸ್ಪರ್ಶಿ. ಅವರದು ಸರಳ ಮಾತುಗಾರಿಕೆ. ಈ ಆತ್ಮ ಸಾಕ್ಷಾತ್ಕಾರ ವಿಜ್ಞಾನವು ನಮ್ಮ ಇಂದಿನ ಜಗತ್ತಿಗೆ ಮತ್ತು ಜೀವನಕ್ಕೆ ಎಷ್ಟು ನಿಕಟ ಸಂಬಂಧ ಹೊಂದಿದೆ ಎಂಬುದನ್ನು ಅವರ ಮಾತಿನಲ್ಲಿ ಪ್ರತ್ಯಕ್ಷವಾಗಿ ಅನುಭವವೇದ್ಯವಾಗುತ್ತದೆ.

ಈ ವಿಶೇಷ ಗ್ರಂಥಕ್ಕಾಗಿ ಆಯ್ದ 36 ಲೇಖನಗಳಲ್ಲಿ ಶ್ರೀಲ ಪ್ರಭುಪಾದರು ಮೊದಲು ಅಮೇರಿಕಕ್ಕೆ ಬಂದಿಳಿದಾಗ ಅವರು ರಚಿಸಿದ ಹೃದಯಸ್ಪರ್ಶಿಯಾದ ಪದ್ಯ, ಅವರು ಪ್ರಸಿದ್ಧ ಹೃದಯ ತಜ್ಞನೊಡನೆ "ಆತ್ಮಶೋಧನೆ" ಎಂಬ ವಿಷಯವನ್ನು ಕುರಿತು ನಡೆಸಿದ ಸಂಭಾಷಣೆ, ಲಂಡನ್ **ಬ್ರಾಡ್‌ಕಾಸ್ಟ್** ಕಂಪನಿಗೆ ಪುನರ್ಜನ್ಮವನ್ನು ಕುರಿತು ಅವರು ನೀಡಿದ ಸಂದರ್ಶನಗಳು, ನಿಜವಾದ ಮತ್ತು ಠಕ್ಕ ಗುರುಗಳನ್ನು ಕುರಿತು ಲಂಡನ್ ಟೈಮ್ಸ್ ಪತ್ರಿಕೆಗೆ ಅವರು ನೀಡಿದ ಮಾರ್ಮಿಕ ಪ್ರತಿಕ್ರಿಯೆಗಳು, ಕೃಷ್ಣ ಮತ್ತು ಕ್ರೈಸ್ತ ಕುರಿತು ಒಬ್ಬ ಜರ್ಮನ್ ಬೆನೆಡಿಕ್ಟೈನ್ ಸಂನ್ಯಾಸಿಯೊಂದಿಗೆ ಅವರು ನಡೆಸಿದ ಚರ್ಚೆ, ಪರಮ ಪ್ರಜ್ಞೆ ಮತ್ತು ಕರ್ಮ ನಿಯಮ ವಿಷಯದಲ್ಲಿ ಅವರ ಅಂತರ್‌ದೃಷ್ಟಿ, ಒಬ್ಬ ರಷ್ಯನ್ ವಿದ್ವಾಂಸನೊಂದಿಗೆ ಅಧ್ಯಾತ್ಮ ಸಮತಾಭಾವವನ್ನು ಕುರಿತು ಅವರು ನಡೆಸಿದ ಚರ್ಚೆ ಮತ್ತು ಆಧುನಿಕ ವಿಜ್ಞಾನ ಪ್ರಪಂಚದ ಮಿತ್ಯಾಕಥನವನ್ನು ಕುರಿತು ಅವರು ತಮ್ಮ ಶಿಷ್ಯನೊಂದಿಗೆ ಆತ್ಮೀಯವಾಗಿ ನಡೆಸುತ್ತಿದ್ದ ಮಾತುಕತೆಗಳು – ಈ ಕೃತಿಯಲ್ಲಿ ಕಾಣುತ್ತೇವೆ.

ನಿಮಗೆ ಇಷ್ಟವಾದರೆ ಈ ಕೃತಿಯನ್ನು ಕ್ರಮವಾಗಿಯೇ ಓದಿಕೊಂಡು ಹೋಗಬಹುದು, ಅಥವಾ ವಿಶೇಷವಾಗಿ ನಿಮ್ಮ ಗಮನ ಸೆಳೆಯುವ ವಿಷಯದಿಂದಲೇ ಓದಲು ಪ್ರಾರಂಭಿಸಬಹುದು. **ಆತ್ಮಸಾಕ್ಷಾತ್ಕಾರ ವಿಜ್ಞಾನ** ನಿಮಗೆ ಒಂದು ಪಂಥಾಹ್ವಾನವಾಗಿ ಅಂತಃಸ್ಫೂರ್ತಿಯನ್ನು, ಜ್ಞಾನದೀಪ್ತಿಯನ್ನು ತಂದುಕೊಡುತ್ತದೆ.

**—ಪ್ರಕಾಶಕರು**

# ಶ್ರೀಲ ಪ್ರಭುಪಾದರ ಕೃತಿಗಳನ್ನು ಕುರಿತು ಮೆಚ್ಚಿಕೆಗಳು

ಭಾರತದ ಕಾಲಾತೀತವಾದ ಆತ್ಮಸಾಕ್ಷಾತ್ಕಾರ ವಿಜ್ಞಾನವನ್ನು ಪಶ್ಚಿಮ ಲೋಕಕ್ಕೆ ತಂದುಕೊಟ್ಟ ಶ್ರೀಲ ಪ್ರಭುಪಾದರ ಕೃತಿಗಳನ್ನು ಕುರಿತು ಅನೇಕ ಜನ ಕಳೆದ ಕೆಲವು ವರ್ಷಗಳಿಂದ ತಮ್ಮ ಮೆಚ್ಚಿಕೆಗಳನ್ನು ವ್ಯಕ್ತಪಡಿಸುತ್ತಿದ್ದಾರೆ.

-0- 0 -0-

"ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಅಮೂಲ್ಯ ಕೆಲಸ ಮಾಡುತ್ತಿದ್ದಾರೆ. ಅವರ ಗ್ರಂಥಗಳು ಮಾನವ ಕುಲದ ಉದ್ಧಾರಕ್ಕೆ ಮೌಲಿಕ ಕೊಡುಗೆಗಳಾಗಿವೆ."

**ದಿ. ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ,**
ಭಾರತದ ಮಾಜಿ ಪ್ರಧಾನಿ.

"ನಮ್ಮ ಅತಿಕಾರ್ಯಶೀಲ ಮತ್ತು ಏಕಮುಖೀ ಸಂಸ್ಕೃತಿಯು ಅಧಿಕಾರಯುತವಾದ ತಾತ್ವಿಕ ಪ್ರಜ್ಞೆಯ ಆಳವಾದ ಚಿಂತನೆಯ ಅಭಾವದಿಂದಾಗಿ, ಆತ್ಮನಾಶದ ಹಂತಕ್ಕೆ ತಲುಪಬಹುದಾದ ಘಟ್ಟದಲ್ಲಿದೆ ಎಂಬುದನ್ನು ಪಾಶ್ಚಾತ್ಯ ಲೋಕಕ್ಕೆ ಗಮನಾರ್ಹವಾಗಿ ಸ್ವಾಮಿ ಭಕ್ತಿವೇದಾಂತರು ಎಚ್ಚರಿಸಿದ್ದಾರೆ. ಇಂಥ ಆಳವಾದ ಚಿಂತನೆಯಿಲ್ಲದ ನಮ್ಮ ನೈತಿಕ ಮತ್ತು ರಾಜಕೀಯ **ಪ್ರತಿಭಟನೆ**ಗಳು ಕೇವಲ ಒಂದು **ಶಬ್ದ ಜಾಲ** ಮಾತ್ರ."

**ಥಾಮಸ್ ಮೆರ್ಟನ್,** ದೈವತತ್ವಜ್ಞಾನಿ.

"ಭಾರತದ ಯೋಗಿಗಳು ನೀಡುವ ವೈವಿಧ್ಯಮಯ ಧಾರ್ಮಿಕ ದೃಷ್ಟಿಗಳಲ್ಲಿ, ಮಹಾಪ್ರಭು ಚೈತನ್ಯ ಪರಂಪರೆಯಲ್ಲಿ ಹತ್ತನೆಯ ಗುರುಗಳಾದ ಶ್ರೀಲ ಪ್ರಭುಪಾದ ಭಕ್ತಿವೇದಾಂತ ಸ್ವಾಮಿಗಳು ತೋರಿಸಿಕೊಟ್ಟ ಕೃಷ್ಣಪ್ರಜ್ಞೆಯ ಮಾರ್ಗವೇ ಅತ್ಯಂತ ಮಹತ್ವದ್ದಾಗಿದೆ. ಭಕ್ತಿವೇದಾಂತ ಸ್ವಾಮಿಯವರು, ತಮ್ಮ ಧ್ಯೇಯದ ಬಗ್ಗೆ ವೈಯಕ್ತಿಕ ಅರ್ಪಣಾಭಾವ ಮತ್ತು ಏಕಮನಸ್ಕತೆಯ ಫಲವಾಗಿ, ತಮ್ಮ ಶ್ರಮವರಿಯದ ಚೈತನ್ಯ ಮತ್ತು ದಕ್ಷ ನಿರ್ದೇಶನದ ಫಲವಾಗಿ ಹತ್ತು ವರ್ಷಗಳಲ್ಲಿಯೇ ಸಹಸ್ರಾರು ಜನ ಭಕ್ತರಿರುವ ಅಂತರರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘವನ್ನು ಸಂಘಟಿಸುವಲ್ಲಿ ಮತ್ತು ವಿಶ್ವದ ದೊಡ್ಡ ದೊಡ್ಡ ನಗರಗಳಲ್ಲಿ ರಾಧಾಕೃಷ್ಣ ಮಂದಿರಗಳನ್ನು ಸ್ಥಾಪಿಸುವಲ್ಲಿ ಮತ್ತು ಶ್ರೀಕೃಷ್ಣ ಹಾಗೂ ಚೈತನ್ಯ ಮಹಾಪ್ರಭುಗಳು ಉಪದೇಶಿಸಿದ ಭಕ್ತಿಯೋಗವನ್ನು ಕುರಿತು ಅಸಂಖ್ಯ ಗ್ರಂಥಗಳನ್ನು ಬರೆಯುವಲ್ಲಿ, ಯಶಸ್ವಿಯಾದುದು ಒಂದು ವಿಸ್ಮಯಕಾರಿಯಾದ ಘಟನೆಯಾಗಿದೆ."

**ಪ್ರೊ. ಮಹೇಶ್ ಮೆಹತಾ,** ಏಷ್ಯಾ ಅಧ್ಯಯನಗಳ ಪ್ರೊಫೆಸರ್,
ವಿಂಡ್ಸರ್ ವಿಶ್ವವಿದ್ಯಾನಿಲಯ, ಅಂಟಾರಿಯೊ, ಕೆನಡಾ.

"ಎ.ಸಿ. ಭಕ್ತಿವೇದಾಂತಸ್ವಾಮಿ ಪ್ರಭುಪಾದರು ಒಬ್ಬ ಗೌರವಾನ್ವಿತ ಗುರುಗಳೂ ಮತ್ತು ಒಂದು ಮಹಾ ಸಂಪ್ರದಾಯದ ನಿಧಿಗಳೂ ಆಗಿದ್ದಾರೆ."

**ಜೋಸೆಫ್ ಜೀನ್ ಲಾನ್ ಜೊ ಡೆಲ್‌ವಾಸ್ಟೊ,**
ಖ್ಯಾತ ಫ್ರೆಂಚ್ ತತ್ವಜ್ಞಾನಿ ಮತ್ತು ಲೇಖಕರು.

"ಪ್ರಭುಪಾದರ ಅಪಾರವಾದ ಕೃತಿಗಳಲ್ಲಿ ಕಂಡುಬರುವ ಅವರ ವಿದ್ವತ್ತು ಅರ್ಪಣ ಭಾವದ ಉನ್ನತಿಯನ್ನು ವರ್ಣಿಸಲು ನನಗೆ ಶಬ್ದಗಳು ಸಾಲದಾಗಿವೆ. ನಮ್ಮ ಭಾವೀ ಜನಾಂಗವು ಸ್ವಾಮಿ ಪ್ರಭುಪಾದರ ಪ್ರಯತ್ನಗಳ ಫಲವಾಗಿ ಖಂಡಿತ ಒಂದು ಉತ್ತಮ ವಾತಾವರಣದ ವಿಶ್ವಸ್ಥಿತಿಯನ್ನು ಪಡೆಯುವರೆಂಬುದು ಖಂಡಿತ. ಅವರು ಇಡೀ ಮಾನವ ಕೋಟಿಗೆ ಅಂತರರಾಷ್ಟ್ರೀಯ ಭ್ರಾತೃತ್ವದ ಮತ್ತು ಆಧ್ಯಾತ್ಮಿಕ ಭಾವೈಕ್ಯತೆಯ ಪ್ರತಿಪಾದಕ ರಾಗಿದ್ದಾರೆ. ಭಾರತದ ಹೊರಗೆ, ಅದರಲ್ಲಿಯೂ ವಿಶೇಷವಾಗಿ ಪಶ್ಚಿಮದಲ್ಲಿ, ಕೃಷ್ಣ ಪ್ರಜ್ಞೆಯು ಭಾರತದಲ್ಲಿ ಅತ್ಯುತ್ತಮವಾದುದನ್ನು ಇಷ್ಟೊಂದು ವೈಜ್ಞಾನಿಕವಾಗಿ ಪರಿಚಯಿಸಿದ ಶ್ರೀಲ ಪ್ರಭುಪಾದರಿಗೆ ಸಾಹಿತ್ಯಪ್ರಪಂಚವು ಋಣಿಯಾಗಿದೆ."

**ಶ್ರೀ ವಿಶ್ವನಾಥ ಶುಕ್ಲ,** ಪಿ.ಎಚ್‌ಡಿ. ಹಿಂದೀ ಪ್ರೊಫೆಸರ್
ಮುಸ್ಲೀಂ ವಿಶ್ವವಿದ್ಯಾನಿಲಯ, ಆಲಿಗಢ, ಉತ್ತರ ಪ್ರದೇಶ.

"ಭಾರತದ ಒಬ್ಬ ಮೂಲನಿವಾಸಿಯಾಗಿದ್ದು, ಈಗ ಪಶ್ಚಿಮದಲ್ಲಿ ವಾಸಿಸುತ್ತಿದ್ದು, ನನ್ನ ಅನೇಕ ದೇಶಬಾಂಧವರು ಗುರುಗಳ ಮತ್ತು ಆಧ್ಯಾತ್ಮಿಕ ನಾಯಕರ ಪಾತ್ರವಹಿಸಿ ಪಶ್ಚಿಮಕ್ಕೆ ಬರುತ್ತಿರುವುದನ್ನು ಕಂಡು ನಾನು ಬಹಳ ಅಸಮಾಧಾನಗೊಂಡಿದ್ದೇನೆ. ಪಶ್ಚಿಮ ದಲ್ಲಿ ಹೇಗೆ ಒಬ್ಬ ಸಾಮಾನ್ಯ ಮನುಷ್ಯನು ತನ್ನ ಹುಟ್ಟಿನಿಂದಲೇ ಕ್ರೈಸ್ತ ಸಂಸ್ಕೃತಿಯ ಪ್ರಜ್ಞೆ ಯನ್ನು ಹೊಂದುವನೋ ಅದೇ ರೀತಿಯಲ್ಲಿ ಭಾರತದ ಒಬ್ಬ ಸಾಮಾನ್ಯ ಮನುಷ್ಯನು ಕೂಡ ಹುಟ್ಟಿನಿಂದಲೇ ಧ್ಯಾನ ಮತ್ತು ಯೋಗತತ್ವಗಳ ಪರಿಚಯವನ್ನು ಹೊಂದಿರುತ್ತಾನೆ. ಆದರೆ ದುರ್ದೈವದಿಂದ ಅನೇಕ ಅಪ್ರಾಮಾಣಿಕ ವ್ಯಕ್ತಿಗಳು ಭಾರತದಿಂದ ಬರುತ್ತಾರೆ, ಯೋಗದ ಬಗ್ಗೆ ತಮ್ಮ ಅಪರಿಪೂರ್ಣ ಮತ್ತು ಸಾಮಾನ್ಯ ಜ್ಞಾನವನ್ನು ತೋರ್ಪಡಿಸುತ್ತಾರೆ. ಮಂತ್ರಗಳಿಂದ ಕೂಡಿದ ತಮ್ಮ ವೇಷಗಳಿಂದ ಜನರನ್ನು ವಂಚಿಸುತ್ತಾರೆ, ಮತ್ತು ತಾವೇ ದೇವರ ಅವತಾರ ವೆಂದು ಹೇಳಿಕೊಳ್ಳುತ್ತಾರೆ. ತಮ್ಮನ್ನು ದೇವರೆಂದು ಅಂಗೀಕರಿಸುವಂತೆ ತಮ್ಮ ಮೂಢ ಅನುಯಾಯಿಗಳಿಗೆ ನಂಬಿಕೆ ಹುಟ್ಟಿಸುವ ಇಂಥ ಅನೇಕ ವಂಚಕರು ಬಂದಿದ್ದಾರೆ. ಇದರಿಂದ ನಿಜವಾಗಿಯೂ ಭಾರತೀಯ ಸಂಸ್ಕೃತಿ ಕುರಿತು ಪಾರಂಗತರಾದವರೂ, ವಿದ್ವಾಂಸರೂ ಸಾಕಷ್ಟು ಕ್ಷೋಭೆಗೊಂಡಿದ್ದಾರೆ. ಈ ಕಾರಣದಿಂದಲೇ ನಾನು ಶ್ರೀ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರ ಪ್ರಕಟಣೆಗಳನ್ನು ಕಂಡು ಬಹಳಷ್ಟು ಹರ್ಷಪುಲಕಿತನಾಗಿದ್ದೇನೆ. ಈ ಸುಳ್ಳು ಮತ್ತು ಅನಧಿಕಾರ 'ಗುರುಗಳ' ಮತ್ತು 'ಯೋಗಿಗಳು' ವಂಚನೆಯನ್ನು ತಡೆಯಲು ಈ ಪ್ರಕಟನೆ ಗಳು ಸಹಾಯಕವಾಗುತ್ತವೆ, ಮತ್ತು ಪೌರ್ವಾತ್ಯ ಸಂಸ್ಕೃತಿಯ ನಿಜವಾದ ಅರ್ಥವನ್ನು ತಿಳಿದು ಕೊಳ್ಳಲು ಸರ್ವರಿಗೂ ಅವಕಾಶವನ್ನು ಒದಗಿಸಿಕೊಡುತ್ತವೆ."

**ಡಾ|| ಕೈಲಾಸ್ ವಾಜಪೇಯಿ,** ಭಾರತೀಯ ಅಧ್ಯಯನ ನಿರ್ದೇಶಕ,
ಪೌರ್ವಾತ್ಯ ಅಧ್ಯಯನಗಳ ಕೇಂದ್ರ, ಮೆಕ್ಸಿಕೊ ವಿಶ್ವವಿದ್ಯಾನಿಲಯ.

"ನಾವು ಒಂದು ರಾಷ್ಟ್ರವಾಗಿ ನಮ್ಮ ಜೀವನಕ್ಕೆ ಒಂದು ಹೊಸ ಸಾಂಸ್ಕೃತಿಕ ವಿಧಾನವನ್ನು ಹುಡುಕುತ್ತಿರುವಾಗ, ಎ.ಸಿ. ಭಕ್ತಿವೇದಾಂತಸ್ವಾಮಿ ಪ್ರಭುಪಾದರ ಕೃತಿಗಳು ಸುಂದರವಾಗಿವೆಯಷ್ಟೇ ಅಲ್ಲ, ನಮ್ಮ ಕಾಲಮಾನಕ್ಕೆ ಸುಸಂಬದ್ಧವೂ ಆಗಿವೆ."

**ಡಾ|| ಸಿ.ಎಲ್. ಸ್ಪೈಡ್‌ಬರಿ,** ಸಮಾಜ ವಿಜ್ಞಾನದ ಪ್ರೊಫೆಸರ್, ಸ್ಟೆಫನ್ ಎಫ್. ಆಸ್ಟಿನ್ ರಾಜ್ಯ ವಿಶ್ವವಿದ್ಯಾನಿಲಯ.

"ಭಕ್ತಿವೇದಾಂತ ಬುಕ್‌ಟ್ರಸ್ಟಿನ ಪ್ರಕಟನೆಗಳು ಶೈಕ್ಷಣಿಕ ಸಂಸ್ಥೆಗಳಲ್ಲಿ ಮತ್ತು ಗ್ರಂಥಾಲಯಗಳಲ್ಲಿ ಉಪಯೋಗಿಸಲು ಅಸಾಧಾರಣ ಮೌಲಿಕ ಕೃತಿಗಳಾಗಿರುವುದರಿಂದ, ಅವುಗಳನ್ನು ಪರಿಶೀಲಿಸಲು ನನಗೆ ಅವಕಾಶ ದೊರೆತುದು ನನ್ನ ಭಾಗ್ಯವೆಂದೇ ಭಾವಿಸುತ್ತೇನೆ. ಭಾರತೀಯ ತತ್ವಜ್ಞಾನ ಮತ್ತು ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡುವ ಎಲ್ಲ ವಿದ್ಯಾರ್ಥಿಗಳಿಗೂ ಅಧ್ಯಾಪನ ಮಾಡುವ ಪ್ರೊಫೆಸರರೂ ವಿಶೇಷವಾಗಿ ಪ್ರಾಚೀನ ಶಾಸ್ತ್ರಗ್ರಂಥವಾದ ಶ್ರೀಮದ್ ಭಾಗವತವನ್ನು ನೋಡಬೇಕೆಂದು ನಾನು ಹೇಳಬಯಸುತ್ತೇನೆ. ವಿದ್ವಾಂಸ ಲೇಖಕರಾದ ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿಗಳು, ಜಗದ್ವಿಖ್ಯಾತರಾದ ಸಂತರಾಗಿದ್ದಾರೆ, ಮತ್ತು ವೈದಿಕ ತತ್ವಜ್ಞಾನ ಹಾಗೂ ಆಧುನಿಕ ಜಗತ್ತಿನಲ್ಲಿ ಅದರ ಪ್ರಾಯೋಗಿಕ ಅನ್ವಯದ ಈ ಕ್ಷೇತ್ರದಲ್ಲಿ ಮಹಾ ಪ್ರತಿಪಾದಕರಾಗಿದ್ದಾರೆ – ವಿಶ್ವಾದ್ಯಂತ ವೈದಿಕ ಜ್ಞಾನದ ಅಧ್ಯಯನ ಮತ್ತು ಅನುಷ್ಠಾನಕ್ಕಾಗಿ ಅವರು ಒಂದುನೂರಕ್ಕೂ ಹೆಚ್ಚು ಆಶ್ರಮಗಳನ್ನು ಸ್ಥಾಪಿಸಿದ್ದಾರೆ. ವಸ್ತುತಃ, ಜಗತ್ತಿನ ಎಲ್ಲ ದೇಶಗಳಲ್ಲಿ ವೈದಿಕ ಜೀವನ ಪದ್ಧತಿ ಮತ್ತು ಸನಾತನ ಧರ್ಮವನ್ನು ಸ್ಥಾಪಿಸುವ ಅವರ ಪ್ರಯತ್ನಗಳಲ್ಲಿ ಅವರು ಅಪ್ರತಿಮರು. ಸ್ವಾಮಿ ಭಕ್ತಿವೇದಾಂತರಂಥ ಘನ ವ್ಯಕ್ತಿತ್ವ ಹೊಂದಿರುವವರು ಜಗತ್ ಕಲ್ಯಾಣಕ್ಕಾಗಿ ಈ ಭಾಗವತ ಸಂದೇಶ ಪ್ರಚಾರ ಮಾಡುವುದನ್ನು ಕಂಡು ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ."

**ಡಾ|| ಆರ್. ಕಾಲಿಯೂ,** ಅಧ್ಯಕ್ಷರು, ಭಾರತೀಯ ಗ್ರಂಥಾಲಯ ಸಂಘ.

"ಸ್ವಾಮಿ ಭಕ್ತಿವೇದಾಂತರು ದೇವರ ಭಕ್ತರಿಗೆಲ್ಲ, ಭಾಷಾಂತರ ಮತ್ತು ವ್ಯಾಖ್ಯಾನಗಳ ಮೂಲಕ ಕೃಪಾಪೂರ್ಣ ಸೇವೆಯನ್ನು ನೀಡಿದ್ದಾರೆ ಬೆಳಕು ಕತ್ತಲೆಯನ್ನು ಪ್ರಕಾಶಮಾನಗೊಳಿಸುತ್ತಿರುವ ಪಂಥಾಹ್ವಾನದ ಈ ಕಾಲಗಳಲ್ಲಿ ಈ ಸತ್ಯತತ್ವಗಳ ವಿಶ್ವವ್ಯಾಪೀ ಅನ್ವಯನವು ತಾರಕವಾಗಿದೆಯೆಂಬುದನ್ನು ತೋರಿಸಿಕೊಡುವಂತಿದೆ. ಜೀವನವೆಂದರೇನು ? ಅದರ ಮೂಲವಾವುದು, ಗುರಿಯಾವುದು ? ಎಂದು ಜಿಜ್ಞಾಸೆ ಮಾಡುವ ಎಲ್ಲ ಆಶಾವಾದಿ ಜೀವರಿಗೆ ಇದು ಪವಿತ್ರವೂ, ಉದ್ಬೋಧಕವೂ ಆದ ಸಾಹಿತ್ಯವೂ ಆಗಿದೆ !"

**ಡಾ|| ಜೂಡಿತ ಎಂ. ಟೈಬರ್ಗ್,** ಸ್ಥಾಪಕ ಮತ್ತು ನಿರ್ದೇಶಕ, ಪೂರ್ವ-ಪಶ್ಚಿಮ ಸಂಸ್ಕೃತಿ ಕೇಂದ್ರ, ಲಾಸ್ ಏಂಜಲೀಸ್, ಕ್ಯಾಲಿಫೋರ್ನಿಯಾ.

"..... ಲೇಖಕರು ಚೈತನ್ಯರ ನೇರ ಪರಂಪರೆಯಲ್ಲಿ ಬಂದವರಾಗಿ, ಭಾರತೀಯ ಸಂಪ್ರದಾಯಾನುಸಾರವಾಗಿ ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತಸ್ವಾಮಿ ಪ್ರಭುಪಾದರೆಂಬ ಅಂಕಿತಕ್ಕೆ ಘನವಾಗಿ ಅರ್ಹರಾಗಿದ್ದಾರೆ. ಸ್ವಾಮಿ ಪ್ರಭುಪಾದರು ಸಂಸ್ಕೃತ ಭಾಷೆಯ ಮೇಲೆ ಅಪಾರ ಪ್ರಭುತ್ವವನ್ನು ಹೊಂದಿದ್ದಾರೆ. ಅವರ ಭಗವದ್ಗೀತೆಯ ಪಠನವು ನಮ್ಮಲ್ಲಿ

ಅಪಾರ ಆಸಕ್ತಿಯನ್ನು ಹುಟ್ಟಿಸಲು ಕಾರಣವೆಂದರೆ, ಅದು ಚೈತನ್ಯ ಸಂಪ್ರದಾಯದ ತತ್ವಗಳಿಗೆ ಅನುಸಾರವಾದ ಪ್ರಮಾಣಭೂತವಾದ ಅರ್ಥ ವಿವರಣೆಯನ್ನು ನೀಡುತ್ತದೆ. ಈ ಮೆಚ್ಚಿಕೆಯು ಒಬ್ಬ ಕ್ರಿಶ್ಚಿಯನ್ ತತ್ವಜ್ಞಾನಿ ಮತ್ತು ಭಾರತೀಯ ಶಾಸ್ತ್ರ ಸಂಶೋಧಕ ಬರೆಯುತ್ತಿರುವುದು, ಪ್ರಾಮಾಣಿಕ ಮೈತ್ರಿಯ ಹಾರೈಕೆಯಾಗಿದೆ."

**ಒಲಿವೇರ್ ಲ್ಯಾಕೊಂಬೆ,** ಗೌರವ ಪ್ರಾಧ್ಯಾಪಕರು, ಪ್ಯಾರಿಸ್ ವಿಶ್ವವಿದ್ಯಾನಿಲಯ, ಸಾರ್ಬೇನ್, ಮಾಜಿ ನಿರ್ದೇಶಕ, ಭಾರತೀಯ ನಾಗರಿಕ ಸಂಸ್ಥೆ, ಪ್ಯಾರಿಸ್.

"ನಾನು ಶ್ರೀ ಶ್ರೀಮದ್ ಭಕ್ತಿವೇದಾಂತ ಸ್ವಾಮಿಗಳ ಪುಸ್ತಕಗಳನ್ನು ಬಹಳಷ್ಟು ಜಾಗರೂಕತೆಯಿಂದ ಲಕ್ಷ್ಯಪೂರ್ವಕವಾಗಿ ಮತ್ತು ಆಳವಾದ ಆಸಕ್ತಿಯಿಂದ ಓದಿದ್ದೇನೆ, ಮತ್ತು ಅವು ಭಾರತದ ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ತಿಳಿದುಕೊಳ್ಳಲು ಕುತೂಹಲ ಉಳ್ಳವರಿಗೆ ಬಹಳ ಬೆಲೆಯುಳ್ಳ ಕೃತಿಗಳಾಗಿವೆ ಎಂಬುದು ನನ್ನ ಅಭಿಪ್ರಾಯ. ಈ ಲೇಖಕರು ತಮ್ಮ ಗ್ರಂಥದ ಪ್ರತಿಯೊಂದು ಪುಟದಲ್ಲಿ ನಿರೂಪಿಸುವ ವಿಷಯದ ಬಗ್ಗೆ ಅದ್ಭುತ ವಿದ್ವತ್ತೆಯನ್ನು ಪ್ರದರ್ಶಿಸುತ್ತಾರೆ, ಮತ್ತು ವೈಷ್ಣವ ತತ್ವಜ್ಞಾನ ಪದ್ಧತಿಯಲ್ಲಿ ಕಠೋರ ದೀಕ್ಷೆಯಿಂದ ಬೆಳೆದುಬಂದ ಮತ್ತು ಕೆಲವೇ ಪುಣ್ಯಾತ್ಮರು ಪಡೆಯುವ ಆಧ್ಯಾತ್ಮಿಕ ಜ್ಞಾನದೀಪ್ತಿಯ ಅತ್ಯುನ್ನತ ಸ್ಥಿತಿಯನ್ನು ಹೊಂದುವಷ್ಟು ಪರಿಪೂರ್ಣವಾಗಿ ಅದರ ತತ್ವಗಳನ್ನು ಅರಗಿಸಿಕೊಂಡ ಅಪೂರ್ವ ಕೌಶಲ್ಯದ ವ್ಯಕ್ತಿಯ ಕ್ಲಿಷ್ಟ ವಿಚಾರಗಳ ಸುಲಭ ಪ್ರತಿಪಾದನೆಯನ್ನು ಅವು ತಿಳಿಸಿ ಕೊಡುತ್ತವೆ."

**ಡಾ|| ಹೆಚ್.ಬಿ. ಕುಲಕರ್ಣಿ,** ಇಂಗ್ಲೀಷ್ ಮತ್ತು ತತ್ವಜ್ಞಾನ ಪ್ರಾಧ್ಯಾಪಕ, ಉಥಾ ರಾಜ್ಯ ವಿಶ್ವವಿದ್ಯಾ ನಿಲಯ, ಲೋಗನ್, ಉಥಾ.

"ಸ್ವಾಮೀಜಿಯವರ ದೀರ್ಘಕಾರ್ಯವು ಇಂದಿನ ಜಗತ್ತಿನ ಕ್ಷೋಭೆಗೊಂಡ ಮಾನವ ಸಮಾಜಕ್ಕೆ ಮಹಾ ಕೊಡುಗೆಯಾಗಿದೆ ಎಂಬುದರಲ್ಲಿ ಸಂದೇಹವೇ ಇಲ್ಲ."

**ಡಾ|| ಸೂಡಾ ಎಲ್. ಭಟ್,** ಭಾರತೀಯ ಭಾಷೆಗಳ ಪ್ರಾಧ್ಯಾಪಕ, ಬಾಸ್ಟನ್ ವಿಶ್ವವಿದ್ಯಾನಿಲಯ, ಬಾಸ್ಟನ್, ಮೆಸ್ಸಾಚುಸಟ್ಸ್.

"ಎ.ಸಿ. ಭಕ್ತಿವೇದಾಂತಸ್ವಾಮಿ ಪ್ರಭುಪಾದರ ಕೃಷ್ಣದಾಸ ಕವಿರಾಜ ಗೋಸ್ವಾಮಿಯವರ ಚೈತನ್ಯ ಚರಿತಾಮೃತದ ಇಂಗ್ಲೀಷ್ ಭಾಷಾಂತರ ಪ್ರಕಟನೆಯು ಭಾರತೀಯ ಅಧ್ಯಯನಗಳ ವಿದ್ವಾಂಸರಿಗೂ ಮತ್ತು ಭಾರತೀಯ ಆಧ್ಯಾತ್ಮಿಕ ಜ್ಞಾನವನ್ನು ಬೆಳೆಸಿಕೊಳ್ಳಬಯಸುವ ಜನಸಾಮಾನ್ಯರಿಗೂ ಪರಮಹರ್ಷದಾಯಕವಾಗಿದೆ.

"......ಈ ವ್ಯಾಖ್ಯಾನವನ್ನು ಆಳವಾಗಿ ಅಧ್ಯಯನ ಮಾಡುವವರಿಗೆ, ಅವರ ಇತರ ಕೃತಿಗಳಲ್ಲಿ ಕಂಡುಬರುವಂತೆ, ಶ್ರೀ ಶ್ರೀಮದ್ ಭಕ್ತಿವೇದಾಂತರು, ಉತ್ಕಟ ಭಕ್ತಿಯೊಂದಿಗೆ ಒಬ್ಬ ಭಕ್ತನ ಸೂಕ್ಷ್ಮ ಭಾವನೆಗಳ ಮತ್ತು ಶಾಸ್ತ್ರಪ್ರವೀಣತೆಯ ವೈದಗ್ಧ್ಯವನ್ನು ಸಮ್ಯಗ್ ವಿಧಾನದಲ್ಲಿ ಸಮ್ಮಿಲನಗೊಳಿಸಿರುವುದನ್ನು ಕಾಣಬಹುದಾಗಿದೆ.

"ಭಾರತೀಯ ಆಧ್ಯಾತ್ಮಿಕ ಮತ್ತು ಧಾರ್ಮಿಕ ಸಾಹಿತ್ಯದ ಅಧ್ಯಯನ ಮಾಡುವ ಎಲ್ಲ ವ್ಯಕ್ತಿಗಳ ಆಸಕ್ತಿಗೆ ವಿದ್ವತ್ ಪ್ರತಿಭೆ, ಭಕ್ತನ ಅಥವಾ ಸಾಮಾನ್ಯ ಓದುಗನ ಸ್ಫೂರ್ತಿಯು ಕಾರಣವಾಗಿದ್ದರೂ, ಅವರ ಗ್ರಂಥಭಂಡಾರಕ್ಕೆ ಉತ್ಕೃಷ್ಟವಾದ ಈ ಸಂಪುಟಗಳು ಸ್ವಾಗತಾರ್ಹ ವಾದ ಗ್ರಂಥಗಳಾಗಿವೆ."

**ಡಾ॥ ಜೆ. ಬ್ರೂಸ್ ಲಾಂಗ್,** ಏಷ್ಯಾ ಅಧ್ಯಯನಗಳ ಇಲಾಖೆ,
ಕಾರ್ನೆಲ್ ವಿಶ್ವವಿದ್ಯಾನಿಲಯ.



# ಆತ್ಮಶೋಧ

**ನೀನು ಯಾರು ?........ನೀನು ನಿನ್ನ ದೇಹವೇ? ಅಥವಾ ನಿನ್ನ ಮನಸ್ಸೇ ? ಅಥವಾ ನೀನು ಅದಕ್ಕಿಂತ ಉತ್ತಮವಾದ ವಸ್ತುವೆ ? ನೀನು ಯಾರೆಂಬುದು ನಿನಗೆ ತಿಳಿದಿದೆಯೇ ? ಅಥವಾ ನಿನಗೆ ಗೊತ್ತಿದೆಯೆಂದು ನೀನು ಕೇವಲ ಭಾವಿಸುವೆಯಾ ? ಇದು ಮಹತ್ವದ್ದಾಗಿದೆಯೆ? ನಮ್ಮ ಈ ಭೌತಿಕ ಸಮಾಜವು ಅಜ್ಞಾನಿಗಳ ನಾಯಕತ್ವದಿಂದಾಗಿ, ನಮ್ಮ ವಾಸ್ತವಿಕವಾದ ಉತ್ತಮ ಆತ್ಮಜ್ಞಾನವನ್ನು ಕುರಿತು ಜಿಜ್ಞಾಸೆ ಮಾಡುವುದನ್ನು ಕೂಡಾ ನಿಜವಾಗಿ ಪ್ರತಿಬಂಧಿಸಿದೆ. ಬದಲಾಗಿ ನಾವು ನಮ್ಮ ದೇಹವನ್ನು ಅದರಗೋಸುಗವೆ ಅದನ್ನು ಸುಸ್ಥಿತಿಯಲ್ಲಿಡಲು, ಅಲಂಕರಿಸಲು ಮತ್ತು ಮುದ್ದುಮಾಡಲು ನಮ್ಮ ಬೆಲೆಯುಳ್ಳ ಸಮಯವನ್ನು ಉಪಯೋಗಿಸುತ್ತಿದ್ದೇವೆ. ಇದನ್ನು ಬಿಟ್ಟು ಬೇರೆ ದಾರಿಯೇನಾದರೂ ಇದೆಯೆ?**

ಬಹುಮಹತ್ವದ ಕೃಷ್ಣಪ್ರಜ್ಞಾ ಆಂದೋಲನವು ಮಾನವ ಸಮಾಜವನ್ನು ಆಧ್ಯಾತ್ಮಿಕ ವಿನಾಶದಿಂದ ರಕ್ಷಿಸುವ ಉದ್ದೇಶ ಹೊಂದಿದೆ. ಈಗಿನ ಕುರುಡು ನಾಯಕರು ಮಾನವ ಜೀವಿತದ ಧ್ಯೇಯೋದ್ದೇಶವಾದ ಆತ್ಮಸಾಕ್ಷಾತ್ಕಾರ ಮತ್ತು ಪರಮ ದೇವೋತ್ತಮ ಪುರುಷನೊಂದಿಗೆ ನಮ್ಮ ಕಳಚಿಹೋದ ಸಂಬಂಧವನ್ನು ಮತ್ತೆ ಸ್ಥಾಪಿಸಿಕೊಳ್ಳುವ ವಿಚಾರವನ್ನು ಅರಿತಿರುವುದಿಲ್ಲ. ಅಂತೆಯೇ ಅವರು ಮಾನವ ಸಮಾಜವನ್ನು ತಪ್ಪುದಾರಿಗೆ ಎಳೆಯುತ್ತಾರೆ. ಇದೇ ನಮಗೊದಗಿದ ಚ್ಯುತಿ. ಈ ಮಹತ್ವದ ವಿಷಯದಲ್ಲಿ ಮಾನವ ಸಮಾಜಕ್ಕೆ ಜ್ಞಾನೋದಯವನ್ನು ಉಂಟುಮಾಡಿಕೊಡಲು ಕೃಷ್ಣಪ್ರಜ್ಞಾ ಆಂದೋಲನವು ಯತ್ನಿಸುತ್ತಿದೆ.

ವೈದಿಕ ನಾಗರಿಕತೆಯ ಪ್ರಕಾರ, ಪರಿಪೂರ್ಣ ಜೀವನ ಎಂದರೆ ಕೃಷ್ಣನೊಡನೆ ಅಥವಾ ದೇವರೊಡನೆ ನಮ್ಮ ಸಂಬಂಧವನ್ನು ಅರಿತುಕೊಳ್ಳುವುದು **ವೇದಜ್ಞಾನಕ್ಕೆ ಆಧಾರವೆಂದು** ಊರ್ಧ್ವಗಾಮಿ ವಿಜ್ಞಾನದ ಎಲ್ಲ ಪ್ರಮಾಣಕಾರರು ಅಂಗೀಕರಿಸಿರುವ ಭಗವದ್ಗೀತೆಯಲ್ಲಿ ಕೇವಲ ಮಾನವ ಜೀವರಷ್ಟೇ ಅಲ್ಲದೆ ಎಲ್ಲ ಜೀವಿಗಳು ಕೂಡಾ ಭಗವಂತನ ವಿಭಿನ್ನಾಂಶರಾಗಿದ್ದಾರೆ ಎಂಬುದನ್ನು ನಾವು ಅರಿತುಕೊಳ್ಳುತ್ತೇವೆ. ಕಾಲು, ಕೈ, ಬೆರಳುಗಳು ಮತ್ತು ಕಿವಿಗಳು ಹೇಗೆ ಇಡೀ ದೇಹಕ್ಕೆ ಸೇವೆಸಲ್ಲಿಸುವುವೋ, ಹಾಗೆಯೇ ಈ ವಿಭಿನ್ನಾಂಶಗಳು ಕೂಡ ಅಪೂರ್ಣತ್ವದ ಸೇವೆಗಾಗಿಯೇ ಇವೆ. ಜೀವಾತ್ಮರಾದ ನಾವು, ಭಗವಂತನ ವಿಭಿನ್ನಾಂಶರಾಗಿದ್ದು ಅವನ ಸೇವೆ ಮಾಡಲು ಕರ್ತವ್ಯಬದ್ಧರಾಗಿದ್ದೇವೆ.

ನಾವು ನಮ್ಮ ಕುಟುಂಬಕ್ಕೋ, ದೇಶಕ್ಕೋ ಅಥವಾ ಸಮಾಜಕ್ಕೋ -- ಒಟ್ಟಿನಲ್ಲಿ ಯಾರಿಗೋ ಸದಾ ಸೇವೆ ಸಲ್ಲಿಸುತ್ತಿರುತ್ತೇವೆ ಎಂಬುದೇ ನಮ್ಮ ವಾಸ್ತವಿಕ ಸ್ಥಿತಿ ಆಗಿದೆ. ನಮಗೆ, ಸೇವೆ ಸಲ್ಲಿಸಲು ಯಾರೂ ಸಿಕ್ಕದಿದ್ದರೆ, ನಾವು ಒಂದು ಬೆಕ್ಕನ್ನೋ, ನಾಯಿಯನ್ನೋ ಸಾಕಿ ಅದರ ಸೇವೆ ಮಾಡುತ್ತೇವೆ. ಈ ಎಲ್ಲ ಅಂಶಗಳಿಂದ ನಾವು ಸೇವೆ ಮಾಡುವುದೇ ನಮ್ಮ ಸ್ವರೂಪ ಸ್ವಭಾವ ಎಂದೇ ಅರ್ಥ. ಆದರೂ ನಮ್ಮ ಯೋಗ್ಯತೆಗೆ ತಕ್ಕ ಅತ್ಯಧಿಕ ಸೇವೆ ಸಲ್ಲಿಸಿದರೂ, ನಮಗೆ ತೃಪ್ತಿ ಇಲ್ಲ, ಮತ್ತು ಸೇವೆಯನ್ನು ಸ್ವೀಕರಿಸುವವರಿಗೂ ತೃಪ್ತಿ ಇಲ್ಲ. ಈ ಭೌತಿಕ ವೇದಿಕೆಯಲ್ಲಿ ಪ್ರತಿಯೊಬ್ಬನೂ ಹತಾಶನೇ ಕಾಣುತ್ತಾನೆ. ಕಾರಣವೆಂದರೆ ನಾವು ಸಲ್ಲಿಸುವ ಸೇವೆ ಸರಿಯಾಗಿ ನಿರ್ದೇಶಿತವಾಗಿರುವುದಿಲ್ಲ. ಉದಾಹರಣೆಗೆ : ನಾವು ಒಂದು ಮರಕ್ಕೆ ಸೇವೆ ಸಲ್ಲಿಸುವುದಾದರೆ, ನಾವು ಅದರ ಬೇರಿಗೆ ನೀರೆರೆಯಬೇಕು. ಅದರ ಬದಲಾಗಿ ನಾವು ಎಲೆಗಳಿಗೋ, ಶಾಖೆಗಳಿಗೋ ಅಥವಾ ಕುಡಿಗಳಿಗೋ ನೀರೆರೆದರೆ ಅದರಿಂದ ಯಾವ ಪ್ರಯೋಜನವಿಲ್ಲ. ನಾವು ಪರಮದೇವೋತ್ತಮ ಪುರುಷನಿಗೆ ಸೇವೆ ಸಲ್ಲಿಸಿದರೆ, ಅವನ ವಿಭಿನ್ನಾಂಶರಾದ ಜೀವರೆಲ್ಲರೂ ತಾವಾಗಿಯೇ ತೃಪ್ತರಾಗುತ್ತಾರೆ. ಪರಿಣಾಮವೆಂದರೆ, ಪರಮ ದೇವೋತ್ತಮ ಪುರುಷನ ಸೇವೆಯ ಮೂಲಕ ನಾವು ಸಮಾಜ, ಕುಟುಂಬ ಮತ್ತು ರಾಷ್ಟ್ರದ ಎಲ್ಲ ಕಲ್ಯಾಣ ಕಾರ್ಯಗಳನ್ನು ಮತ್ತು ಸೇವೆಯನ್ನು ಸಾಧಿಸಿದಂತಾಗುತ್ತದೆ.

ಪ್ರತಿಯೊಬ್ಬ ಮಾನವನು ದೇವರೊಂದಿಗೆ ತನ್ನ ಸ್ವರೂಪ ಸ್ಥಿತಿಸಂಬಂಧವನ್ನು ಅರಿತುಕೊಂಡು ಆ ಪ್ರಕಾರ ವರ್ತಿಸುವುದೇ ಅವನ ಕರ್ತವ್ಯವಾಗಿದೆ. ಇದು ಸಾಧ್ಯವಾದರೆ ನಮ್ಮ ಜೀವನವು ಸಫಲವಾದಂತೆಯೇ ಸರಿ, ಆದರೆ ಕೆಲವು ಸಲ, "ದೇವರೇ ಇಲ್ಲ" ಎಂದು "ನಾನೇ ದೇವರು", ಅಥವಾ "ನನಗೆ ದೇವರ ಗೊಡವೆ ಬೇಡ" ಎಂದೂ ನಾವು ಹೇಳಬಯಸುತ್ತೇವೆ. ಆದರೆ ಈ ವಿತಂಡ ಪ್ರವೃತ್ತಿಯು ನಿಜವಾಗಿ ನಮಗೆ ರಕ್ಷಣೆ ನೀಡುವುದಿಲ್ಲ. ದೇವರಿದ್ದಾನೆ, ಮತ್ತು ನಾವು ಅವನನ್ನು ಪ್ರತಿಕ್ಷಣದಲ್ಲೂ ಕಾಣಬಹುದು. ನಾವು ನಮ್ಮ ಜೀವನದಲ್ಲಿ ದೇವರನ್ನು ಕಾಣಲು ನಿರಾಕರಿಸಿದರೆ, ಅವನು ಕ್ರೂರವಾದ ಮರಣರೂಪದಲ್ಲಿ ನಮ್ಮ ಮುಂದೆ ಬರುವನು. ನಾವು ಒಂದು ಸ್ವರೂಪದಲ್ಲಿ ಅವನನ್ನು ಕಾಣಲು ಸಾಧ್ಯವಾಗದೆ ಹೋದರೆ, ಮತ್ತೊಂದು ಸ್ವರೂಪದಲ್ಲಿ ಅವನನ್ನು ಕಾಣಬಹುದು. ಪರಮ ದೇವೋತ್ತಮ ಪುರುಷನು ಈ ಎಲ್ಲ ಪ್ರಾಕೃತಿಕ ಜಗತ್ತಿನ ಮೂಲ ಕಾರಣನಾಗಿರುವುದರಿಂದ ಅವನ ಸ್ವರೂಪಗಳು ನಾನಾ ಬಗೆಯಾಗಿವೆ. ಒಂದು ಅರ್ಥದಲ್ಲಿ ನಾವು ಅವನಿಂದ ತಪ್ಪಿಸಿಕೊಳ್ಳುವುದೇ ಸಾಧ್ಯವಿಲ್ಲ.

ಈ ಕೃಷ್ಣಪ್ರಜ್ಞಾ ಆಂದೋಲನವು ಒಂದು ಧರ್ಮಾಂಧ ಆಂದೋಲನವಲ್ಲ, ಅಥವಾ ಇದು ಇತ್ತೀಚಿನ ಕೆಲವು ವಿತಂಡವಾದಿಗಳ ಒಂದು ಪ್ರತಿರೋಧವೂ ಅಲ್ಲ. ಪ್ರಾಯಃ ಅದು ಸರ್ವ ಭೋಕ್ತೃವಾದ ಪರಮದೇವೋತ್ತಮ ಪುರುಷನೊಂದಿಗೆ ನಮ್ಮ ನಿತ್ಯ ಸಂಬಂಧವನ್ನು ಕುರಿತ ವಿಷಯದ ಬಗ್ಗೆ ಅಧಿಕೃತವಾದ ಮತ್ತು ವೈಜ್ಞಾನಿಕವಾದ ಕ್ರಿಯೆಯಾಗಿದೆ. ಕೃಷ್ಣಪ್ರಜ್ಞೆಯು ಕೇವಲ ನಾವು ಅವನೊಂದಿಗೆ ಹೊಂದಿರುವ ಅನಾದಿ ಸಂಬಂಧವನ್ನು ಮತ್ತು ಅವನಿಗೆ ಸಂಬಂಧಿಸಿದಂತೆ ನಾವು ನಿರ್ವಹಿಸಬೇಕಾದ ಕರ್ತವ್ಯಗಳನ್ನು ಕುರಿತದ್ದಾಗಿದೆ. ಹೀಗೆ ಕೃಷ್ಣಪ್ರಜ್ಞೆ ನಮ್ಮ ಇಂದಿನ ಮಾನವ ಜನ್ಮದಲ್ಲಿ ಗಳಿಸಿಕೊಳ್ಳಬೇಕಾದ ಜೀವನದ ಮಹೋನ್ನತಿಯನ್ನು ಸಾಧಿಸಲು ನಮ್ಮನ್ನು ಸಮರ್ಥಗೊಳಿಸುತ್ತದೆ.

ಈ ಮಾನವ ಜನ್ಮವು ಆತ್ಮದ ಲಕ್ಷೋಪಲಕ್ಷ ವರ್ಷಗಳ ಜನ್ಮಾಂತರಗಳ ವಿಕಾಸದಲ್ಲಿ ದೊರೆತದ್ದಾಗಿದೆ ಎಂಬುದನ್ನು ನಾವು ಸದಾ ನೆನಪಿನಲ್ಲಿಡಬೇಕು. ಈ ವಿಶಿಷ್ಟ ಜನ್ಮದಲ್ಲಿ ನಮ ಆರ್ಥಿಕ ಸಮಸ್ಯೆಯು ಕೆಳವರ್ಗದ ಪಶುಯೋನಿಗಳಲ್ಲಿಯಕ್ಕಿಂತ ಹೆಚ್ಚು ಸುಲಭದಲ್ಲಿ ಪರಿಹಾರವಾಗುತ್ತದೆ. ಹಂದಿ, ನಾಯಿ, ಒಂಟೆ, ಕತ್ತೆ ಹೀಗೆ ಅನೇಕ ಪ್ರಾಣಿಗಳಿವೆ. ಅವುಗಳ ಆರ್ಥಿಕ ಆವಶ್ಯಕತೆಗಳು ಕೂಡ ನಮ್ಮಷ್ಟೇ ಮಹತ್ವದ್ದಾಗಿವೆ. ಆದರೆ ಈ ಪ್ರಾಣಿಗಳ ಆರ್ಥಿಕ ಸಮಸ್ಯೆಗಳು ಬಹು ಪ್ರಾಥಮಿಕ ಸ್ಥಿತಿಯಲ್ಲಿ ಪರಿಹಾರವನ್ನು ಕಾಣುತ್ತವೆ. ಇದಕ್ಕೆ ಬದಲಾಗಿ ನಿಸರ್ಗ ನಿಯಮಾನುಸಾರ ಮಾನವನಿಗೆ ಸುಖದಾಯಕವಾಗಿ ಜೀವಿಸಲು ಎಲ್ಲ ಅನುಕೂಲಗಳು ದೊರೆತಿವೆ.

ಹಂದಿ ಅಥವಾ ಇತರ ಪಶುಗಳಿಗಿಂತ ಮಾನವನಿಗೆ ಜೀವಿಸಲು ಉತ್ತಮ ಅವಕಾಶ ದೊರೆತದ್ದೇಕೆ ? ಒಬ್ಬ ಉನ್ನತ ಸರಕಾರಿ ಅಧಿಕಾರಿಗೆ ಒಬ್ಬ ಸಾಮಾನ್ಯ ಗುಮಾಸ್ತನಿಗಿಂತ ಉತ್ತಮವಾದ ಸುಖ ಜೀವನದ ಅನುಕೂಲಗಳನ್ನು ಒದಗಿಸುವುದೇಕೆ ? ಉತ್ತರ ಬಹು ಸರಳವಾಗಿದೆ. ಉತ್ತಮಾಧಿಕಾರಿಯು ಸಾಮಾನ್ಯ ಗುಮಾಸ್ತನಿಗಿಂತ ಹೆಚ್ಚು ಹೊಣೆಗಾರಿಕೆಯ ಕರ್ತವ್ಯಗಳನ್ನು ನಿರ್ವಹಿಸಬೇಕಾಗುವುದೇ ಇದಕ್ಕೆ ಕಾರಣ. ಅದೇ ಪ್ರಕಾರ ಮಾನವ ಜೀವಿಯು ಕೂಡ, ಸದಾ ತಮ್ಮ ಹಸಿದ ಹೊಟ್ಟೆಯನ್ನು ತುಂಬಿಕೊಳ್ಳುವುದರಲ್ಲಿಯೇ ನಿರತವಾದ ಪ್ರಾಣಿಗಳಿಗಿಂತ ಬಹು ಹೆಚ್ಚಿನ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿದೆ. ಆದರೆ ನಿಸರ್ಗ ನಿಯಮದಿಂದಾಗಿ ಇಂದಿನ ಪಾಶವೀ ನಾಗರಿಕತೆಯ ಜೀವನ ಪದ್ಧತಿಯು ಹೊಟ್ಟೆ ತುಂಬಿಕೊಳ್ಳುವ ಸಮಸ್ಯೆಗಳನ್ನೇ ಹೆಚ್ಚಿಸಿದೆ. ನಾವು ಅಧ್ಯಾತ್ಮ ಜೀವನದ ಸಲುವಾಗಿ ಈ ಸುಸಂಸ್ಕೃತ ಪಶುಗಳ ಬಳಿಗೆ ಹೋದಾಗ, ಅವರು ಕೇವಲ ತಮ್ಮ ಹೊಟ್ಟೆ ಹೊರೆಯುವ ಕೆಲಸದಲ್ಲಿಯೇ ತೊಡಗಿ ತೃಪ್ತರಾಗುವೆವು ಮತ್ತು ದೇವರ ಬಗ್ಗೆ ಜಿಜ್ಞಾಸೆ ಮಾಡುವ ಆವಶ್ಯಕತೆಯೇ ಇಲ್ಲ ಎನ್ನುತ್ತಾರೆ. ಅವರು ಅಷ್ಟು ಕಷ್ಟಪಟ್ಟು ದುಡಿಯಲು ಕಾತರರಾಗಿದ್ದರೂ ಕೂಡ, ನಿರುದ್ಯೋಗದ ಸಮಸ್ಯೆ ಸದಾ ಇದಿರಾಗುತ್ತದೆ ಮತ್ತು ನಿಸರ್ಗನಿಯಮದಿಂದಾಗಿ ಇನ್ನಿತರ ತೊಂದರೆಗಳೂ ಉಂಟಾಗುತ್ತವೆ. ಹೀಗಿದ್ದೂ ಅವರು ದೇವರನ್ನು ನಂಬುವ ಆವಶ್ಯಕತೆಯನ್ನು ಹೀಗಳೆಯುತ್ತಲೇ ಇದ್ದಾರೆ.

ನಮಗೆ ಈ ಮಾನವ ಜನ್ಮವು ದೊರೆತದ್ದು ಕೇವಲ ಹಂದಿ, ನಾಯಿಗಳ ಹಾಗೆ ದುಡಿಯಲು ಅಲ್ಲ, ಜೀವನದ ಅತ್ಯಂತ ಪೂರ್ಣಾವಸ್ಥೆಯನ್ನು ಪಡೆದುಕೊಳ್ಳಲು ದೊರೆತದ್ದಾಗಿದೆ. ನಮಗೆ ಅಂತಹ ಪರಿಪೂರ್ಣತೆಯು ಬೇಕಾಗಿರದಿದ್ದರೆ, ನಾವು ಕಷ್ಟಪಡಬೇಕಾಗುವುದು; ನಿಸರ್ಗ ನಿಯಮಗಳು ಹಾಗೆ ಕಷ್ಟಪಡುವಂತೆ ನಮ್ಮನ್ನು ಒತ್ತಾಯಿಸುತ್ತವೆ. ಕಲಿಯುಗಾಂತ್ಯದಲ್ಲಿ ಮನುಷ್ಯರು ಒಂದು ತುಣುಕು ರೊಟ್ಟಿಗಾಗಿ ಕತ್ತೆಗಳ ಹಾಗೆ ಶ್ರಮಿಸಬೇಕಾಗುವುದು. ಈ ಪ್ರಕ್ರಿಯೆ ಈಗಾಗಲೇ ಪ್ರಾರಂಭವಾಗಿದೆ, ಮತ್ತು ವರ್ಷವರ್ಷವೂ ಕಡಮೆ ಪ್ರತಿಫಲಕ್ಕಾಗಿ ಹೆಚ್ಚು ದುಡಿಯಬೇಕಾದ ಪ್ರಸಂಗಗಳು ಹೆಚ್ಚುತ್ತಲೇ ಹೋಗುತ್ತವೆ. ಮನುಷ್ಯರು ಪ್ರಾಣಿಗಳ ಹಾಗೆ ದುಡಿಯಲು ಹುಟ್ಟಿದವರಲ್ಲ, ಮತ್ತು ಮನುಷ್ಯನು ತನ್ನ ಕರ್ತವ್ಯಗಳನ್ನು ನಿರ್ವಹಿಸದಿದ್ದರೆ, ಪ್ರಕೃತಿ ನಿಯಮಾನುಸಾರ ಅವನು ಕೆಳಯೋನಿಗಳಲ್ಲಿ ಜನ್ಮವೆತ್ತಬೇಕಾಗುವುದು. ಜೀವಾತ್ಮನು ನಿಸರ್ಗ ನಿಯಮಾನುಸಾರ, ಈ ಭೌತಿಕ ಜಗತ್ತಿನಲ್ಲಿ ಭೌತಿಕ ಸುಖಭೋಗಕ್ಕಾಗಿ ಹೇಗೆ

ಜನ್ಮ ಪಡೆಯುತ್ತಾನೆ ಮತ್ತು ಅದಕ್ಕೆ ತಕ್ಕ ದೇಹ ಮತ್ತು ಇಂದ್ರಿಯಗಳನ್ನು ಪಡೆಯುತ್ತಾನೆ ಎಂಬುದನ್ನು ಭಗವದ್ಗೀತೆ ಬಹು ಸ್ಪಷ್ಟವಾಗಿ ವಿವರಿಸಿದೆ.

ದೇವರನ್ನು ಸೇರಲು ಪ್ರಯತ್ನಿಸಿಯೂ ಆ ಮಾರ್ಗವನ್ನು ಪೂರೈಸಲಾಗದವರು, ಎಂದರೆ ಪೂರ್ಣ ಕೃಷ್ಣಪ್ರಜ್ಞೆಯನ್ನು ಪಡೆದುಕೊಳ್ಳುವಲ್ಲಿ ವಿಫಲರಾದವರು . ಮುಂದೆ ಆಧ್ಯಾತ್ಮಿಕ ವಾಗಿ ಮುಂದುವರಿದ ಮತ್ತು ಆರ್ಥಿಕವಾಗಿ ಶ್ರೀಮಂತರಾದ ವಣಿಗ್ ವರ್ಗದ ಕುಟುಂಬಗಳಲ್ಲಿ ಜನಿಸುವ ಅವಕಾಶವನ್ನು ಹೊಂದುತ್ತಾರೆ ಎಂದೂ ಭಗವದ್ಗೀತೆಯಲ್ಲಿ ಹೇಳಲಾಗಿದೆ. ಯಶಸ್ವಿಯಾಗದ ಇಂತಹ ಪ್ರಯತ್ನಶೀಲರಿಗೆ ಇಂಥ ದೊಡ್ಡ ಕುಟುಂಬಗಳಲ್ಲಿ ಹುಟ್ಟುವ ಅವಕಾಶ ದೊರೆಯುವುದಾದರೆ, ಅಗತ್ಯವಾದ ಯಶಸ್ಸನ್ನು ವಾಸ್ತವಿಕವಾಗಿ ಸಾಧಿಸಿದವರ ಬಗ್ಗೆ ಹೇಳ್ಬೇಕಾಗಿಯೇ ಇಲ್ಲ. ಆದುದರಿಂದ ದೇವತ್ವದೆಡೆಗೆ ಹೋಗುವ ಪ್ರಯತ್ನವು, ಅರ್ಧಕ್ಕೆ ನಿಂತರೂ, ಮುಂದೆ ಒಳ್ಳೆಯ ಜನ್ಮಕ್ಕೆ ದಾರಿಮಾಡಿಕೊಡುವುದು ಖಂಡಿತ. ಆಧ್ಯಾತ್ಮಿಕ ಮತ್ತು ಆರ್ಥಿಕ ಸಿರಿವಂತಿಕೆಯ ಉಭಯವರ್ಗದ ಕುಟುಂಬಗಳಲ್ಲಿ, ತಾನು ಹಿಂದಿನ ಜನ್ಮದಲ್ಲಿ ಬಿಟ್ಟಲ್ಲಿಂದ ಮುಂದೆ ಪ್ರಗತಿಹೊಂದಲು ಒಳ್ಳೆಯ ಅವಕಾಶ ದೊರೆಯುವುದರಿಂದ, ಇವು ಆಧ್ಯಾತ್ಮಿಕ ಪ್ರಗತಿಗೆ ಪ್ರಯೋಜನಕಾರಿಯಾಗಿವೆ. ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ಒಳ್ಳೆಯ ಕುಟುಂಬದಲ್ಲಿರುವ ವಾತಾವರಣವು ಅಧ್ಯಾತ್ಮ ಜ್ಞಾನಸಾಧನೆಗೆ ಅನುಕೂಲಕರವಾಗಿರುತ್ತದೆ. ಹೀಗೆ ಒಳ್ಳೆಯ ಕುಟುಂಬಗಳಲ್ಲಿ ಜನ್ಮವೆತ್ತುವ ಸೌಭಾಗ್ಯ ದೊರೆತುದು ಅವರು ಪೂರ್ವಜನ್ಮಗಳಲ್ಲಿ ಮಾಡಿದ ಭಕ್ತಿಯುತ ಸೇವೆಯ ಫಲದಿಂದಲೇ ಎಂಬುದನ್ನು ಭಗವದ್ಗೀತೆಯು ಅವರಿಗೆ ನೆನಪು ಮಾಡಿಕೊಡುತ್ತದೆ. ದುರ್ದೈವದಿಂದಲೋ ಏನೋ ಈ ಕುಟುಂಬಗಳಲ್ಲಿ ಹುಟ್ಟಿದವರು, ಮಾಯೆಯಿಂದ ದಾರಿತಪ್ಪಿದವರಾಗಿ ಭಗವದ್ಗೀತೆಯ ಕಡೆಗೆ ಗಮನವನ್ನೇ ಹರಿಸುವುದಿಲ್ಲ.

ಒಂದು ಸಿರಿವಂತ ಕುಟುಂಬದಲ್ಲಿ ಹುಟ್ಟುವುದರಿಂದ, ಜೀವನಾರಂಭದಿಂದಲೇ ಸಾಕಷ್ಟು ಆಹಾರ ದೊರಕಿಸುವ ಸಮಸ್ಯೆಯು ಪರಿಹಾರವಾಗುತ್ತದೆ, ಮತ್ತು ಅನಂತರವೂ ಇತರರಿಗಿಂತ ವಿರಾಮವಾದ ಮತ್ತು ಹೆಚ್ಚು ಸುಖಮಯವಾದ ರೀತಿಯಲ್ಲಿ ಜೀವಿಸಬಹುದಾಗಿದೆ. ಈ ಅನುಕೂಲಗಳಿದ್ದು, ಒಬ್ಬನು ಆತ್ಮಸಾಕ್ಷಾತಾರದ ದಿಶೆಯಲ್ಲಿ ಒಳ್ಳೆಯ ಪ್ರಗತಿಯನ್ನು ಸಾಧಿಸಲು ಒಳ್ಳೆಯ ಅವಕಾಶ ದೊರೆಯುವುದು. ಆದರೆ, ದುರ್ದೈವವೋ ಎಂಬಂತೆ, ಇಂದಿನ ಲೋಹ ಯುಗದ (ಇದು ಯಂತ್ರಗಳಿಂದ ಮತ್ತು ಯಾಂತ್ರಿಕ ಜನರಿಂದ ತುಂಬಿದ್ದು) ಪ್ರಭಾವದಿಂದಾಗಿ, ಆ ಸಿರಿವಂತರ ಮಕ್ಕಳು ಇಂದ್ರಿಯ ಭೋಗದ ಮಾಯೆಯಿಂದ ದಾರಿತಪ್ಪಿದ್ದಾರೆ, ಮತ್ತು ಅವರು ಅಧ್ಯಾತ್ಮ ಪ್ರಗತಿಗೆ ತಮಗೆ ದೊರೆತಿರುವ ಸದವಕಾಶವನ್ನು ಮರೆತಿದ್ದಾರೆ. ಅಂತೆಯೇ ನಿಸರ್ಗವು, ತನ್ನ ನಿಯಮಾನುಸಾರ, ಈ ಸುವರ್ಣ ಗೃಹಗಳಲ್ಲಿ ಅಗ್ನಿಸ್ತಂಬನ ಮಾಡುತ್ತಿದೆ. ಸುವರ್ಣನಗರವೆನಿಸಿದ್ದ ಲಂಕಾಪಟ್ಟಣವು ರಾಕ್ಷಸರಾಜನಾದ ರಾವಣನ ಆಧಿಪತ್ಯದಲ್ಲಿ ಸುಟ್ಟು ಭಸ್ಮವಾಯಿತು. ಇದೇ ಪ್ರಕೃತಿ ನಿಯಮ.

ಭಗವದ್ಗೀತೆಯು ಕೃಷ್ಣಪ್ರಜ್ಞೆಯ ದಿವ್ಯ ವಿಜ್ಞಾನದ ಪ್ರಾಥಮಿಕ ಅಧ್ಯಯನವಾಗಿದೆ, ಮತ್ತು ಎಲ್ಲ ಹೊಣೆಯರಿತ ರಾಜ್ಯಾಧಿಪತಿಗಳು ಭಗವದ್ಗೀತೆಯನ್ನು ಗಮನಿಸಿಯೇ ತಮ್ಮ ಆರ್ಥಿಕ ಮತ್ತು ಇತರ ಕಾರ್ಯಗಳನ್ನು ಯೋಚಿಸುವುದು ಅವರ ಕರ್ತವ್ಯವಾಗಿದೆ; ನಾವು ಜೀವನದ ಆರ್ಥಿಕ ಸಮಸ್ಯೆಗಳನ್ನು ತತ್ತರಿಸುತ್ತಿರುವ ವೇದಿಕೆಯಲ್ಲಿ ನಿಂತು ಸರಿದೂಗಿಸಲು

ಹುಟ್ಟಿಬಂದವರಲ್ಲ. ಪ್ರಾಯಃ, ನಾವು ನಿಸರ್ಗ ನಿಯಮಗಳಿಂದ ಉಂಟಾದ ಜೀವನದ ಆತ್ಯಂತಿಕ ಸಮಸ್ಯೆಗಳನ್ನು ಪರಿಹರಿಸಲು ಹುಟ್ಟಿಬಂದವರು. ಆಧ್ಯಾತ್ಮಿಕ ಚಟುವಟಿಕೆಯಿದ್ದ ಹೊರತು ನಾಗರಿಕತೆಯು ಸ್ಥಗಿತಗೊಳ್ಳುತ್ತದೆ. ಆತ್ಮವು ದೇಹಕ್ಕೆ ಚಾಲನೆ ನೀಡುತ್ತದೆ, ಮತ್ತು ಸಜೀವ ದೇಹವು ವಿಶ್ವಕ್ಕೆ ಚಾಲನೆಯನ್ನು ಕೊಡುತ್ತದೆ. ನಾವು ದೇಹವನ್ನು ಮಾತ್ರ ಗಮನಿಸುತ್ತಿದ್ದೇವೆಯೇ ಹೊರತು ದೇಹಕ್ಕೆ ಚಾಲನೆಯನ್ನು ಒದಗಿಸುತ್ತಿರುವ ಆತ್ಮಜ್ಞಾನವನ್ನು ಅರಿತಿಲ್ಲ. ಆತ್ಮಸಂಯೋಗವಿಲ್ಲದೆ ದೇಹವು ನಿಶ್ಚೇಷ್ಟಿತ ಅಥವಾ ಮೃತವೇ ಸರಿ.

ನಾವು ಶಾಶ್ವತ ಜೀವನವನ್ನು ಹೊಂದಲು ಈ ಮಾನವರೂಪೀ ದೇಹವು ಅತ್ಯಂತ ಉತ್ಕೃಷ್ಟವಾದ ಸಾಧನವಾಗಿದೆ. ಭೌತಿಕ ಅಸ್ತಿತ್ವದ ಈ ಅವಿದ್ಯಾ ಸಾಗರವನ್ನು ದಾಟಲು ಈ ದೇಹವು ದುರ್ಲಭವಾದ ಮತ್ತು ಮಹತ್ವದ್ದಾದ ನೌಕೆಯಾಗಿದೆ. ಈ ನೌಕೆಯಲ್ಲಿ, ಅದನ್ನು ದಕ್ಷವಾಗಿ ಪಾರುಗಾಣಿಸುವ ಪರಿಣತ ನಾವಿಕನು, ಎಂದರೆ ಗುರುವಿನ ಸೇವಾಲಾಭವೂ ಲಭ್ಯವಾಗಿದೆ. ದೇವರ ದಯೆಯಿಂದ ನಾವೆಯು ಅನುಕೂಲ ಗಾಳಿಮಾನದ ಸ್ಥಿತಿಯಲ್ಲಿ ಅಂಬುಧಿಯನ್ನು ದಾಟುತ್ತಿದೆ. ಈ ಎಲ್ಲ ಮಂಗಲಕರ ಅಂಶಗಳಿರುವಾಗ, ಈ ಅವಿದ್ಯಾಸಾಗರವನ್ನು ದಾಟಲು ಯಾರು ತಾನೆ ಬಯಸುವುದಿಲ್ಲ ? ಈ ಸದವಕಾಶವನ್ನು ಕಳೆದುಕೊಳ್ಳುವವನು ಕೇವಲ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾನೆಂದೇ ತಿಳಿಯಬೇಕು.

ರೈಲಿನ ಮೊದಲನೆಯ ದರ್ಜೆಯ ಡಬ್ಬೆಯಲ್ಲಿ ಹೆಚ್ಚು ಸೌಲಭ್ಯಗಳಿವೆ ಎಂಬುದು ನಿಜ, ಆದರೆ ರೈಲು ತನ್ನ ಗುರಿಯತ್ತ ಸಾಗದಿದ್ದರೆ, ಹವಾನಿಯಂತ್ರಿತ ಡಬ್ಬೆಯಲ್ಲಿ ಕುಳಿತಿದ್ದರೂ ದೊರೆಯುವ ಪ್ರಯೋಜನವೇನು ? ಇಂದಿನ ನಾಗರಿಕತೆಯು ಈ ಭೌತಿಕ ದೇಹ ಸೌಖ್ಯವನ್ನೇ ಅತಿಯಾಗಿ ಗಮನಿಸುತ್ತಿದೆ. ಮರಳಿ ದೇವತ್ವದೆಡೆಗೆ ಹೋಗುವುದೇ ಜೀವನದ ನಿಜವಾದ ಗುರಿಯಾಗಿದೆ ಎಂಬುದನ್ನು ಯಾರೂ ತಿಳಿದಿಲ್ಲ. ನಾವು ಕೇವಲ ಸುಖಸೌಲಭ್ಯಗಳಿಗಿರುವ ಬೋಗಿಯಲ್ಲಿ ಕುಳಿತರೆ ಸಾಲದು; ನಮ್ಮ ಗಾಡಿಯು ತನ್ನ ವಾಸ್ತವಿಕ ಗುರಿಯತ್ತ ಸಾಗುತ್ತಿದೆಯೇ, ಇಲ್ಲವೇ ಎಂಬುದನ್ನು ನಾವು ಗಮನಿಸಬೇಕು. ಕಳೆದುಕೊಂಡ ನಮ್ಮ ಆಧ್ಯಾತ್ಮಿಕ ಸ್ವರೂಪವನ್ನು ಪುನಃ ಗಳಿಸಿಕೊಳ್ಳುವುದು ಜೀವನದ ಪರಮ ಆವಶ್ಯಕತೆಯಾಗಿದೆ ಎಂಬುದನ್ನು ಮರೆತು ಈ ಭೌತಿಕ ದೇಹವನ್ನು ಸುಖಮಯಗೊಳಿಸುವುದರಲ್ಲಿ ಯಾವ ಆತ್ಯಂತಿಕ ಪ್ರಯೋಜನವೂ ಇಲ್ಲ. ಮಾನವ ಜೀವಿತವೆಂಬ ಈ ದೋಣಿಯನ್ನು ಅದು ತನ್ನ ಆಧ್ಯಾತ್ಮಿಕ ಗುರಿಯತ್ತ ಮುಂದೆ ಸಾಗಲು ಅನುಕೂಲವಾಗುವ ರೀತಿಯಲ್ಲಿ ರಚಿಸಲಾಗಿದೆ. ಆದರೆ ದುರ್ದೈವದಿಂದ ಐದು ಗಟ್ಟಿಯಾದ ಸರಪಳಿಗಳಿಂದ ಅದು ಬಿಗಿಯಲ್ಪಟ್ಟು ಭೌತಿಕ ಪ್ರಜ್ಞೆಯಲ್ಲಿಯೇ ನಿಂತುಬಿಟ್ಟಿದೆ. ಆ ಸರಪಳಿಗಳೆಂದರೆ (1) ಆಧ್ಯಾತ್ಮಿಕ ಸತ್ಯಸಂಗತಿಗಳ ಅಜ್ಞಾನದಿಂದ ಭೌತಿಕ ದೇಹದ ವ್ಯಾಮೋಹ, (2) ದೈಹಿಕ ಸಂಬಂಧಗಳಿಂದಾಗಿ ಬಾಂಧವರ ಮೇಲಿನ ವ್ಯಾಮೋಹ, (3) ಹುಟ್ಟಿನಿಂದಾಗಿ ಜನ್ಮಭೂಮಿ, ಮನೆ,ಪೀಠೋಪಕರಣ, ಆಸ್ತಿಪಾಸ್ತಿಗಳು, ವ್ಯವಹಾರ, ಕಾಗದಪತ್ರಗಳು ಇತ್ಯಾದಿಗಳ ಬಗ್ಗೆ ವ್ಯಾಮೋಹ, (4) ಆಧ್ಯಾತ್ಮಿಕ ದೀಪ್ತಿ ಇಲ್ಲದೇ ಸದಾ ಒಂದು ರಹಸ್ಯವಾಗಿಯೇ ಉಳಿಯುವ ಭೌತಿಕ ವಿಜ್ಞಾನದೊಂದಿಗೆ ವ್ಯಾಮೋಹ, ಮತ್ತು (5) ಧಾರ್ಮಿಕ ಆಚರಣೆಗಳನ್ನು ಮತ್ತು ಪವಿತ್ರ ಸಂಸ್ಕಾರಗಳನ್ನು ಪವಿತ್ರಗೊಳಿಸುವ ಪರಮ ದೇವೋತ್ತಮ ಪುರುಷನ ಅಥವಾ ಅವನ ಭಕ್ತರ ಜ್ಞಾನವಿಲ್ಲದೆ ಅವುಗಳಲ್ಲಿ ವ್ಯಾಮೋಹ. ಭೌತಿಕ ಶರೀರವವೆಂಬ ದೋಣಿಯನ್ನು ತಡೆಹಿಡಿದು ನಿಲ್ಲಿಸುವ ವ್ಯಾಮೋಹಗಳನ್ನು ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ

ಸುದೀರ್ಘವಾಗಿ ವಿವರಿಸಿದೆ. ಅಲ್ಲಿ ಅವುಗಳನ್ನು ಭೂಮಿಯಲ್ಲಿ ಆಳವಾಗಿ ಬೇರುಬಿಟ್ಟು ಸದಾ ಬೆಳೆಯುತ್ತಲೇ ಇರುವ **ಅಶ್ವತ್ಥ ಮರಕ್ಕೆ** ಹೋಲಿಸಲಾಗಿದೆ. ಅಂಥ ಭದ್ರವಾಗಿ ಬೇರುಬಿಟ್ಟ ಅಶ್ವತ್ಥ ಮರವನ್ನು ಕಿತ್ತೆಸೆಯುವುದು ಬಹಳ ಕಷ್ಟ. ಆದರೆ ಭಗವಂತನು ಅದಕ್ಕಾಗಿ ಕೆಳಕಂಡ ವಿಧಾನವನ್ನು ನಿರೂಪಿಸಿದ್ದಾನೆ : "ಈ ವೃಕ್ಷದ ನಿಜವಾದ ರೂಪವು ಈ ಜಗತ್ತಿನಲ್ಲಿ ಕಂಡು ಬರುವುದಿಲ್ಲ. ಅದು ಎಲ್ಲಿ ಪ್ರಾರಂಭವಾಗುತ್ತದೆ, ಎಲ್ಲಿ ಮುಗಿಯುತ್ತದೆ ಅಥವಾ ಅದರ ಮೂಲ ಎಲ್ಲಿ ಎಂಬುದನ್ನು ಯಾರೂ ಅರಿಯಲು ಸಾಧ್ಯವಿಲ್ಲ. ಆದರೆ ಮನುಷ್ಯನು ಬಹಳ ದೃಢ ಮನಸ್ಸಿನಿಂದ ಅಸಂಗ ಶಸ್ತ್ರದಿಂದ ಈ ಮರವನ್ನು ಕಡಿದು ಹಾಕಬೇಕು. ಹಾಗೆ ಮಾಡುವಲ್ಲಿ ಒಂದು ಸಲ ತಲುಪಿದ ಬಳಿಕ ಮತ್ತೆ ಅಲ್ಲಿಂದ ಮರಳದಂಥ ಸ್ಥಳವನ್ನು ಕಂಡುಕೊಳ್ಳಬೇಕು, ಮತ್ತು ಎಲ್ಲವೂ ಯಾವನಿಂದ ಹುಟ್ಟಿಬಂದಿದೆಯೊ ಮತ್ತು ಅನಾದಿಕಾಲದಿಂದ ಯಾವನಲ್ಲಿ ಎಲ್ಲವೂ ಸ್ಥಿತವಾಗಿದೆಯೊ ಆ ಪರಮದೇವೋತ್ತಮ ಪುರುಷನಿಗೆ ಶರಣಾಗತನಾಗಬೇಕು" ('ಭ.ಗೀ.' 15-3,4).

ಈ ವಿಶ್ವಸ್ಥಿತಿಯ ಬಗ್ಗೆ ವಿಜ್ಞಾನಿಗಳಾಗಲಿ ಅಥವಾ ಊಹಾಪೋಹ ಮಾಡುವ ತತ್ತ್ವಜ್ಞಾನಿಗಳಾಗಲಿ ಈ ವರೆಗೂ ಯಾವ ನಿರ್ಣಯಕ್ಕೂ ಬಂದಿಲ್ಲ. ಅವರೆಲ್ಲರೂ ಒಬ್ಬೊಬ್ಬರು ಬೇರೆ ಬೇರೆ ಸಿದ್ಧಾಂತಗಳಿಗೆ ಬಂದಿದ್ದಾರೆ ಅಷ್ಟೆ. ಈ ಭೌತಿಕ ಜಗತ್ತು ಸತ್ಯವಾದುದು ಎಂದು ಕೆಲವರು ಹೇಳಿದರೆ, ಅದು ಕೇವಲ ಕನಸು ಎಂದು ಮತ್ತೆ ಕೆಲವರು ಹೇಳುತ್ತಾರೆ. ಮತ್ತೆ ಕೆಲವರು– ಅದು ಅನಾದಿ ನಿತ್ಯವಾದುದು ಎಂದು ಹೇಳುತ್ತಾರೆ. ಹೀಗೆ ನಮ್ಮ ಲೌಕಿಕ ವಿದ್ವಾಂಸರು ವಿಧವಿಧವಾದ ಅಭಿಪ್ರಾಯಗಳನ್ನು ತಳೆದಿದ್ದಾರೆ, ಆದರೆ ಈ ಭೌತಿಕ ವಿಜ್ಞಾನಿಗಳಾಗಲಿ ಈ ವಿಶ್ವದ ಆದಿಯನ್ನಾಗಲಿ ಅಥವಾ ಅದರ ಇತಿಮಿತಿಗಳನ್ನಾಗಲಿ ಎಂದೂ ಕಂಡುಕೊಂಡಿಲ್ಲ. ಅದು ಯಾವಾಗ ಪ್ರಾರಂಭವಾಯಿತು ಮತ್ತು ಈ ಆಕಾಶದಲ್ಲಿ ಹೇಗೆ ತೇಲುತ್ತಿದೆ ಎಂಬುದನ್ನು ಯಾರೂ ಹೇಳುವಂತಿಲ್ಲ. ಅವರು ತಾತ್ತ್ವಿಕವಾಗಿ ಗುರುತ್ವಾಕರ್ಷಣೆ ನಿಯಮದಂಥ ಕೆಲವೊಂದು ನಿಸರ್ಗ ನಿಯಮಗಳನ್ನು ಪ್ರಸ್ತಾಪಿಸುತ್ತಾರೆ. ಆದರೆ ಅವುಗಳ ವಾಸ್ತವಿಕ ಪ್ರಯೋಗವನ್ನು ತೋರಿಸಿಕೊಡುವುದಿಲ್ಲ. ಸತ್ಯದ ವಾಸ್ತವಿಕ ಜ್ಞಾನಾಭಾವದಿಂದ, ಪ್ರತಿಯೊಬ್ಬನು ತನ್ನದೇ ಆದ ಪ್ರಸಿದ್ಧಿಯನ್ನು ಹೊಂದಲು ತನ್ನ ತನ್ನ ತತ್ತ್ವವನ್ನು ಮುಂದು ಮಾಡಲು ಕಾತುರನಾಗಿದ್ದಾನೆ. ಆದರೆ ನಿಜಸಂಗತಿಯೆಂದರೆ ಈ ಭೌತಿಕ ಜಗತ್ತು ದುಃಖ ದುಮ್ಮಾನಗಳಿಂದ ತುಂಬಿಹೋಗಿದೆ ಮತ್ತು ಕೇವಲ ಅದನ್ನು ಕುರಿತ ಕೆಲವು ತತ್ತ್ವಗಳನ್ನು ಮುಂದೊಡ್ಡಿ ಅವುಗಳಿಂದ ಯಾರೂ ಮುಕ್ತರಾಗುವಂತಿಲ್ಲ. ತನ್ನ ಸೃಷ್ಟಿಯ ಪ್ರತಿಯೊಂದನ್ನು ಪೂರ್ತಿಯಾಗಿ ಬಲ್ಲ ಆ ಪರಮದೇವೋತ್ತಮ ಪುರುಷನು ನಮಗೆ ತಿಳಿಸುವುದೇನೆಂದರೆ, ನಾವು ಈ ದುಃಖಮಯ ಅಸ್ತಿತ್ವದಿಂದ ಹೊರಬರುವಂತೆ ಆಶಿಸುವುದೇ ನಮಗೆ ಅತ್ಯುತ್ತಮ ಹಿತದೃಷ್ಟಿಯಾಗಿದೆ. ನಾವು ಭೌತಿಕವಾದ ಎಲ್ಲ ವಸ್ತುಗಳಿಂದ ಅಸಂಗರಾಗಬೇಕು. ಈ ಪರಿಸ್ಥಿತಿಯ ಅತ್ಯುತ್ತಮ ಲಾಭ ಪಡೆಯಲು ನಮ್ಮ ಭೌತಿಕ ಅಸ್ತಿತ್ವವನ್ನು ನೂರಕ್ಕೆ ನೂರರಷ್ಟು ಆಧ್ಯಾತ್ಮೀಕರಿಸಿಕೊಳ್ಳಬೇಕು. ಕಬ್ಬಿಣವು ಬೆಂಕಿಯಲ್ಲ. ಆದರೆ ಅದನ್ನು ಸತತವಾಗಿ ಬೆಂಕಿಯ ಸಂಪರ್ಕದಿಂದ ಬೆಂಕಿಯಾಗಿ ಪರಿವರ್ತಿಸಬಹುದು. ಅದೇ ಪ್ರಕಾರ, ಆಧ್ಯಾತ್ಮಿಕ ಚಟುವಟಿಕೆಗಳ ಮೂಲಕ ಚಟುವಟಿಕೆಗಳಲ್ಲಿ ಅಸಂಗತ್ವವನ್ನು ಸಾಧಿಸಿಕೊಳ್ಳಬಹುದು. ಕರ್ಮಸನ್ನ್ಯಾಸದಿಂದಲ್ಲ. ಪ್ರಾಪಂಚಿಕ ಕರ್ಮಸನ್ನ್ಯಾಸವು ನೇತ್ಯಾತ್ಮಕವಾದ ಭೌತಿಕ ಕ್ರಿಯೆಯಾಗಿದೆ. ಆದರೆ, ಆಧ್ಯಾತ್ಮಿಕ ಚಟುವಟಿಕೆಯು ಕೇವಲ ಭೌತಿಕ ಕ್ರಿಯೆಯ ನಿವೃತ್ತಿಯಷ್ಟೇ ಅಲ್ಲದೆ ನಮ್ಮ ನಿಜ

ಜೀವನದ ಸಂಸ್ಫುರಣವೂ ಆಗಿದೆ. ನಾವು ನಮ್ಮ ನಿತ್ಯಸ್ವರೂಪವನ್ನು ಅಥವಾ ಪರಾತ್ಪರನಾದ ಬ್ರಹ್ಮನಲ್ಲಿ ನಮ್ಮ ಆಧ್ಯಾತ್ಮಿಕ ಅಸ್ತಿತ್ವವನ್ನು ಕಂಡುಕೊಳ್ಳಲು ಆಸಕ್ತರಾಗಿರಬೇಕು. ಬ್ರಹ್ಮನ ಅನಾದಿ ನಿತ್ಯಲೋಕವನ್ನು ಭಗವದ್ಗೀತೆಯಲ್ಲಿ ವರ್ಣಿಸಲಾಗಿದೆ. ಅದು ಒಂದು ಸಲ ಅಲ್ಲಿಗೆ ಹೋದ ಬಳಿಕ ಅಲ್ಲಿಂದ ಯಾರೂ ಮರಳದಂಥ ನಿತ್ಯಲೋಕವಾಗಿದೆ. ಅದೇ ಭಗವದ್ಧಾಮ.

ನಮ್ಮ ಇಂದಿನ ಭೌತಿಕ ಜೀವನವು ಎಲ್ಲಿ ಪ್ರಾರಂಭವಾಯಿತೆಂಬುದನ್ನು ಹೇಳುವುದು ಸಾಧ್ಯವಿಲ್ಲ. ನಾವು ಈ ಭೌತಿಕ ಅಸ್ತಿತ್ವದಲ್ಲಿ ಹೇಗೆ ಬದ್ಧರಾದೆವು ಎಂಬುದನ್ನು ತಿಳಿದುಕೊಳ್ಳುವ ಆವಶ್ಯಕತೆಯೂ ಇಲ್ಲ. ಈ ಭೌತಿಕ ಜೀವನವು ಹೇಗೋ ಎಂತೋ ಅನಾದಿಕಾಲದಿಂದ ನಡೆದುಬಂದಿದೆ, ಮತ್ತು ನಾವು ಈಗ ಎಲ್ಲ ಕಾರಣಗಳ ಮೂಲ ಕಾರಣನಾದ ಭಗವಂತನಿಗೆ ಶರಣಾಗತರಾಗುವುದೇ ನಮ್ಮ ಕರ್ತವ್ಯವೆಂದು ತಿಳಿದುಕೊಂಡರೆ ಸಾಕು. ಮರಳಿ ಭಗವದ್ಧಾಮದೆಡೆಗೆ ಹೋಗುವ ಕುರಿತ ಪ್ರಾಥಮಿಕ ಅರ್ಹತೆಗಳನ್ನು ಭಗವದ್ಗೀತೆಯಲ್ಲಿ ತಿಳಿಸಲಾಗಿದೆ ('ಭ.ಗೀ.' 15.5).

"ಮೋಹದಿಂದ, ಮಿಥ್ಯಾಪ್ರತಿಷ್ಠೆಯಿಂದ ಮತ್ತು ಸುಳ್ಳು ಸಂಗದೋಷದಿಂದ ಮುಕ್ತನಾದವನು, ನಿತ್ಯವಸ್ತುಗಳನ್ನು ಅರಿತುಕೊಂಡವನು ಮತ್ತು ಭೌತಿಕ ಕಾಮವರ್ಜಿತನಾಗಿ ಸುಖದುಃಖಗಳ ದ್ವಂದ್ವಗಳಿಂದ ಮುಕ್ತನಾದವನು ಮತ್ತು ಪರಮ ಪುರುಷನಿಗೆ ಹೇಗೆ ಶರಣಾಗತನಾಗುವುದು ಎಂಬುದನ್ನು ತಿಳಿದವನು ನಿತ್ಯಲೋಕವನ್ನು ಹೊಂದುತ್ತಾನೆ." ತನ್ನ ಆಧ್ಯಾತ್ಮಿಕ ಸ್ವರೂಪವನ್ನು ಖಚಿತವಾಗಿ ಅರಿತುಕೊಂಡವನು ಭೌತಿಕ ಅಸ್ತಿತ್ವದ ಕಲ್ಪನೆಯಿಂದ ಮುಕ್ತನಾಗುತ್ತಾನೆ, ಮತ್ತು ಆವನು ಮೋಹದಿಂದಲೂ ಮತ್ತು ಭೌತಿಕ ಗುಣಗಳ ಪರಿಣಾಮಗಳಿಂದಲೂ ಮುಕ್ತನಾಗಿರುತ್ತಾನೆ ಮತ್ತು ಅವನು ಇಂದ್ರಿಯಭೋಗದಿಂದ ಸಂಪೂರ್ಣವಾಗಿ ನಿರಸ್ತನಾಗಿ ಸದಾ ಆತ್ಮಜ್ಞಾನದ ಅರಿವಿನಲ್ಲಿ ತೊಡಗಿ ದೇವತ್ವದೆಡೆಗೆ ಮರಳುತ್ತಾನೆ. ಅಂಥ ವ್ಯಕ್ತಿಯನ್ನು ಮೂಢರಿಂದ ಸಂಪೂರ್ಣ ಭಿನ್ನವಾದ ಅಮೂಢ ವ್ಯಕ್ತಿಯೆಂದು ಕರೆಯಲಾಗುತ್ತದೆ. ಅವನು ಸುಖದುಃಖಗಳ ದ್ವಂದ್ವದಿಂದ ಮುಕ್ತನಾಗಿರುತ್ತಾನೆ.

ಭಗವದ್ಧಾಮದ ಸ್ವರೂಪವೇನು ? ಅದನ್ನು ಈ ಮುಂದೆ ಹೇಳಿರುವಂತೆ, ಭಗವದ್ಗೀತೆಯಲ್ಲಿ (15.6) ವಿವರಿಸಲಾಗಿದೆ: "ನನ್ನ ಧಾಮವು ಚಂದ್ರ ಸೂರ್ಯರಿಂದಾಗಲೀ ಅಥವಾ ವಿದ್ಯುತ್‌ಶಕ್ತಿಯಿಂದಾಗಲೀ ಪ್ರಕಾಶಿತವಾಗಿಲ್ಲ. ನನ್ನ ಧಾಮವನ್ನು ಹೊಂದಿದವನು ಮತ್ತೆ ಈ ಭೌತಿಕ ಪ್ರಪಂಚಕ್ಕೆ ಎಂದೂ ಮರಳುವುದಿಲ್ಲ."

ಭಗವಂತನೇ ಈ ಎಲ್ಲ ಗ್ರಹವ್ಯೂಹಗಳ ಸರ್ವಸ್ವಾಮಿಯಾಗಿರುವುದರಿಂದ ಈ ಸೃಷ್ಟಿಯ ಪ್ರತಿಯೊಂದು ಸ್ಥಳವೂ ಅವನ ಲೋಕದಲ್ಲಿಯೇ ಸೇರಿದ್ದರು ಕೂಡ ನಾವು ಈಗಿರುವ ಪ್ರಪಂಚದಿಂದ ಸಂಪೂರ್ಣವಾಗಿ ಭಿನ್ನವಾದ ಭಗವಂತನ ಒಂದು ಪ್ರತ್ಯೇಕ ಲೋಕವೇ ಇದೆ. ಅದನ್ನು "ಪರಮಂ" ಎಂದು ಹೇಳುತ್ತಾರೆ. ಈ ಲೋಕದಲ್ಲಿಯೂ ಕೂಡ ಉತ್ತಮ ಮತ್ತು ಕೆಳ ಮಟ್ಟದ ಜೀವನಗಳಿಂದ ಕೂಡಿದ ಅನೇಕ ದೇಶಗಳಿವೆ. ಈ ಭೂಮಂಡಲವಲ್ಲದೆ, ಪ್ರಪಂಚದಲ್ಲೆಲ್ಲ ಹರಡಿಕೊಂಡ ಅಸಂಖ್ಯ ಇತರ ಗ್ರಹಗಳೂ ಇವೆ, ಮತ್ತು ಅವುಗಳಲ್ಲಿ ಕೆಲವು ಉತ್ತಮ ಲೋಕಗಳೂ, ಕೆಲವು ಅಧೋಲೋಕಗಳೂ ಇದೆ. ಏನೇ ಇದ್ದರೂ ಪರಮಾತ್ಮನ ಬಹಿಃಶಕ್ತಿಯ ವ್ಯಾಪ್ತಿಗೊಳಪಟ್ಟ ಗ್ರಹಗಳು ಭೌತಿಕ ಪ್ರಪಂಚಕ್ಕೆ ಸೇರಿರುವುದರಿಂದ, ಅವು ಅಂಧಕಾರ ಲೋಕ

ಗಳಾಗಿದ್ದು ಅಲ್ಲಿ ಸೂರ್ಯನ ಕಿರಣಗಳಾಗಲೀ, ಅಗ್ನಿಯ ಬೆಳಕಾಗಲೀ ಅಗತ್ಯವಾಗುತ್ತದೆ. ಇದರಾಚೆಗೆ ಅಧ್ಯಾತ್ಮ ಲೋಕವುಂಟು. ಅದು ಪರಮಾತ್ಮನ ದಿವ್ಯಶಕ್ತಿಯಿಂದ ಪ್ರವರ್ತಿತವಾಗಿದೆ ಯೆಂದು ವರ್ಣಿಸಲಾಗುತ್ತದೆ. ಅದನ್ನೇ ಉಪನಿಷತ್ತುಗಳಲ್ಲಿ ಹೀಗೆ ವರ್ಣಿಸಲಾಗಿದೆ : "ಅಲ್ಲಿ ಚಂದ್ರ, ಸೂರ್ಯ ಅಥವಾ ನಕ್ಷತ್ರಗಳ ಯಾವ ಆವಶ್ಯಕತೆಯೂ ಇಲ್ಲ. ಅದು ವಿದ್ಯುಚ್ಛಕ್ತಿ ಯಿಂದಾಗಲೀ ಅಥವಾ ಯಾವುದೇ ಬಗೆಯ ಅಗ್ನಿರ್ಮಯ ಜ್ಯೋತಿಯಿಂದಾಗಲೀ ಬೆಳಗುತ್ತಿಲ್ಲ. ಈ ಎಲ್ಲ ಭೌತಿಕ ಲೋಕಗಳು ಆ ಅಧ್ಯಾತ್ಮ ಜ್ಯೋತಿಯ ಪ್ರಕಾಶದಿಂದಲೇ ಬೆಳಗುತ್ತಿವೆ. ಆ ಅಧ್ಯಾತ್ಮ ಸ್ವರೂಪವು ಸ್ವಯಂಪ್ರಕಾಶಿತವಾಗಿರುವುದರಿಂದ ನಾವು ಕಟ್ಟಿರುಳಿನಲ್ಲಿ ಕೂಡ ಬೆಳಕಿನ **ಕಿರಣ**ವನ್ನು ಅನುಭವಿಸುತ್ತೇವೆ." 'ಹರಿವಂಶ'ದಲ್ಲಿ ಸ್ವತಃ ಭಗವಂತನೇ ಈ ಮುಂದಿನಂತೆ ಅಧ್ಯಾತ್ಮ ಸ್ವರೂಪವನ್ನು ಬಣ್ಣಿಸಿದ್ದಾನೆ : "ವ್ಯಕ್ತಿಶೂನ್ಯ ಬ್ರಹ್ಮನ ಪ್ರಕಾಶಮಯ ಜ್ಯೋತಿಯು ಭೌತಿಕ ಮತ್ತು ಆಧ್ಯಾತ್ಮಿಕ ಎಲ್ಲ ಇರುವಿಕೆಗಳನ್ನು ಪ್ರಕಾಶಮಾನಗೊಳಿಸುತ್ತದೆ. ಆದರೆ, ಓ ಭಾರತ, ಈ ಬ್ರಹ್ಮಜ್ಯೋತಿಯ ಪ್ರಕಾಶವು ನನ್ನ ದೇಹದಿಂದ ಹೊರಡುವ ಉಜ್ವಲ ಕಾಂತಿ ಎಂಬುದನ್ನು ನೀನು ತಿಳಿದುಕೋ". ಬ್ರಹ್ಮಸಂಹಿತೆಯಲ್ಲಿ ಕೂಡ ಈ ಮಾತನ್ನು ದೃಢಪಡಿಸ ಲಾಗಿದೆ. ನಾವು ಗಗನ ನೌಕೆಗಳಂಥ ಯಾವುದೇ ಭೌತಿಕ ಸಾಧನಗಳಿಂದ ಆ ಲೋಕವನ್ನು ಹೊಂದಬಹುದು ಎಂದು ತಿಳಿಯಕೂಡದು. ಆದರೆ, ಆ ಕೃಷ್ಣನ ಆಧ್ಯಾತ್ಮಿಕ ಲೋಕವನ್ನು ಹೊಂದಬಹುದಾದವನು ಚ್ಯುತಿಯಿಲ್ಲದ ನಿತ್ಯ ಆತ್ಮಾನಂದವನ್ನು ಅನುಭವಿಸುತ್ತಾನೆ ಎಂಬು ದನ್ನು ಮಾತ್ರ ನಾವು ನಿಶ್ಚಯವಾಗಿ ತಿಳಿದುಕೊಳ್ಳಬೇಕು. ನಾಶಶರೀರಿಗಳಾದ ನಾವು ಇಬ್ಬಗೆಯ ಅಸ್ತಿತ್ವವನ್ನು ಹೊಂದಿದ್ದೇವೆ. ಒಂದು ಭೌತಿಕ ಸ್ವರೂಪದ್ದು, ಅದು ಹುಟ್ಟು, ಸಾವು, ಮುಪ್ಪು ಮತ್ತು ರೋಗಾದಿ ದುಃಖಗಳಿಂದ ತುಂಬಿದೆ; ಮತ್ತೊಂದು ಆಧ್ಯಾತ್ಮಿಕ ಸ್ವರೂಪದ್ದು; ಅಲ್ಲಿ ಅನಾದಿ ನಿತ್ಯವಾದ ಜ್ಞಾನಾನಂದಗಳಿಂದ ಕೂಡಿದ ಆಧ್ಯಾತ್ಮಿಕ ಅಸ್ತಿತ್ವವಿದೆ. ಭೌತಿಕ ಜಗತ್ತಿನಲ್ಲಿ ನಾವು ಭೌತಿಕ ದೇಹ ಮತ್ತು ಮನಸ್ಸುಗಳ ಭೌತಿಕ ಭಾವನೆಯಿಂದ ನಿಯಂತ್ರಿತರಾಗಿರುತ್ತೇವೆ. ಆದರೆ, ಆಧ್ಯಾತ್ಮಿಕ ಅಸ್ತಿತ್ವದಲ್ಲಿ ಪರಮ ದೇವೋತ್ತಮ ಪುರುಷನ ದಿವ್ಯಸಂಪರ್ಕ ಹೊಂದಿ ಸದಾ ಸುಖಾನುಭೂತಿಯನ್ನು ಹೊಂದಬಹುದು. ಆಧ್ಯಾತ್ಮಿಕ ಅಸ್ತಿತ್ವದಲ್ಲಿ ನಮಗೆ ಭಗವಂತ ನಿಂದ ಎಂದೂ ಸಂಪರ್ಕ ತಪ್ಪುವುದಿಲ್ಲ.

ಕೃಷ್ಣಪ್ರಜ್ಞಾ ಆಂದೋಲನವು ಮಾನವ ಲೋಕಕ್ಕೆ ಈ ಅಧ್ಯಾತ್ಮ ಇರುವಿಕೆಯ ಜ್ಞಾನ ವನ್ನು ತಂದುಕೊಡುವುದೇ ಆಗಿದೆ. ನಮ್ಮ ಸದ್ಯದ ಭೌತಿಕ ಪ್ರಜ್ಞೆಯಲ್ಲಿ ನಾವು ಇಂದ್ರಿಯಾತ್ಮಕ ಭೌತಿಕ ಜೀವನದ ಭಾವನೆಗೆ ಅಂಟಿಕೊಂಡಿದ್ದೇವೆ. ಆದರೆ, ಈ ಕಲ್ಪನೆಯನ್ನು ಕೃಷ್ಣಪ್ರಜ್ಞೆ ಯಿಂದ ಕೂಡಿದ ಭಕ್ತಿಯುತ ಸೇವೆಯಿಂದ ಒಡನೆಯೇ ನಿವಾರಿಸಿಕೊಳ್ಳಬಹುದು. ನಾವು ಭಕ್ತಿಯುತ ಸೇವೆಯ ತತ್ವಗಳನ್ನು ಅನುಸರಿಸಿದರೆ, ಭೌತಿಕ ಜೀವನದ ಕಲ್ಪನೆಗಳನ್ನು ದಾಟಿ ನಮ್ಮ ಅನೇಕ ಭೌತಿಕ ಕ್ರಿಯೆಗಳಲ್ಲಿ ತೊಡಗಿದ್ದೂ ಕೂಡ ಸತ್ವ, ರಜಸ್ ಮತ್ತು ತಮೋಗುಣ ಗಳಿಂದ ಮುಕ್ತರಾಗಬಹುದು. ಭೌತಿಕ ಪ್ರಪಂಚದಲ್ಲಿ ಪ್ರವೃತ್ತನಾದ ಪ್ರತಿಯೊಬ್ಬನೂ ಮರಳಿ "ದೇವತ್ವದೆಡೆಗೆ" ಎಂಬ ಗ್ರಂಥದ ಮತ್ತು ಕೃಷ್ಣಪ್ರಜ್ಞೆಯ ಆಂದೋಲನದ ಇತರ ಸಾಹಿತ್ಯಾವ ಲೋಕನದಿಂದ ಅತ್ಯುತ್ತಮ ಪ್ರಯೋಜನವನ್ನು ಪಡೆದುಕೊಳ್ಳಬಹುದು. ಈ ಸಾಹಿತ್ಯವು, ಜನರು ಈ ಭೌತಿಕ ಅಸ್ತಿತ್ವದ ಅದ್ಭುತವಾದ ಅಶ್ವತ್ಥ ಮರದ ಬೇರುಗಳನ್ನು ನಿರ್ಮೂಲ ಮಾಡಲು ಸಹಾಯಕವಾಗುವುದು. ಭೌತಿಕ ಜೀವನದ ಎಲ್ಲ ಕಲ್ಪನೆಗಳಿಗೆ ಸಂಬಂಧಿಸಿದ ಪ್ರತಿ ಯೊಂದನ್ನೂ ಪರಿತ್ಯಜಿಸಲು ಮತ್ತು ಪ್ರತಿಯೊಂದು ವಸ್ತುವಿನಲ್ಲಿ ದಿವ್ಯಾಮೃತವನ್ನು

ಅನುಭವಿಸಲು ಈ ಸಾಹಿತ್ಯ ನಮಗೆ ತಕ್ಕ ತರಬೇತಿಯನ್ನು ನೀಡುವ ಅಧಿಕೃತ ಸಾಹಿತ್ಯವಾಗಿದೆ. ನಾವು ಈ ಘಟ್ಟವನ್ನು ತಲುಪಬೇಕಾದರೆ ಕೇವಲ ಭಕ್ತಿಯುತ ಸೇವೆಯಿಂದ ಸಾಧ್ಯವೇ ಹೊರತು ಬೇರಾದ ಮಾರ್ಗವಿಲ್ಲ. ಇಂತಹ ಸೇವೆಯನ್ನು ಸಲ್ಲಿಸುವ ಮೂಲಕ ನಾವು ಈ ಜೀವನದಲ್ಲಿದ್ದುಕೊಂಡೇ ಕೂಡಲೇ ಮೋಕ್ಷವನ್ನು ಗಳಿಸಬಹುದು. ಅನೇಕ ಆಧ್ಯಾತ್ಮಿಕ ಪ್ರಯತ್ನಗಳು ಭೌತಿಕ ಛಾಯೆ ಹೊಂದಿರುತ್ತವೆ. ಆದರೆ ಶುದ್ಧ ಭಕ್ತಿಯುತ ಸೇವೆಯು ಎಲ್ಲ ಭೌತಿಕ ಮಾಲಿನ್ಯದಿಂದ ದೂರವಾಗಿ ದಿವ್ಯವಾದುದಾಗಿರುತ್ತದೆ. ಮರಳಿದೇವತ್ವದೆಡೆಗೆ ಹೋಗಬಯಸುವವರು ಕೃಷ್ಣಪ್ರಜ್ಞಾ ಆಂದೋಲನದ ತತ್ವಗಳನ್ನು ಅನುಸರಿಸಿದರೆ ಮತ್ತು ಪರಮ ದೇವೋತ್ತಮ ಪುರುಷನಾದ ಮತ್ತು ಸರ್ವಸ್ವಾಮಿಯಾದ ಕೃಷ್ಣನ ಪಾದಾರವಿಂದಗಳಲ್ಲಿ ಕೇವಲ ತಮ್ಮ ಪ್ರಜ್ಞೆಯನ್ನು ಕೇಂದ್ರೀಕರಿಸಿದರೆ ಸಾಕು.



# ಕೃಷ್ಣಪ್ರಜ್ಞೆ ಎಂದರೇನು ?

**ಇದು ಸ್ಯಾಂಡಿ ನಿಗ್ಸನ್ ಎಂಬ ವರದಿಗಾರಳೊಂದಿಗೆ ಫಿಲಿಡೆಲ್ಫಿಯ ಕೃಷ್ಣ ಪ್ರಜ್ಞಾ ಕೇಂದ್ರದ ಶ್ರೀಲ ಪ್ರಭುಪಾದರ ನಿವಾಸದಲ್ಲಿ ಜುಲೈ 1975ರಲ್ಲಿ ನಡೆದ ಸಂದರ್ಶನ. ಈ ಚರ್ಚೆಯು ಕೃಷ್ಣಪ್ರಜ್ಞೆಯ ಅರಿವಿಗೆ ಅತ್ಯುತ್ತಮ ಪ್ರಸ್ತಾವನೆ ಯನ್ನೊದಗಿಸುತ್ತದೆ ಮತ್ತು ಹರೇ ಕೃಷ್ಣ ಮಂತ್ರ, ಗುರು ಮತ್ತು ದೇವರೊಡನೆ ಸಂಬಂಧ, ನಿಜ ಮತ್ತು ಸುಳ್ಳು ಗುರುಗಳ ನಡುವಿನ ವ್ಯತ್ಯಾಸ, ಕೃಷ್ಣಪ್ರಜ್ಞೆಯಲ್ಲಿ ಮಹಿಳೆಯರ ಪಾತ್ರ, ಭಾರತೀಯ ಜಾತಿ ಪದ್ಧತಿ ಮತ್ತು ಕ್ರಿಸ್ತಪ್ರಜ್ಞೆ ಮತ್ತು ಕೃಷ್ಣಪ್ರಜ್ಞೆಯ ಪರಸ್ಪರ ಸಂಬಂಧ—ಇಂಥ ಮೂಲಭೂತ ವಿಷಯಗಳನ್ನು ಒಳಗೊಂಡಿದೆ.**

ಮಿಸ್ ನಿಗ್ಸನ್ : ನನ್ನ ಮೊದಲನೆಯ ಪ್ರಶ್ನೆಯು ಮೂಲಭೂತ ಸ್ವರೂಪದ್ದಾಗಿದೆ. ಕೃಷ್ಣಪ್ರಜ್ಞೆ ಎಂದರೇನು ?

ಶ್ರೀಲ ಪ್ರಭುಪಾದ : ಕೃಷ್ಣ ಅಂದರೆ ದೇವರು. ಅವನೇ ನಮ್ಮ ಮೂಲ ತಂದೆ ಯಾಗಿರುವುದರಿಂದ ನಾವೆಲ್ಲರೂ ಅವನೊಂದಿಗೆ ಅನ್ಯೋನ್ಯ ಸಂಬಂಧ ಹೊಂದಿದ್ದೇವೆ. ಆದರೆ, ನಾವು ಈ ಸಂಬಂಧವನ್ನು ಮರೆತಿದ್ದೇವೆ. "ದೇವರೊಡನೆ ನನ್ನ ಸಂಬಂಧವೇನು ? ಜೀವನದ ಗುರಿಯೇನು ?" ಎಂಬುದನ್ನು ತಿಳಿದುಕೊಳ್ಳಲು ನಾವು ಆಸಕ್ತಿ ಹೊಂದಿದಾಗ, ನಾವು ಕೃಷ್ಣ ಪ್ರಜ್ಞಾವಂತರೆನಿಸಿಕೊಳ್ಳುತ್ತೇವೆ.

ಮಿಸ್ ನಿಗ್ಸನ್ : ಸಾಧಕನಲ್ಲಿ ಕೃಷ್ಣಪ್ರಜ್ಞೆಯು ಹೇಗೆ ಬೆಳವಣಿಗೆ ಹೊಂದುತ್ತದೆ ?

ಶ್ರೀಲ ಪ್ರಭುಪಾದ : ಕೃಷ್ಣಪ್ರಜ್ಞೆಯು ಮುಂಚಿನಿಂದಲೇ ಪ್ರತಿಯೊಬ್ಬರ ಹೃದಯದ ಅಂತರಾಳದಲ್ಲಿರುತ್ತದೆ. ಆದರೆ ನಮ್ಮ ಭೌತಿಕ ಬದ್ಧ ಜೀವನದಿಂದಾಗಿ ನಾವು ಅದನ್ನು ಮರೆತಿರುತ್ತೇವೆ. ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ, ಹರೇ ರಾಮ ಹರೇ ರಾಮ, ರಾಮ ರಾಮ ಹರೇ ಹರೇ-ಎಂಬ ಹರೇ ಕೃಷ್ಣ ಮಹಾ ಮಂತ್ರವನ್ನು ಜಪಿಸುವ ವಿಧಾನದಿಂದ ನಮ್ಮಲ್ಲಿ ಮೊದಲಿನಿಂದಲೇ ಇದ್ದ ಕೃಷ್ಣಪ್ರಜ್ಞೆಯು ನಮಗೆ ಲಭಿಸುತ್ತದೆ. ಉದಾಹರಣೆಗೆ : ಕೆಲವೇ ತಿಂಗಳುಗಳ ಹಿಂದೆ ಅಮೆರಿಕದ ಮತ್ತು ಯೂರೋಪಿನ ಈ ಹುಡುಗ ಹುಡುಗಿಯರಿಗೆ ಕೃಷ್ಣನ ಬಗ್ಗೆ ಅರಿವಿರಲಿಲ್ಲ. ಆದರೆ, ಅವರು ಹರೇ ಕೃಷ್ಣ ನಾಮ ಜಪ ಮಾಡುತ್ತಿರುವುದನ್ನು ಮತ್ತು ರಥಯಾತ್ರೆಯಲ್ಲಿ (ಕೃಷ್ಣಪ್ರಜ್ಞಾ ಆಂದೋಲನದವರು ವಿಶ್ವದ ನಗರಗಳಲ್ಲೆಲ್ಲ ನಡೆಸುವ ವಾರ್ಷಿಕ ಉತ್ಸವ) ಹೇಗೆ ಆನಂದಾತಿಶಯದಿಂದ ನರ್ತಿಸುತ್ತಿದ್ದರೆಂಬುದನ್ನು ನಿನ್ನೆ ತಾನೆ ಕಂಡಿದ್ದೇವೆ. ಇದು ಕೃತಕವೆಂದು ನೀವು ಭಾವಿಸುವಿರಾ ? ಇಲ್ಲ, ಯಾರೂ ಅಸಹಜ ರೀತಿಯಲ್ಲಿ

ಒಟ್ಟಾಗಿ ಗಂಟೆಗಟ್ಟಲೆ **ಕೀರ್ತಿಸಲಾರರು,** ನರ್ತಿಸಲಾರರು. ಅವರೆಲ್ಲ ನೈಜವಿಧಾನವನ್ನನು ಸರಿಸಿ ತಮ್ಮ ಕೃಷ್ಣಪ್ರಜ್ಞೆಯನ್ನು ಜಾಗೃತಗೊಳಿಸಿಕೊಂಡಿದ್ದಾರೆ. ಇದನ್ನು ಚೈತನ್ಯ 'ಚರಿತಾ ಮೃತ'ದಲ್ಲಿ ವಿವರಿಸಲಾಗಿದೆ. (ಮಧ್ಯಲೀಲಾ 22.107).

ನಿತ್ಯಸಿದ್ಧ ಕೃಷ್ಣಪ್ರೇಮ 'ಸಾಧ್ಯ' ಕಭು ನಯ
ಶ್ರವಣಾದಿ–ಶುದ್ಧ-ಚಿತ್ತೇ ಕರಯೆ ಉದಯ

ಕೃಷ್ಣಪ್ರಜ್ಞೆಯು ಪ್ರತಿಯೊಬ್ಬರ ಹೃದಯದಲ್ಲಿ ಸುಪ್ತವಾಗಿರುತ್ತದೆ. ಒಬ್ಬನು ಭಕ್ತರ ಸಂಗಹೊಂದಿದಾಗ, ಅದು ಜಾಗೃತವಾಗುತ್ತದೆ. ಕೃಷ್ಣಪ್ರಜ್ಞೆ ಎಂಬುದು ಅಸಹಜವಾದುದಲ್ಲ. ಒಬ್ಬ ಯುವ ಹುಡುಗನು ಯುವ ಹುಡುಗಿಯ ಸಂಗದಲ್ಲಿ ಹೇಗೆ ಸಹಜವಾಗಿ ಆಕರ್ಷಿತವಾಗು ತ್ತಾನೋ, ಹಾಗೆಯೇ ಒಬ್ಬನು ಭಕ್ತರ ಸಂಗದಲ್ಲಿ ಕೃಷ್ಣನ ಹೆಸರನ್ನು ಕೇಳಿದೊಡನೆಯೇ ಅವನ ಸುಪ್ತ ಕೃಷ್ಣಪ್ರಜ್ಞೆಯು ಜಾಗೃತವಾಗುತ್ತದೆ.

ಮಿಸ್ ನಿಗ್ಗನ್ : ಕೃಷ್ಣಪ್ರಜ್ಞೆ ಮತ್ತು ಕ್ರಿಸ್ತಪ್ರಜ್ಞೆಯ ನಡುವಿನ ವ್ಯತ್ಯಾಸವೇನು ?

ಶ್ರೀಲ ಪ್ರಭುಪಾದ : ಕ್ರಿಸ್ತಪ್ರಜ್ಞೆಯೂ ಕೃಷ್ಣಪ್ರಜ್ಞೆಯೇ ಸರಿ. ಆದರೆ, ಈಗ ಜನ ಜೀಸಸ್ ಕ್ರೈಸ್ತನ ಆದೇಶಗಳನ್ನು ಎಂದರೆ ಕ್ರೈಸ್ತ ಧರ್ಮದ ನೀತಿನಿಯಮಗಳನ್ನು ಅನುಸರಿಸು ತ್ತಿಲ್ಲವಾದುದರಿಂದ, ಅವರು ದೇವ ಪ್ರಜ್ಞೆಯ ಮಟ್ಟಕ್ಕೆ ತಲುಪುತ್ತಿಲ್ಲ.

ಮಿಸ್ ನಿಗ್ಗನ್ : ಎಲ್ಲ ಧರ್ಮಗಳನ್ನೂ ನೋಡಿದಾಗ ಕೃಷ್ಣಪ್ರಜ್ಞೆಗೆ ಇರುವ ವೈಶಿಷ್ಟ್ಯ ವೇನು ?

ಶ್ರೀಲ ಪ್ರಭುಪಾದ: ಮೂಲತಃ ಧರ್ಮ ಎಂದರೆ ದೇವರನ್ನು ಅರಿತುಕೊಳ್ಳುವುದು ಮತ್ತು ಅವನನ್ನು ಪ್ರೀತಿಸುವುದು. ಅದೇ ಧರ್ಮ. ಈ ಕಾಲದಲ್ಲಿ ತಕ್ಕ ತರಬೇತಿಯಿಲ್ಲದೆ, ಯಾರೂ ದೇವರ ಬಗ್ಗೆ ತಿಳಿದಿಲ್ಲ ; ಅವನನ್ನು ಪ್ರೀತಿಸುವುದಂತೂ ದೂರ ಉಳಿಯಿತು. ಜನ ಕೇವಲ ಚರ್ಚಿಗೆ ಹೋಗಿ, "ಹೇ ದೇವರೆ, ನಮಗೆ ಹೊಟ್ಟೆಗೆ ಅನ್ನ ನೀಡು" ಎಂದು ಪ್ರಾರ್ಥಿಸುವಲ್ಲಿಯೇ ತೃಪ್ತರಾಗಿದ್ದಾರೆ ಶ್ರೀಮದ್ಭಾಗವತದಲ್ಲಿ ಇದು ಕೈತವ ಧರ್ಮ ಎಂದು ಹೇಳಲಾಗಿದೆ. ಕಾರಣ ವೇದರೆ, ಇದರಿಂದ ದೇವರನ್ನು ಅರಿಯುವುದಾಗಲೀ, ಪ್ರೀತಿಸುವುದಾಗಲೀ ನಡೆಯದೆ ಕೇವಲ ಸ್ವಪ್ರಯೋಜನವನ್ನು ಪಡೆದುಕೊಂಡಂತಾಗುತ್ತದೆ. ಎಂದರೆ ದೇವರು ಯಾರು ಎಂಬುದನ್ನು ಮತ್ತು ಅವನನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ಅರಿತುಕೊಳ್ಳದೆ ನಾನು ಯಾವುದೇ ಧರ್ಮವನ್ನು ಅನುಸರಿಸುವೆನೆಂದು ಹೇಳಿದರೆ, ನಾನು ಕೈತವ ಧರ್ಮಚಾರಿಯಾಗುತ್ತೇನೆ. ಕ್ರೈಸ್ತಧರ್ಮದ ಮಟ್ಟಿಗೆ ಹೇಳುವುದಾದರೆ, ದೇವರನ್ನು ಅರಿತುಕೊಳ್ಳಲು ಸಾಕಷ್ಟು ಅವಕಾಶ ನೀಡಲಾಗಿದೆ. ಆದರೆ ಯಾರೂ ಆ ಅವಕಾಶದ ಲಾಭ ಪಡೆಯುತ್ತಿಲ್ಲ. ಉದಾಹರಣೆಗೆ, "ನೀನು ಕೊಲೆಗೈಯ್ಯಬೇಡ" ಎಂದು ಬೈಬಲ್ ಆದೇಶವನ್ನು ನೀಡಿದೆ. ಆದರೆ ಕ್ರಿಶ್ಚನ್ನರು ಜಗತ್ತಿನ ಅತ್ಯಂತ ಉತ್ತಮ ವಧಾಗಾರಗಳನ್ನು (ಕೊಲೆಮನೆ) ನಿಮಿಸಿದ್ದಾರೆ. ಅವರು ಜೀಸಸ್ ಕ್ರೈಸ್ತನ ಆದೇಶಗಳನ್ನು ಉಲ್ಲಂಘಿಸಿ ದೇವಪ್ರಜ್ಞೆಯನ್ನು ಹೊಂದುವುದು ಹೇಗೆ ಸಾಧ್ಯ ? ಇದು ಕೇವಲ ಕ್ರೈಸ್ತ ಧರ್ಮದಲ್ಲಿ ಅಷ್ಟೇ ಅಲ್ಲ, ಎಲ್ಲ ಧರ್ಮಗಳಲ್ಲಿಯೂ ನಡೆದಿದೆ. "ಹಿಂದೂ" "ಮುಸ್ಲಿಮ್",ಅಥವಾ "ಕ್ರಿಶ್ಚನ್" ಎಂಬುದು ಕೇವಲ ಒಂದು ರಬ್ಬರ್ ಮುದ್ರೆಯಾಗಿದೆಯಷ್ಟೆ.

ದೇವರು ಯಾರು ಮತ್ತು ಅವನನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ಅವರ್‍ಯಾರೂ ತಿಳಿದಿಲ್ಲ.

ಮಿಸ್ ನಿಗ್ಸನ್ : ನಿಜಗುರು ಯಾರು ಮತ್ತು ಕಪಟ ಗುರು ಯಾರು ಎಂಬುದನ್ನು ಒಬ್ಬನು ಅರಿತುಕೊಳ್ಳುವುದು ಹೇಗೆ ?

ಶ್ರೀಲ ಪ್ರಭುಪಾದ : ದೇವರನ್ನು ಹೇಗೆ ಅರಿತುಕೊಳ್ಳಬೇಕು ಮತ್ತು ಅವನನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ಯಾರು ಉಪದೇಶಿಸುತ್ತಾರೊ—ಅವರೇ ನಿಜವಾದ ಗುರು. ಕೆಲವು ಸಲ ಖೂಳ ಮಾನವರು "ನಾನೇ ದೇವರು" ಎಂದು ಹೇಳಿ ಜನರನ್ನು ಮೋಸಗೊಳಿಸುತ್ತಾರೆ. ದೇವರು ಯಾರೆಂಬುದನ್ನು ಅರಿಯದ ಜನ ಅಂಥವರನ್ನು ನಂಬುತ್ತಾರೆ. ದೇವರು ಯಾರೆಂಬುದನ್ನು ಮತ್ತು ಅವನನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ಅರಿತುಕೊಳ್ಳಲು ನೀವು ಗಂಭೀರ ಚಿಂತನಶೀಲರಾಗಬೇಕು. ಇಲ್ಲದಿದ್ದರೆ ನೀವು ವೃಥಾ ನಿಮ್ಮ ಕಾಲಹರಣ ಮಾಡುವಿರಿ. ಇದೇ ನಮ್ಮಲ್ಲಿ ಮತ್ತು ಉಳಿದವರಲ್ಲಿ ಇರುವ ವ್ಯತ್ಯಾಸ. ದೇವರನ್ನು ಹೇಗೆ ಅರಿತುಕೊಳ್ಳಬೇಕು ಮತ್ತು ಅವನನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ನೈಜವಾಗಿ ಉಪದೇಶಿಸುವ ಸಂಘವು ನಮ್ಮದೊಂದೇ. ಭಗವದ್ಗೀತೆಯ ಮತ್ತು ಶ್ರೀಮದ್ಭಾಗವತದ ಉಪದೇಶಗಳನ್ನು ಆಚರಿಸಿ, ಪರಮ ದೇವೋತ್ತಮ ಪುರುಷನಾದ ಕೃಷ್ಣನನ್ನು ಹೇಗೆ ಅರಿತುಕೊಳ್ಳಬಹುದು ಎಂಬ ವಿದ್ಯೆಯನ್ನು ನಾವು ನೀಡುತ್ತಿದ್ದೇವೆ. ಈ ಗ್ರಂಥಗಳು ದೇವರನ್ನು ಪ್ರೀತಿಸುವುದೊಂದೇ ನಮ್ಮ ಕರ್ತವ್ಯವೆಂದು ಹೇಳುತ್ತವೆ. ನಮ್ಮ ಆವಶ್ಯಕತೆಗಳನ್ನು ಪೂರೈಸುವಂತೆ ದೇವರನ್ನು ಕೇಳುವುದು ನಮಗೆ ಸೇರಿದ್ದಲ್ಲ. ದೇವರು ಎಲ್ಲರಿಗೂ-ಧರ್ಮರಹಿತನಿಗೂ ಕೂಡ-ಆವಶ್ಯಕತೆಗಳನ್ನು ಪೂರೈಸುತ್ತಾನೆ. ಉದಾಹರಣೆಗೆ : ಬೆಕ್ಕು ನಾಯಿಗಳಿಗೆ ಯಾವ ಧರ್ಮವೂ ಇಲ್ಲ. ಆದರೂ ಕೃಷ್ಣನು ಅವುಗಳ ಜೀವನಾವಶ್ಯಕತೆಗಳನ್ನು ಪೂರೈಸುತ್ತಾನೆ. ಹೀಗಿರುವಾಗ ನಾವು ನಮ್ಮ ನಿತ್ಯ ಹೊಟ್ಟೆಪಾಡಿಗಾಗಿ ದೇವರನ್ನು ಏಕೆ ಕಾಡಬೇಕು ? ಅವನು ಈಗಾಗಲೇ ಅದನ್ನು ಪೂರೈಸುತ್ತಿದ್ದಾನೆ. ಅವನನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ಅರಿತುಕೊಳ್ಳುವುದೇ ನಿಜವಾದ ಧರ್ಮ. ಶ್ರೀಮದ್ಭಾಗವತವು (1.2.6) ಹೀಗೆ ಹೇಳುತ್ತದೆ:

ಸವೈ ಪುಂಸಾಂ
ಪರೋ ಧರ್ಮೋ
ಯತೋ ಭಕ್ತಿರ್ ಅಧೋಕ್ಷಜೇ
ಅಹೈತುಕ್ಯಪ್ರತಿಹತಾ
ಯಯಾತ್ಮಾ ಸುಪ್ರಸೀದತಿ ॥

ಅಹೈತುಕವಾಗಿ ದೇವರನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ಶ್ರೇಷ್ಠಧರ್ಮವು ಬೋಧಿಸುತ್ತದೆ. ನಾನು ದೇವರನ್ನು ಯಾವುದೇ ಪ್ರಯೋಜನಕ್ಕಾಗಿ ಸೇವಿಸಿದರೆ, ಅದು ವ್ಯಾಪಾರವಾಗುವುದೇ ಹೊರತು ಪ್ರೀತಿಯಲ್ಲ. ನಿಜವಾದ ದೇವರ ಪ್ರೀತಿಯೆಂಬುದು **ಅಹೈತುಕೀ ಅಪ್ರತಿಹತಾ** ಆದುದಾಗಿರಬೇಕು. ಅದು ಯಾವುದೇ ಭೌತಿಕ ಕಾರಣದಿಂದ ವಿಚ್ಛಿನ್ನವಾಗಕೂಡದು. ಯಾವ ಷರತ್ತೂ ಇರಕೂಡದು. ಒಬ್ಬನು ದೇವರನ್ನು ನಿಜವಾಗಿ ಪ್ರೀತಿಸಬಯಸಿದರೆ ಅದಕ್ಕೆ ಯಾವ ಆತಂಕವೂ ಇರುವುದಿಲ್ಲ. ಧನಿಕನಾಗಲಿ, ದರಿದ್ರನಾಗಲಿ, ಯುವಕನಾಗಲಿ, ವೃದ್ಧನಾಗಲಿ, ಕರಿಯನಾಗಲಿ, ಬಿಳಿಯನಾಗಲಿ ಯಾರೇ ಆಗಲಿ, ದೇವರನ್ನು ಪ್ರೀತಿಸಬಹುದು.

ಮಿಸ್ ನಿಗ್ಘನ್ : ಎಲ್ಲ ಮಾರ್ಗಗಳು ಒಂದೇ ಗುರಿಯನ್ನು ತಲುಪುವುವೇ ?

ಶ್ರೀಲ ಪ್ರಭುಪಾದ: ಇಲ್ಲ. ಮಾನವರಲ್ಲಿ ನಾಲ್ಕು ವರ್ಗಗಳಿವೆ. ಕರ್ಮಿಗಳು, ಜ್ಞಾನಿಗಳು ಯೋಗಿಗಳು, ಮತ್ತು ಭಕ್ತರು–ಇವರಲ್ಲಿ ಪ್ರತಿಯೊಬ್ಬರು ಭಿನ್ನಭಿನ್ನ ಗುರಿಯನ್ನು ತಲುಪುತ್ತಾರೆ. ಕರ್ಮಿಗಳು ಭೌತಿಕ ಪ್ರಯೋಜನಕ್ಕಾಗಿ ಶ್ರಮಿಸುತ್ತಾರೆ. ಉದಾಹರಣೆಗೆ : ನಗರದಲ್ಲಿ ಅನೇಕ ಜನರು ಹಗಲಿರುಳು ದುಡಿಯುತ್ತಾರೆ, ಮತ್ತು ಸ್ವಲ್ಪ ಹಣಗಳಿಸುವುದೇ ಅವರ ಉದ್ದೇಶ ವಾಗಿರುತ್ತದೆ. ಹೀಗೆ ಅವರು ಫಲಾಪೇಕ್ಷಿ ಕರ್ಮಿಗಳಾಗಿರುತ್ತಾರೆ. ಜ್ಞಾನಿಯಾದವನು, “ನಾನು ಇಷ್ಟೇಕೆ ಕಷ್ಟಪಡುತ್ತಿದ್ದೇನೆ ? ಪಶು ಯಾವ ವೃತ್ತಿಯನ್ನು ಮಾಡುತ್ತಿಲ್ಲ, ಆದಾಗ್ಯು ಅವು ಹೊಟ್ಟೆ ತುಂಬಿಕೊಳ್ಳುತ್ತಿವೆ. ಹೀಗಿರುವಾಗ ನಾನೇಕೆ ವೃಥಾ ಇಷ್ಟು ಕಷ್ಟಪಡಬೇಕು ? ಆದುದರಿಂದ ನಾನು ಜನನ, ಮರಣ, ಮುಪ್ಪು ಮತ್ತು ರೋಗರುಜಿನ ಇವುಗಳಿಂದ ಕೂಡಿದ ಜೀವನದ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಯತ್ನ ಮಾಡಬೇಕು” ಎಂದು ಯೋಚಿಸುತ್ತಾನೆ. ಜ್ಞಾನಿಗಳು ಅಮೃತತ್ವವನ್ನು ಹೊಂದಲು ಯತ್ನಿಸುತ್ತಾರೆ. ಅವರು ದೇವರ ಅಸ್ತಿತ್ವದಲ್ಲಿ ಲೀನರಾದರೆ, ತಾವು ಜನನ, ಮರಣ, ಮುಪ್ಪು ಮತ್ತು ರೋಗರುಜಿನಗಳಿಂದ ಅಬಾಧಿತರಾಗು ತ್ತಾರೆ ಎಂದು ಯೋಚಿಸುತ್ತಾರೆ. ಯೋಗಿಗಳು ಅದ್ಭುತ ಪ್ರದರ್ಶನ ಮಾಡಲು ಅಗಾಧ ಶಕ್ತಿ ಯನ್ನು ಪಡೆದುಕೊಂಡಿರುತ್ತಾರೆ. ಉದಾಹರಣೆಗೆ : ಒಬ್ಬ ಯೋಗಿಯು ಅತಿ ಚಿಕ್ಕವನಾಗ ಬಹುದು. ನೀವು ಅವನನ್ನು ಒಂದು ಕೋಣೆಯಲ್ಲಿರಿಸಿ ಬೀಗ ಹಾಕಿದರೆ, ಅವನು ಅತ್ಯಂತ ಸಣ್ಣ ರಂಧ್ರದ ಮೂಲಕ ಹೊರಬಂದುಬಿಡಬಹುದು. ಈ ಬಗೆಯ ಮಾಯಾ ಪ್ರದರ್ಶನದಿಂದ ಯೋಗಿಗಳು ಕೂಡಲೇ ಅದ್ಭುತ ವ್ಯಕ್ತಿಗಳೆನಿಸಿಕೊಳ್ಳುತ್ತಾರೆ. ಆದರೆ, ಈಗಿನ ಯೋಗಿಗಳು ಕೇವಲ ಅಂಗಸಾಧನೆಗಳನ್ನು ಆಚರಿಸುತ್ತಾರೆ. ಅವರು ನಿಜವಾದ ಶಕ್ತಿಯನ್ನು ಹೊಂದಿರುವುದಿಲ್ಲ. ನಿಜವಾದ ಯೋಗಿಯು ಒಂದಲ್ಲ ಒಂದು ಶಕ್ತಿಯನ್ನು ಹೊಂದಿರುತ್ತಾನೆ. ಆದರೆ ಅದು ಭೌತಿಕ ವಾದದ್ದಾಗಿರುವುದೇ ಹೊರತು ಆಧ್ಯಾತ್ಮ ಶಕ್ತಿಯಾಗಿರುವುದಿಲ್ಲ. ಹೀಗೆ ಯೋಗಿಯು ಅದ್ಭುತ ಶಕ್ತಿಯನ್ನು ಬಯಸುತ್ತಾನೆ, ಜ್ಞಾನಿಯು ಜೀವನದ ದುಃಖಗಳಿಂದ ನಿವೃತ್ತಿಯನ್ನು ಬಯಸು ತ್ತಾನೆ, ಮತ್ತು ಕರ್ಮಿಯು ಭೌತಿಕ ಪ್ರಯೋಜನಾಕಾಂಕ್ಷಿಯಾಗಿರುತ್ತಾನೆ. ಆದರೆ, ಭಕ್ತ ನಾದವನು ಮಾತ್ರ ತನಗಾಗಿ ಯಾವುದನ್ನೂ ಬಯಸುವುದಿಲ್ಲ. ತಾಯಿ ತನ್ನ ಮಗುವನ್ನು ಆರೈಕೆ ಮಾಡುವಂತೆ ಅವನು ಪ್ರೀತಿಯಿಂದ ಕೇವಲ ದೇವರ ಸೇವೆ ಮಾಡುತ್ತಾನೆ. ತಾಯಿ ಶುದ್ಧ ಪ್ರೀತಿಯಿಂದ ಮಗುವನ್ನು ಸಂರಕ್ಷಿಸುತ್ತಾಳೆ.

ನೀವು ದೇವರನ್ನು ಪ್ರೀತಿಸುವ ಈ ಹಂತಕ್ಕೆ ಬಂದಾಗ, ಅದು ಪರಿಪೂರ್ಣಾವಸ್ಥೆಯಾಗಿರು ತ್ತದೆ. ಕರ್ಮಿಯಾಗಲಿ, ಜ್ಞಾನಿಯಾಗಲಿ ಅಥವಾ ಯೋಗಿಯಾಗಲಿ ಭಗವಂತನನ್ನು ಅರಿಯ ಲಾರನು—ಕೇವಲ ಭಕ್ತನು ಮಾತ್ರ ಅರಿಯಬಲ್ಲನು. ಭಗವದ್ಗೀತೆಯಲ್ಲಿ, **ಭಕ್ತ್ಯಾ ಮಾಮ್ ಅಭಿಜಾನಾತಿ** (18.55)ಎಂದು ಕೃಷ್ಣನು ಹೇಳುವಂತೆ, “ಕೇವಲ ಭಕ್ತಿಯ ಮೂಲಕವೇ ಒಬ್ಬನು ದೇವರನ್ನು ಅರಿತುಕೊಳ್ಳಬಹುದಾಗಿದೆ.” ಇತರ ವಿಧಾನಗಳಿಂದ ತನ್ನನ್ನು ಅರಿತುಕೊಳ್ಳ ಬಹುದೆಂದು ಕೃಷ್ಣನು ಎಲ್ಲಿಯೂ ಹೇಳಿಲ್ಲ. ಇದು ಸಾಧ್ಯವಿಲ್ಲ. ಭಕ್ತಿಮೂಲಕವೇ ಇದು ಸಾಧ್ಯ. ನೀವು ದೇವರನ್ನು ಅರಿತುಕೊಳ್ಳುವ ಮತ್ತು ಅವನನ್ನು ಪ್ರೀತಿಸುವ ಆಸಕ್ತಿ ಹೊಂದಿದ್ದರೆ, ನೀವು ಭಕ್ತಿಮಾರ್ಗವನ್ನೇ ಅಂಗೀಕರಿಸಬೇಕು. ಇತರ ಯಾವ ಮಾರ್ಗವೂ ನಿಮಗೆ ಸಹಾಯಕವಾಗ ಲಾರದು.

ಮಿಸ್ ನಿಗ್ಹನ್ : ಈ ಮಾರ್ಗದಲ್ಲಿ ಒಬ್ಬನ ಜೀವನದಲ್ಲಾಗುವ ಮಾರ್ಪಾಡುಗಳೇನು?

ಶ್ರೀಲ ಪ್ರಭುಪಾದ : ಯಾವ ಸ್ಥಿತ್ಯಂತರವೂ ಆಗುವುದಿಲ್ಲ—ನಿಮ್ಮ ಮೂಲಪ್ರಜ್ಞೆಯು ಕೃಷ್ಣಪ್ರಜ್ಞೆಯೇ ಆಗಿದೆ. ಈಗ ನಿಮ್ಮ ಪ್ರಜ್ಞೆಯು ಕಸದಿಂದ ಆವೃತವಾಗಿದೆ. ನೀವು ಅದನ್ನು ಸ್ವಚ್ಛಗೊಳಿಸ ಬೇಕು. ಆಗ ಕೃಷ್ಣಪ್ರಜ್ಞೆಯು ಜಾಗೃತವಾಗುವುದು. ನಮ್ಮ ಪ್ರಜ್ಞೆ ನೀರಿನ ಹಾಗೆ, ನೀರು ನೈಸರ್ಗಿಕವಾಗಿ ಶುದ್ಧವೂ, ಪಾರದರ್ಶಕವೂ ಆಗಿದೆ. ಆದರೆ ಕೆಲವು ಸಲ ಅದು ರಾಡಿಗೊಂಡಿರುತ್ತದೆ. ನೀವು ರಾಡಿಯನ್ನೆಲ್ಲ ಸೋಸಿ ತೆಗೆದರೆ, ನೀರು ಮತ್ತೆ ತನ್ನ ಸ್ವಚ್ಛವಾದ ಮತ್ತು ಪಾರದರ್ಶಕವಾದ ಮೂಲ ಸ್ಥಿತಿಯನ್ನು ಹೊಂದುತ್ತದೆ.

ಮಿಸ್ ನಿಗ್ಹನ್ : ಒಬ್ಬನು ಕೃಷ್ಣಪ್ರಜ್ಞಾವಂತನಾದರೆ ಸಮಾಜದಲ್ಲಿ ಉತ್ತಮವಾಗಿ ಬಾಳುವನೆ ?

ಶ್ರೀಲ ಪ್ರಭುಪಾದ : ಹೌದು, ನನ್ನ ಶಿಷ್ಯರು ಕುಡುಕರೂ, ಮಾಂಸಾಹಾರಿಗಳೂ ಆಗಿಲ್ಲ ವೆಂಬುದನ್ನು ನೀವು ಕಾಣಬಹುದಾಗಿದೆ. ದೈಹಿಕ ಸ್ಥಿತಿಯಲ್ಲಿ ಅವರು ಬಹು ಶುದ್ಧರಾಗಿದ್ದಾರೆ– ಅವರಿಗೆ ಯಾವ ಕೆಟ್ಟ ರೋಗಗಳೂ ಬರುವುದಿಲ್ಲ. ನಿಜ ಹೇಳುವುದಾದರೆ, ಮಾಂಸಾಹಾರ ವರ್ಜನವು ಕೃಷ್ಣಪ್ರಜ್ಞೆಯ ಸಮಸ್ಯೆಯಷ್ಟೇ ಅಲ್ಲದೆ, ಅದೊಂದು ಸುಸಂಸ್ಕೃತ ಮಾನವ ಜೀವನದ ಅಗತ್ಯವಾಗಿದೆ. ದೇವರು ಮಾನವ ಸಮಾಜದ ಆಹಾರಕ್ಕಾಗಿ ಅನೇಕ ವಸ್ತುಗಳನ್ನು ನಿರ್ಮಿಸಿ ದ್ದಾನೆ—ಒಳ್ಳೆಯ ಫಲಗಳು, ಕಾಯಿಪಲ್ಲೆಗಳು, ಧಾನ್ಯಗಳು, ಮತ್ತು ಉತ್ಕೃಷ್ಟವಾದ ಹಾಲು. ಹಾಲಿನಿಂದ ನೂರಾರು ಬಗೆಯ ಪೌಷ್ಟಿಕ ಆಹಾರಗಳನ್ನು ತಯಾರಿಸಬಹುದು. ಆದರೆ ಯಾರೂ ಆ ಕಲೆಯನ್ನು ಅರಿತಿಲ್ಲ. ಬದಲಾಗಿ, ಮಾನವರು ದೊಡ್ಡ ಕಸಾಯಿಖಾನೆಗಳನ್ನು ನಡೆಸುತ್ತಿದ್ದಾರೆ ಮತ್ತು ಮಾಂಸಭಕ್ಷಣ ಮಾಡುತ್ತಿದ್ದಾರೆ. ಅವರು ನಾಗರಿಕರು ಕೂಡ ಆಗಿಲ್ಲ. ಮನುಷ್ಯನು ಅನಾಗರಿಕನಾಗಿರುವಾಗ ಪ್ರಾಣಿಗಳನ್ನು ಕೊಂದು ತಿನ್ನುತ್ತಾನೆ.

ನಾಗರಿಕ ಜನರು ಹಾಲಿನಿಂದ ಪೌಷ್ಟಿಕ ಆಹಾರಗಳನ್ನು ತಯಾರಿಸುವ ಕಲೆಯನ್ನು ಬಲ್ಲವ ರಾಗಿರುತ್ತಾರೆ. ಪಶ್ಚಿಮ ವರ್ಜಿನಿಯಾದಲ್ಲಿರುವ ನಮ್ಮ ನವವೃಂದಾವನ ಫಾರ್ಮಿನಲ್ಲಿ, ನಾವು ಹಾಲಿನಿಂದ ನೂರಾರು ಬಗ್ಗೆಯ ಉತ್ಕೃಷ್ಟ ಖಾದ್ಯಗಳನ್ನು ತಯಾರಿಸುತ್ತೇವೆ. ಅಲ್ಲಿಗೆ ಭೇಟಿ ಕೊಟ್ಟ ಜನ ಹಾಲಿನಿಂದ ಇಷ್ಟು ಸೊಗಸಾದ ಆಹಾರಗಳನ್ನು ತಯಾರಿಸಬಹುದೇ ಎಂದು ಆಶ್ಚರ್ಯಪಡುತ್ತಾರೆ. ಹಸುವಿನ ರಕ್ತವು ಅತ್ಯಂತ ಪೌಷ್ಟಿಕವಾದುದು, ಆದರೆ ನಾಗರಿಕ ಜನ ಅದನ್ನು ಹಾಲಿನ ರೂಪದಲ್ಲಿ ಉಪಯೋಗಿಸುತ್ತಾರೆ. ಹಾಲು ಹಸುವಿನ ರಕ್ತದ ರೂಪಾಂತರ ವಷ್ಟೆ ! ನೀವು ಹಾಲಿನಿಂದ ಕೆನೆ, ಮೊಸರು, ತುಪ್ಪ—ಹೀಗೆ ಅನೇಕ ಪದಾರ್ಥಗಳನ್ನು ತಯಾರಿಸಬಲ್ಲಿರಿ. ಈ ಹಾಲಿನಿಂದಾದ ಪದಾರ್ಥಗಳನ್ನು ಧಾನ್ಯ, ಹಣ್ಣುಹಂಪಲು, ತರಕಾರಿ ಗಳೊಂದಿಗೆ ಬೆರೆಸಿ ನೀವು ನೂರಾರು ಬಗೆಯ ತಿನಿಸುಗಳನ್ನು ತಯಾರಿಸಬಹುದು. ಇದು ನಾಗರಿಕ ಜೀವನ—ನೇರವಾಗಿ ಪ್ರಾಣಿವಧೆ ಮತ್ತು ಮಾಂಸ ಭಕ್ಷಣದ ರೀತಿಯಲ್ಲ. ಬಡ ಪ್ರಾಣಿಯಾದ ಹಸು ದೇವರು ಕೊಟ್ಟ ಹುಲ್ಲನ್ನು ಮೇಯುತ್ತದೆ, ಹಾಲು ಕೊಡುತ್ತದೆ. ನೀವು ಹಾಲಿನಿಂದ ಜೀವಿಸಬಲ್ಲಿರಿ. ಹಸುವನ್ನು ಕಡಿದು ಅದರ ಮಾಂಸ ತಿನ್ನುವುದು ನಾಗರಿಕ ವಿಧಾನ ವೆಂದು ನೀವು ಭಾವಿಸುವಿರಾ ?

ಮಿಸ್ ನಿಗ್ಘನ್: ಇಲ್ಲ ನಾನು ಸಂಪೂರ್ಣವಾಗಿ ನಿಮ್ಮ ಅಭಿಪ್ರಾಯವನ್ನು ಒಪ್ಪುತ್ತೇನೆ... ಒಂದು ಅಂಶವನ್ನು ಅರಿತುಕೊಳ್ಳಲು ನಾನು ಕುತೂಹಲಿಯಾಗಿದ್ದೇನೆ. ವೇದಗಳನ್ನು ಸಾಂಕೇತಿಕಾರ್ಥದಲ್ಲಿ ಮತ್ತು ಶಬ್ದಶಃ ಹೀಗೆ ಉಭಯ ರೀತಿಗಳಲ್ಲಿಯೂ ಗ್ರಹಣಮಾಡ ಬಹುದೇ ?

ಶ್ರೀಲ ಪ್ರಭುಪಾದ : ಇಲ್ಲ. ಅವುಗಳನ್ನು ಇದ್ದಂತೆಯೇ ಗ್ರಹಿಸಬೇಕು, ಸಾಂಕೇತಿಕ ವಾಗಿ ಅಲ್ಲ. ಅಂತೆಯೇ ನಾವು ಭಗವದ್ಗೀತೆಯನ್ನು ಯಥಾರೂಪವಾಗಿ ನೀಡುತ್ತಿದ್ದೇವೆ.

ಮಿಸ್ ನಿಗ್ಘನ್ : ನೀವು ಪ್ರಾಚೀನ ಭಾರತದ ಜಾತಿ ಪದ್ಧತಿಯನ್ನು ಪಶ್ಚಿಮದಲ್ಲಿ ಪುನರುಜ್ಜೀವನಗೊಳಿಸಲು ಯತ್ನಿಸುತ್ತೀರಾ ? ಗೀತೆಯು ಜಾತಿ ಪದ್ಧತಿಯನ್ನು ಬೋಧಿಸಿದೆ...

ಶ್ರೀಲ ಪ್ರಭುಪಾದ : ಭಗವದ್ಗೀತೆಯು ಜಾತಿ ಪದ್ಧತಿಯನ್ನು ಪ್ರಸ್ತಾಪಿಸಿರು ವುದಿಲ್ಲ ? "ನಾನು ಮಾನವರನ್ನು ಅವರ ಗುಣ ಕರ್ಮಗಳಿಗನುಸಾರವಾಗಿ ನಾಲ್ಕು ವರ್ಗಗಳಲ್ಲಿ ಸೃಷ್ಟಿಸಿದ್ದೇನೆ"—**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ** ಎಂದು ಕೃಷ್ಣನು ಹೇಳುತ್ತಾನೆ ('ಭ.ಗೀ.' 4-13). ಬೇರೆ ಬೇರೆ ಉದಾಹರಣೆಗೆ ಸಮಾಜದಲ್ಲಿ ಇಂಜಿನಿಯರರು, ವೈದ್ಯವೃತ್ತಿ ಪಾಲಕರೂ ಇದ್ದಾರೆ. ಅವರು ಬೇರೆ ಬೇರೆ ಜಾತಿಗೆ ಎಂದರೆ ಒಬ್ಬನು ಇಂಜಿನಿಯರ್ ಜಾತಿಗೂ ಮತ್ತೊಬ್ಬನು ವೈದ್ಯ ಜಾತಿಗೂ ಸೇರಿದವನೆಂದೂ—ನೀವು ಭಾವಿಸುವಿರಾ ? ಇಲ್ಲ. ಒಬ್ಬನು ವೈದ್ಯವಿಜ್ಞಾನದಲ್ಲಿ ಅರ್ಹತೆ ಯನ್ನು ಸಂಪಾದಿಸಿದ್ದರೆ ನೀವು ಅವನನ್ನು ಡಾಕ್ಟರ್ ಎಂದು ಅಂಗೀಕರಿಸುವಿರಿ; ಮತ್ತೊಬ್ಬನು ಇಂಜಿನಿಯರಿಂಗ್‌ನಲ್ಲಿ ಪದವಿ ಪಡೆದಿದ್ದರೆ ನೀವು ಅವನನ್ನು ಇಂಜಿನಿಯರ್ ಎಂದು ಒಪ್ಪಿ ಕೊಳ್ಳುವಿರಿ. ಹಾಗೆಯೇ, ಭಗವದ್ಗೀತೆಯು ಮಾನವರನ್ನು ಸಮಾಜದ ನಾಲ್ಕು ವರ್ಗಗಳಲ್ಲಿ ವಿಂಗಡಿಸಿದೆ : ಒಂದು ಅತಿ ಬುದ್ಧಿಜೀವಿಗಳ ವರ್ಗ, ಆಡಳಿತಗಾರರದು ಒಂದು ವರ್ಗ, ಉತ್ಪಾದಕರದ್ದು ಮತ್ತೊಂದು ವರ್ಗ, ಮತ್ತೊಂದು ಸಾಮಾನ್ಯ ದುಡಿಮೆಗಾರರ ವರ್ಗ. ಇವು ನೈಸರ್ಗಿಕ ವಿಭಾಗಗಳಾಗಿದೆ. ಉದಾಹರಣೆಗೆ : ಒಂದು ವರ್ಗವು ಬಹು ಬುದ್ಧಿವಂತ ವರ್ಗ ವಾಗಿದೆ ನಿಜ. ಆದರೆ, ಅವರು ಭಗವದ್ಗೀತೆಯಲ್ಲಿ ಹೇಳಿದ ಅತ್ಯುತ್ಕೃಷ್ಟ ವರ್ಗದ ಅರ್ಹತೆಯನ್ನು ಪಡೆಯಲು, ಒಬ್ಬ ಬುದ್ಧಿವಂತ ಹುಡುಗನು ಅರ್ಹನಾದ ಡಾಕ್ಟರನಾಗಲು ಹೇಗೆ ಕಾಲೇಜಿನಲ್ಲಿ ತರಬೇತಿ ಪಡೆಯಬೇಕಾಗುವುದೋ ಹಾಗೆಯೇ ತರಬೇತಿ ಪಡೆಯಬೇಕಾಗುವುದು. ಆದುದರಿಂದ ಕೃಷ್ಣಪ್ರಜ್ಞಾ ಆಂದೋಲನ ರೂಪದಲ್ಲಿ ಬುದ್ಧಿಜೀವಿಗಳು ತಮ್ಮ ಮನಸ್ಸನ್ನು ಹೇಗೆ ನಿಯಂತ್ರಿಸಿ ಕೊಳ್ಳಬೇಕು, ತಮ್ಮ ಇಂದ್ರಿಯಗಳನ್ನು ಹೇಗೆ ನಿಗ್ರಹಿಸಬೇಕು, ಹೇಗೆ ಸತ್ಯವಂತರಾಗಬೇಕು, ಹೇಗೆ ಅಂತರಂಗದಲ್ಲಿ ಮತ್ತು ಬಹಿರಂಗದಲ್ಲಿ ಶುದ್ಧರಾಗಿರಬೇಕು, ಹೇಗೆ ಮತಿವಂತರಾಗಿರಬೇಕು, ತಮ್ಮ ಜ್ಞಾನವನ್ನು ಜೀವನದಲ್ಲಿ ಹೇಗೆ ಪ್ರಯೋಗಿಸಬೇಕು ಮತ್ತು ಹೇಗೆ ದೇವಪ್ರಜ್ಞೆಯನ್ನು ಹೊಂದಬೇಕು ಎಂಬ ತರಬೇತಿಯನ್ನು ನಾವು ಅವರಿಗೆ ನೀಡುತ್ತೇವೆ. (ಅಲ್ಲಿ ಕುಳಿತ ಶಿಷ್ಯರನ್ನು ತೋರಿಸುತ್ತ) ಈ ಎಲ್ಲ ಹುಡುಗರು ಉತ್ಕೃಷ್ಟವಾದ ಬುದ್ಧಿಮತ್ತೆಯನ್ನು ಹೊಂದಿದ್ದಾರೆ ಮತ್ತು ಅವರು ಅದನ್ನು ಸರಿಯಾಗಿ ಉಪಯೋಗಿಸುವಂತೆ ನಾವು ಅವರಿಗೆ ಈಗ ತರಬೇತಿ ನೀಡುತ್ತಿದ್ದೇವೆ.

ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಖೂಳನೊಬ್ಬನು ಅಷ್ಟು ಮಾತ್ರದಿಂದಲೇ ಬ್ರಾಹ್ಮಣ

ನಾಗುವಂಥ ಜಾತಿ ಪದ್ಧತಿಯನ್ನು ನಾವು ಪ್ರಚಾರಕ್ಕೆ ತರುತ್ತಿಲ್ಲ. ಅವನು ಪಂಚಮ ವರ್ಗದವನ ಆಚಾರಗಳನ್ನು ಹೊಂದಿದ್ದರೂ ಅವನು ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ಮಾತ್ರದಿಂದ ಅವನು ಉತ್ಕೃಷ್ಟ ಜಾತಿಯವನೆಂದು ಅಂಗೀಕರಿಸುತ್ತಾರೆ. ನಾವು ಅದನ್ನು ಒಪ್ಪುವುದಿಲ್ಲ. ಬ್ರಾಹ್ಮಣನಂತೆ ಶಿಕ್ಷಣ ಹೊಂದಿದವನನ್ನೇ ನಾವು ಪ್ರಥಮ ವರ್ಗದವನೆಂದು ಅಂಗೀಕರಿಸುತ್ತೇವೆ. ಅವನು ಭಾರತೀಯನಿರಲಿ, ಐರೋಪ್ಯನಾಗಿರಲಿ, ಅಮೇರಿಕನ್ನನಾಗಿರಲಿ, ಕೆಳಕುಲದವನಾಗಿರಲಿ ಅಥವಾ ಮೇಲುಕುಲದವನಿರಲಿ—ಅದಕ್ಕೆ ಮಹತ್ವವಿಲ್ಲ. ಬುದ್ಧಿವಂತನಾದ ಯಾವನೇ ಇರಲಿ, ಅವನು ಉತ್ತಮ ವರ್ಗದ ಆಚಾರಗಳನ್ನು ಪಡೆಯುವಂತೆ, ಅವನಿಗೆ ತರಬೇತಿ ನೀಡಬಹುದಾಗಿದೆ. ನಾವು ನಮ್ಮ ಶಿಷ್ಯರಲ್ಲಿ ಭಾರತೀಯ ಜಾತಿಪದ್ಧತಿಯನ್ನು ಹೇರುತ್ತಿದ್ದೇವೆ ಎಂಬ ಮೂರ್ಖತನದ ತಿಳಿವಳಿಕೆಯನ್ನು ನಿವಾರಿಸಬಯಸುತ್ತೇವೆ. ನಾವು ಕೇವಲ ಉತ್ಕೃಷ್ಟ ಬುದ್ಧಿಮಟ್ಟದವರನ್ನು ಆಯ್ದುಕೊಂಡು, ಅವರು ಪ್ರತಿಯೊಂದು ದೃಷ್ಟಿಯಿಂದಲೂ ಉತ್ಕೃಷ್ಟರಾಗುವಂತೆ ಅವರಿಗೆ ತರಬೇತಿ ನೀಡುತ್ತೇವೆ.

ಮಿಸ್ ನಿಗ್ಲನ್ : ಮಹಿಳಾ ವಿಮೋಚನೆಯ ಬಗ್ಗೆ ನಿಮ್ಮ ಭಾವನೆಗಳೇನು ?

ಶ್ರೀಲ ಪ್ರಭುಪಾದ : ಮಹಿಳೆಯರಿಗೆ ಸಮಾನ ಹಕ್ಕುಗಳು ಎಂದು ಹೇಳುತ್ತಿರುವುದು ಪುರುಷರು ಮಹಿಳೆಯರನ್ನು ವಂಚಿಸುವುದೇ ಆಗಿದೆ. ಒಬ್ಬ ಪುರುಷ ಮತ್ತು ಒಬ್ಬ ಮಹಿಳೆ ಒಂದೆಡೆ ಸೇರಿದರೆಂದು ಭಾವಿಸೋಣ. ಅವರು ಪರಸ್ಪರ ಪ್ರೀತಿಸುತ್ತಾರೆ, ಅವರು ವಿಭಿನ್ನ ಲಿಂಗಿಗಳು, ಸ್ತ್ರೀ ಗರ್ಭಧಾರಣೆ ಮಾಡುತ್ತಾಳೆ, ಪುರುಷನು ನಿರಾಯಾಸವಾಗಿ ಹೊರಟು ಹೋಗುತ್ತಾನೆ. ಆ ಮಹಿಳೆ ಮಗುವಿನ ಆರೈಕೆಯ ಹೊಣೆ ಹೊರಬೇಕಾಗುತ್ತದೆ. ಆವಳು ಸರ್ಕಾರದ ಉದಾರ ಸಹಾಯಕ್ಕಾಗಿ ಯಾಚಿಸಬೇಕಾಗುತ್ತದೆ. ಅಥವಾ ಗರ್ಭಪಾತ ಮಾಡಿಕೊಂಡು ಅವಳು ಮಗುವನ್ನು ಕೊಂದುಹಾಕಬೇಕಾಗುತ್ತದೆ. ಇದುವೇ ಮಹಿಳಾ ಸ್ವಾತಂತ್ರ್ಯ. ಭಾರತದಲ್ಲಿ ಮಹಿಳೆ ಕಡುಬಡವಳಾಗಿರಬಹುದು. ಆದರೆ ಅವಳು ಒಬ್ಬ ಪತಿಯ ಆಶ್ರಯದಲ್ಲಿ ಇರುತ್ತಾಳೆ ಮತ್ತು ಅವನು ಅವಳ ಸಂರಕ್ಷಣೆಯ ಹೊಣೆ ಹೊತ್ತುಕೊಳ್ಳುತ್ತಾನೆ. ಅವಳು ಗರ್ಭಿಣಿಯಾದಾಗ, ಅವಳು ತನ್ನ ಮಗುವನ್ನು ಕೊಲ್ಲಬೇಕಾಗಿಲ್ಲ ಅಥವಾ ಭಿಕ್ಷೆಬೇಡಿ ಅದನ್ನು ರಕ್ಷಿಸಬೇಕಾಗುವುದಿಲ್ಲ. ಹಾಗಾದರೆ ಇದರಲ್ಲಿ ನಿಜವಾದ ಸ್ವಾತಂತ್ರ್ಯ ಯಾವುದು ? ಗಂಡನ ಆಶ್ರಯದಲ್ಲಿರುವುದೋ ಅಥವಾ ಸಿಕ್ಕವರ ಭೋಗವಸ್ತುವಾಗಿರುವುದೋ ?

ಮಿಸ್ ನಿಗ್ಲನ್ : ಆಧ್ಯಾತ್ಮಿಕ ಜೀವನ ವಿಷಯದಲ್ಲಿ ಹೇಗೆ ? ಸ್ತ್ರೀಯರೂ ಕೃಷ್ಣಪ್ರಜ್ಞೆಯನ್ನು ಸಂಪಾದಿಸಲು ಸಾಧ್ಯವೇ ?

ಶ್ರೀಲ ಪ್ರಭುಪಾದ : ನಾವು ಲಿಂಗಭೇದವನ್ನು ಪರಿಗಣಿಸುವುದಿಲ್ಲ. ಸ್ತ್ರೀ ಪುರುಷರಿಬ್ಬರಿಗೂ ಸಮಾನವಾಗಿ ನಾವು ಕೃಷ್ಣಪ್ರಜ್ಞೆಯ ದೀಕ್ಷೆಯನ್ನು ನೀಡುತ್ತೇವೆ. ನಾವು ಸ್ತ್ರೀಯರು, ಪುರುಷರು, ಬಡವರು, ಬಲ್ಲಿದರು—ಎಲ್ಲರನ್ನೂ ಸ್ವಾಗತಿಸುತ್ತೇವೆ. ಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ಹೇಳುತ್ತಾನೆ (5.18).

ವಿದ್ಯಾವಿನಯಸಂಪನ್ನೆ
ಬ್ರಾಹ್ಮಣೇ ಗವಿ ಹಸ್ತಿನಿ
ಶುನಿ ಚೈವ ಶ್ವಪಾಕೇ ಚ
ಪಂಡಿತಾಃ ಸಮದರ್ಶಿನಃ॥

"ವಿನಯ ಸಂಪನ್ನನಾದ ಋಷಿಯು, ತನ್ನ ನಿಜ ಜ್ಞಾನಬಲದಿಂದ ವಿದ್ವಾಂಸನೂ, ಸಾಧುವೂ ಆದ ಬ್ರಾಹ್ಮಣನನ್ನು, ಹಸುವನ್ನು, ಆನೆಯನ್ನು, ನಾಯಿಯನ್ನು ಮತ್ತು ಶ್ವಪಚನನ್ನು—ಎಲ್ಲರನ್ನೂ ಸಮನಾಗಿ ಕಾಣುತ್ತಾನೆ."

ಮಿಸ್ ನಿಗ್ಗನ್ : ಹರೇ ಕೃಷ್ಣ ಮಂತ್ರದ ಅರ್ಥವನ್ನು ವಿವರಿಸುವಿರಾ ?

ಶ್ರೀಲ ಪ್ರಭುಪಾದ : ಅದು ಬಹಳ ಸರಳವಾದುದು. ಹರೇ ಎಂದರೆ "ಓ ಭಗವಂತನ ಶಕ್ತಿಯೇ" ಮತ್ತು ಕೃಷ್ಣ ಎಂದರೆ "ಓ ಭಗವಾನ್ ಕೃಷ್ಣನೇ" ಎಂದ ಹಾಗೆ. ಈ ಭೌತಿಕ ಜಗತ್ತಿನಲ್ಲಿ ಸ್ತ್ರೀ ಪುರುಷರು ಇರುವ ಹಾಗೆ ದೇವರು ಮೂಲ ಪುರುಷನು ಮತ್ತು ಅವನ ಶಕ್ತಿಯು ಮೂಲ ಪ್ರಕೃತಿ ಎಂದರೆ ಸ್ತ್ರೀರೂಪ. ಆದುದರಿಂದ ನಾವು ಹರೇ ಕೃಷ್ಣ ಮಂತ್ರವನ್ನು ಉಚ್ಚರಿಸಿದಾಗ, "ಹೇ ಭಗವಾನ್ ಕೃಷ್ಣನೆ, ಹೇ ಕೃಷ್ಣನ ಶಕ್ತಿಯೇ, ದಯವಿಟ್ಟು ನಿಮ್ಮ ಸೇವೆಯಲ್ಲಿ ನನ್ನನ್ನು ತೊಡಗಿಸು" ಎಂದು ಹೇಳುತ್ತೇವೆ.

ಮಿಸ್ ನಿಗ್ಗನ್ : ನೀವು ದಯವಿಟ್ಟು ನಿಮ್ಮ ಜೀವನದ ಬಗ್ಗೆ ಮತ್ತು ನೀವು ಕೃಷ್ಣ ಪ್ರಜ್ಞಾ ಆಂದೋಲನದ ಗುರುಗಳೆಂಬುದನ್ನು ಹೇಗೆ ಅರಿತುಕೊಂಡಿರಿ ಎಂಬ ಬಗ್ಗೆ ಸಂಕ್ಷೇಪವಾಗಿ ಹೇಳುವಿರಾ ?

ಶ್ರೀಲ ಪ್ರಭುಪಾದ : ನನ್ನ ಜೀವನ ಸರಳವಾದುದು. ಹೆಂಡತಿ ಮಕ್ಕಳಿಂದ ಕೂಡಿದ ನಾನೊಬ್ಬ ಗೃಹಸ್ಥಾಶ್ರಮಿಯಾಗಿದ್ದೆ–ನನಗೆ ಈಗ ಮೊಮ್ಮಕ್ಕಳಿವೆ–ನನ್ನ ಉಪದೇಶ ಗುರು ನನಗೆ ಪಶ್ಚಿಮ ದೇಶಗಳಿಗೆ ಹೋಗುವಂತೆ ಮತ್ತು ಅಲ್ಲಿ ಕೃಷ್ಣಪ್ರಜ್ಞಾ ವಿದ್ಯೆಯನ್ನು ಪ್ರಚಾರ ಮಾಡುವಂತೆ ಆದೇಶ ನೀಡಿದರು. ಹೀಗೆ ನಾನು ಗುರುಗಳ ಆದೇಶಾನುಸಾರ ಎಲ್ಲವನ್ನು ಪರಿತ್ಯಾಗ ಮಾಡಿದೆ. ಈಗ ನಾನು ಆ ಗುರುಗಳ ಮತ್ತು ಕೃಷ್ಣನ ಆಜ್ಞೆಗಳನ್ನು ಪಾಲಿಸಲು ಯತ್ನಿಸುತ್ತಿದ್ದೇನೆ.

ಮಿಸ್ ನಿಗ್ಗನ್ : ನೀವು ಪಶ್ಚಿಮಕ್ಕೆ ಹೋಗುವಂತೆ ನಿಮ್ಮ ಗುರುಗಳು ನಿಮಗೆ ಹೇಳಿದಾಗ ನಿಮ್ಮ ವಯಸ್ಸೇನು?

ಶ್ರೀಲ ಪ್ರಭುಪಾದ : ನಮ್ಮ ಮೊದಲನೆಯ ಭೇಟಿಯಲ್ಲಿಯೇ ನಾನು ಪಶ್ಚಿಮದಲ್ಲಿ ಕೃಷ್ಣ ಪ್ರಜ್ಞಾ ಪ್ರಚಾರ ಮಾಡುವಂತೆ, ಅವರು ನನಗೆ ಆದೇಶಿಸಿದ್ದರು. ಆಗ ನನಗೆ 25 ವರ್ಷ ವಯಸ್ಸು. ನಾನಾಗ ವಿವಾಹಿತ ಮತ್ತು ಎರಡು ಮಕ್ಕಳ ತಂದೆಯಾಗಿದ್ದೆ. ನಾನು ಅವರ ಆದೇಶಗಳನ್ನು ಪಾಲಿಸಲು ನನ್ನಿಂದಾದ ಎಲ್ಲ ಪ್ರಯತ್ನಗಳನ್ನು ಮಾಡಿದೆ ಮತ್ತು ನಾನಿನ್ನೂ ಸಂಸಾರಿಯಾಗಿರುವಾಗಲೇ, 1944 ರಲ್ಲಿ ಮರಳಿ ದೇವತ್ವದೆಡೆಗೆ ಎಂಬ ಪತ್ರಿಕೆಯನ್ನು ಪ್ರಾರಂಭಿಸಿದೆ. ನಾನು ಕೌಟುಂಬಿಕ ಜೀವನದಿಂದ ನಿವೃತ್ತನಾದ ಬಳಿಕ 1959 ರಲ್ಲಿ ಗ್ರಂಥರಚನೆಗೆ ತೊಡಗಿದೆ ಮತ್ತು 1965 ರಲ್ಲಿ ಅಮೇರಿಕಕ್ಕೆ ಬಂದೆ.

ಮಿಸ್ ನಿಗ್ಗನ್: ನೀವು ಸ್ವತಃ ದೇವರಲ್ಲ ಎಂದು ಹೇಳಿದ್ದೀರಿ. ಆದರೂ ಪರವ್ಯಕ್ತಿಯಾದ ನನಗೆ ಕಂಡು ಬರುವಂತೆ, ನಿಮ್ಮ ಭಕ್ತರು ನಿಮ್ಮನ್ನು ದೇವರೆಂದೇ ಭಾವಿಸಿದ್ದಾರೆ.

ಶ್ರೀಲ ಪ್ರಭುಪಾದ: ಹೌದು, ಅದು ಅವರ ಕರ್ತವ್ಯ. ಸರಕಾರಿ ಸೇವಕನು ಸರಕಾರದ

ಆದೇಶಗಳನ್ನು ನೆರವೇರಿಸುವುದರಿಂದ ಅವನನ್ನು ಸರಕಾರದಂತೆಯೇ ಗೌರವಿಸಬೇಕಾಗುವುದು. ಹಾಗೆಯೇ ಗುರು, ದೇವರ ಆದೇಶವನ್ನು ನೆರವೇರಿಸುವುದರಿಂದ ಗುರುವನ್ನೂ ದೇವರಷ್ಟೇ ಗೌರವಿಸಬೇಕಾಗುವುದು. ಒಬ್ಬ ಸಾಮಾನ್ಯ ಪೋಲಿಸ್ ಪೇದೆ ಬಂದರೂ ಅವನು ಸರಕಾರೀ ಮನುಷ್ಯನಾಗಿರುವುದರಿಂದ ನೀವು ಅವನನ್ನು ಗೌರವಿಸಬೇಕಾಗುವುದು. ಹಾಗೆಂದ ಮಾತ್ರದಿಂದ ಅವನೇ ಸರಕಾರವಲ್ಲ. **ಸಾಕ್ಷಾದ್ಧರಿತ್ವೇನ ಸಮಸ್ತಶಾಸ್ತ್ರೈರ್ ಉಕ್ತಸ್ತಥಾ ಭಾವ್ಯತ ಏವ ಸದ್ಭಿಃ** "ಗುರು ಭಗವಂತನ ಅತ್ಯಂತ ಅಂತರಂಗದ ಸೇವಕನಾಗಿರುವುದರಿಂದ ಅವನನ್ನು ಭಗವಂತನಷ್ಟೇ ಗೌರವದಿಂದ ಕಾಣಬೇಕು. ಇದನ್ನು ಎಲ್ಲ ಶ್ರುತಿಗಳು ಒಪ್ಪಿವೆ ಮತ್ತು ಎಲ್ಲ ಅಧಿಕಾರಿಗಳು ಇದನ್ನು ಅನುಸರಿಸಿದ್ದಾರೆ."

ಮಿಸ್ ನಿಗ್ಗ್ಹನ್: ನಿಮ್ಮ ಭಕ್ತರು ನಿಮಗೆ ತಂದು ಅರ್ಪಿಸುವ ಅನೇಕ ಭೌತಿಕ ಸುಂದರ ವಸ್ತುಗಳನ್ನು ಕಂಡು ನನಗೆ ಆಶ್ಚರ್ಯವಾಗುತ್ತದೆ. ಉದಾಹರಣೆಗೆ : ನೀವು ಸುಂದರವೂ ಮೋಹಕವೂ ಆದ ಕಾರಿನಲ್ಲಿ ವಿಮಾನ ನಿಲ್ದಾಣದಿಂದ ಹೊರಟಿರಿ. ಇದನ್ನು ನೋಡಿ ನನಗೆ ಆಶ್ಚರ್ಯವೆನಿಸಿತು. ಯಾಕೆಂದರೆ .....

ಶ್ರೀಲ ಪ್ರಭುಪಾದ: ಇದು ಶಿಷ್ಯರು ತಮ್ಮ ಗುರುವನ್ನು ದೇವರಷ್ಟೇ ಗೌರವಿಸಬೇಕು ಎಂಬುದನ್ನು ಕಲಿಸುತ್ತದೆ. ನೀವು ಸರಕಾರೀ ಪ್ರತಿನಿಧಿಯನ್ನು ಸರಕಾರದಷ್ಟೇ ಗೌರವದಿಂದ ಕಾಣಬೇಕಾದರೆ, ನೀವು ಆತನನ್ನು ಅಷ್ಟೇ ವೈಭವದಿಂದ ಕಾಣಬೇಕು. ನೀವು ಗುರುವನ್ನು ದೇವರಷ್ಟೆ ಗೌರವದಿಂದ ಕಾಣಬೇಕಾದರೆ, ನೀವು ದೇವರಿಗೆ ತೋರುವ ಸಂಭ್ರಮವನ್ನೇ ಗುರುವಿಗೂ ತೋರಬೇಕು. ದೇವರು ಸ್ವರ್ಣರಥದಲ್ಲಿ ಸಂಚರಿಸುತ್ತಾನೆ. ನೀವು ಗುರುವಿಗೆ ಮೋಟಾರ್ ಕಾರು ನೀಡಿದರೆ ಅದು ಸಾಲದು, ಕಾರಣವೆಂದರೆ ಗುರುವನ್ನು ದೇವರಂತೆಯೇ ಕಾಣಬೇಕು. ದೇವರು ನಿಮ್ಮ ಮನೆಗೆ ಬಂದರೆ ನೀವು ಆತನಿಗೆ ಸಾಮಾನ್ಯ ಮೋಟಾರ್ ಕಾರು ನೀಡುವಿರೋ ಅಥವಾ ಸ್ವರ್ಣರಥದ ಏರ್ಪಾಡು ಮಾಡುವಿರೋ ?

ಮಿಸ್ ನಿಗ್ಗ್ಹನ್: ಕೃಷ್ಣಪ್ರಜ್ಞೆಯ ವಿಷಯಗಳಲ್ಲಿ ಪರಕೀಯರಿಗೆ ಒಪ್ಪಿಗೆಯಾಗಲು ಅತ್ಯಂತ ಆತಂಕವೆನಿಸುವ ಅಂಶವೆಂದರೆ ಮಂದಿರದಲ್ಲಿರುವ ದೇವರ ಮೂರ್ತಿಯ ವಿಷಯ. ಅದು ಹೇಗೆ ಕೃಷ್ಣನನ್ನು ಪ್ರತಿನಿಧಿಸುತ್ತದೆ? ನೀವು ಈ ಬಗ್ಗೆ ಸ್ವಲ್ಪ ವಿವರಿಸುವಿರಾ.

ಶ್ರೀಲ ಪ್ರಭುಪಾದ : ಆಗಲಿ. ನೀವು ಕೃಷ್ಣನನ್ನು ಕಾಣುವ ತರಬೇತಿ ಹೊಂದಿಲ್ಲವಾದುದರಿಂದ, ಸದ್ಯ ನೀವು ಅವನನ್ನು ಕಾಣುವ ರೀತಿಯಲ್ಲಿ ಅವನು ನಿಮ್ಮ ಮುಂದೆ ಬರುತ್ತಾನೆ. ನೀವು ಮರವನ್ನೋ ಎಲೆಯನ್ನೋ ಕಾಣಬಲ್ಲಿರಿ, ನೀವು ಆಧ್ಯಾತ್ಮಿಕವಾದುದನ್ನು ಕಾಣಲಾರಿರಿ. ನಿಮ್ಮ ತಂದೆ ಆಸ್ಪತ್ರೆಯಲ್ಲಿದ್ದಾನೆ, ಅಲ್ಲಿ ಆತನು ಮೃತನಾದನೆಂದು ತಿಳಿಯೋಣ. ''ಅಯ್ಯೋ ನಮ್ಮ ತಂದೆ ತೀರಿ ಹೋದ'' ಎಂದು ನೀವು ಆತನ ಶಯ್ಯಾಪಕ್ಕದಲ್ಲಿ ಗೋಳಿಡುವಿರಿ. ಅವನು ತೀರಿ ಹೋದನೆಂದು ನೀವೇಕೆ ಹೇಳುವಿರಿ? ಹೊರಟು ಹೋಗಿರುವ ವಸ್ತು ಯಾವುದು ?

ಮಿಸ್ ನಿಗ್ಗ್ಹನ್ : ಅವನ ಆತ್ಮ ಹೊರಟುಹೋಗಿದೆ.

ಶ್ರೀಲ ಪ್ರಭುಪಾದ: ನೀವು ಆ ಆತ್ಮವನ್ನು ನೋಡಿದ್ದೀರಾ ?

ಮಿಸ್ ನಿಗ್ನನ್: ಇಲ್ಲ.

ಶ್ರೀಲ ಪ್ರಭುಪಾದ : ಅಂತೆಯೇ ನೀವು ಆತ್ಮವನ್ನು ಕಾಣಲಾರಿರಿ ಮತ್ತು ದೇವರು ಪ್ರಧಾನಾತ್ಮನಾಗಿದ್ದಾನೆ. ನಿಜವಾಗಿ ಅವನೇ ಆತ್ಮವೂ, ಪದಾರ್ಥವೂ--ಎಲ್ಲವೂ ಆಗಿದ್ದಾನೆ. ಆದರೆ ನೀವು ಅವನನ್ನು ಆತ್ಮಸ್ವರೂಪದಲ್ಲಿ ಕಾಣಲಾರಿರಿ. ಆದುದರಿಂದ ನಿಮ್ಮ ಮೇಲೆ ಕೃಪೆ ಮಾಡಲು, ನಿಮ್ಮ ಕಣ್ಣಿಗೆ ಕಾಣುವಂತೆ ಅವನು ನಿಮ್ಮ ಮುಂದೆ ಮರ ಅಥವಾ ಶಿಲಾ ವಿಗ್ರಹವಾಗಿ ತನ್ನ ಅಪಾರ ಕರುಣಾರೂಪದಿಂದ ಗೋಚರವಾಗುತ್ತಾನೆ.

ಮಿಸ್ ನಿಗ್ನನ್ : ಧನ್ಯವಾದ.

ಶ್ರೀಲ ಪ್ರಭುಪಾದ : ಹರೇಕೃಷ್ಣ !



# ದೇವರ ಪರಿಭಾಷೆ

**ಆಧುನಿಕ ಮಾನವನ ದೇವರ ಕಲ್ಪನೆಗಳು ಅನೇಕವಾಗಿವೆ ಮತ್ತು ವೈವಿಧ್ಯಮಯವಾಗಿದೆ. ಮಕ್ಕಳು ಅವನೊಬ್ಬ ಬಿಳಿಯ ಗಡ್ಡದ ಮುದುಕನೆಂದು ಭಾವಿಸುತ್ತಾರೆ. ಪ್ರೌಢಾವಸ್ಥೆಯ ಅನೇಕರು ಅವನೊಬ್ಬ ಅದೃಷ್ಟ ಶಕ್ತಿ, ಮನೋಕಲ್ಪನೆ, ಅಥವಾ ಇಡೀ ಮಾನವತೆ, ವಿಶ್ವ, ಅಥವಾ ಸ್ವಾತ್ಮನೇ ಎಂದು ತಿಳಿಯುತ್ತಾರೆ. ಈ ಉಪನ್ಯಾಸದಲ್ಲಿ ಶ್ರೀಲಪ್ರಭುಪಾದರು ಕೃಷ್ಣಪ್ರಜ್ಞೆಯ ಕಲ್ಪನೆಯನ್ನು- ಪ್ರಾಯಃ ಆಶ್ಚರ್ಯಕರವಾದ ದೇವರ ನಿಕಟ ನೋಟವನ್ನು ವಿವರವಾಗಿ ವರ್ಣಿಸುತ್ತಾರೆ.**

ಮಹಿಳೆಯರೇ ಮತ್ತು ಮಹನೀಯರೇ, ನೀವೆಲ್ಲ ಈ ಕೃಷ್ಣಪ್ರಜ್ಞಾ ಆಂದೋಲನದಲ್ಲಿ ಭಾಗವಹಿಸಿದ್ದಕ್ಕಾಗಿ ನಿಮಗೆ ನನ್ನ ಧನ್ಯವಾದಗಳು. ಈ ಸಂಘವನ್ನು ನ್ಯೂಯಾರ್ಕಿನಲ್ಲಿ 1966 ರಲ್ಲಿ ರಿಜಿಸ್ಟರು ಮಾಡಿದಾಗ, ಇದನ್ನು ದೇವಪ್ರಜ್ಞಾ ಸಂಘವೆಂದು ಹೆಸರಿಸುವಂತೆ ಮಿತ್ರರೊಬ್ಬರು ಸಲಹೆ ಮಾಡಿದರು. ಕೃಷ್ಣ ಎಂಬುದು ಒಂದು ಹಿಂದೂ ದೇವತೆ ಎಂದು ನಿಘಂಟಿನಲ್ಲಿಯೂ ಹೇಳಲಾಗಿದೆ. ಅಂತೆಯೇ ಕೃಷ್ಣ ಎಂಬುದು ಮತೀಯವಾಗುತ್ತದೆ ಎಂದು ಅವರು ಭಾವಿಸಿದಂತಿತ್ತು. ಆದರೆ ನಿಜವಾಗಿ ದೇವರಿಗೆ ಯಾವುದಾದರೂ ಹೆಸರು ಕೊಡುವುದಾದರೆ "ಕೃಷ್ಣ"ನೆಂಬುದೇ.

ನಿಜವಾಗಿ ದೇವರಿಗೆ ಯಾವುದೇ ವಿಶಿಷ್ಟ ಹೆಸರಿಲ್ಲ. ಅವನಿಗೆ ಹೆಸರಿಲ್ಲ ಎಂದು ಹೇಳಿದರೆ ಅವನಿಗೆ ಎಷ್ಟು ಹೆಸರುಗಳಿವೆಯೆಂಬುದೇ ಯಾರಿಗೂ ತಿಳಿದಿಲ್ಲವೆಂದೇ ಅರ್ಥ. ದೇವರು ಅಪರಿಮಿತ ಅವನ ನಾಮಗಳೂ ಅಸಂಖ್ಯ. ಅಂತೆಯೇ ನಾವು ಒಂದೇ ಹೆಸರನ್ನಿಟ್ಟುಕೊಂಡು ಹೊರಡುವಂತಿಲ್ಲ ಉದಾಹರಣೆಗೆ : ಕೃಷ್ಣನನ್ನು ಕೆಲವು ಸಲ ಯಶೋದಾನಂದನ, ದೇವಕೀನಂದನ, ವಸುದೇವನಂದನ ಅಥವಾ ನಂದನಂದನ, ಎಂದೂ ಕರೆಯುವುದುಂಟು. ಕೃಷ್ಣನಿಗೆ ಅರ್ಜುನನ ರಥದ ಸಾರಥ್ಯವನ್ನು ವಹಿಸಿದುದರಿಂದ ಅವನನ್ನು ಕೆಲವು ಸಲ ಪಾರ್ಥಸಾರಥಿ ಎಂದೂ ಹೇಳುತ್ತಾರೆ. ಅರ್ಜುನನು ಪೃಥಾಪುತ್ರನಾದುದರಿಂದ ಅವನನ್ನು ಪಾರ್ಥ ಎಂದೂ ಕರೆಯುವುದುಂಟು. ದೇವರ ಭಕ್ತರೂ ಅನಂತ, ಲೀಲೆಗಳೂ ಅನಂತ. ಆಯಾ ವ್ಯಾಪಾರಗಳಿಗನುಸಾರವಾಗಿ ಅವನಿಗೆ ವಿಶಿಷ್ಟ ಹೆಸರುಗಳು ಬಂದಿವೆ. ಅವನು ಅಸಂಖ್ಯ ಭಕ್ತರನ್ನು ಹೊಂದಿದ್ದಾನೆ ಮತ್ತು ಭಕ್ತರೊಡನೆ ಅಪಾರ ಸಂಬಂಧಗಳನ್ನೂ ಹೊಂದಿದ್ದಾನೆ. ಅಂತೆಯೇ ಅವನ ನಾಮಗಳೂ ಅನಂತ. ಆದುದರಿಂದ ನಾವು ಯಾವುದೇ ಒಂದು ಹೆಸರನ್ನೇ ಪಟ್ಟು ಹಿಡಿದು ಕುಳಿತುಕೊಳ್ಳುವ ಹಾಗಿಲ್ಲ. ಆದರೆ, ಕೃಷ್ಣ ಎಂದರೆ "ಸರ್ವಾಕರ್ಷೀ". ದೇವರು ಸರ್ವರನ್ನೂ—ಆಕರ್ಷಿಸುತ್ತಾನೆ, ಅದೇ ಅವನ ವ್ಯಾಖ್ಯೆ. ನಾವು ಕೃಷ್ಣನ ಅನೇಕ ಚಿತ್ರಗಳನ್ನು

ನೋಡಿದ್ದೇವೆ. ಅವನು ಗೋವುಗಳನ್ನೂ, ಗೋವತ್ಸಗಳನ್ನೂ, ಪಶುಪಕ್ಷಿಗಳನ್ನೂ, ಗಿಡ-ಮರಗಳನ್ನೂ ಅಷ್ಟೇಕೆ ವೃಂದಾವನದಲ್ಲಿಯ ಜಲವನ್ನೂ ಕೂಡ ಆಕರ್ಷಿಸುತ್ತಾನೆ. ಅವನು ಗೋಪಬಾಲಕರಿಗೂ, ಗೋಪಿಯರಿಗೂ, ನಂದ ಮಹಾರಾಜನಿಗೂ, ಪಾಂಡವರಿಗೂ ಮತ್ತು ಇಡೀ ಮಾನವ ಕುಲಕ್ಕೂ ಮೋಹಕನಾಗಿದ್ದಾನೆ. ಆದುದರಿಂದ ದೇವರಿಗೆ ವಿಶಿಷ್ಟ ಹೆಸರೊಂದನ್ನು ಕೊಡುವುದಾದರೆ "ಕೃಷ್ಣ"ನೆಂದೇ ಹೇಳಬೇಕು.

ಸಕಲ ವೇದಗಳ ಕರ್ತೃ ವೇದವ್ಯಾಸರ ತಂದೆಯಾದ ಪರಾಶರ ಮುನಿಗಳು ದೇವರನ್ನು ಕೆಳಕಂಡಂತೆ ಬಣ್ಣಿಸಿದ್ದಾರೆ :

ಐಶ್ವರ್ಯಸ್ಯ ಸಮಗ್ರಸ್ಯ । ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚೈವ ।
ಷಣ್ಣಾಮ್ ಭಗ ಇತೀಂಗನಾ ॥ (ವಿಷ್ಣುಪುರಾಣ 6.5.47)

ಹೀಗೆ ಪರಮ ದೇವೋತ್ತಮ ಪುರುಷನಾದ ಭಗವಂತನನ್ನು ಷಡೈಶ್ವರ್ಯ ಸಂಪೂರ್ಣವೆಂದು—ಎಂದರೆ ಅವನು ಪೂರ್ಣಶಕ್ತಿಯನ್ನೂ, ಕೀರ್ತಿಯನ್ನೂ, ಸಂಪತ್ತನ್ನೂ, ಜ್ಞಾನವನ್ನೂ ಸೌಂದರ್ಯವನ್ನೂ ಮತ್ತು ವೈರಾಗ್ಯವನ್ನೂ ಹೊಂದಿದವನಾಗಿದ್ದಾನೆ ಎಂದು ಪರಾಶರ ಮುನಿಗಳು ವರ್ಣಿಸಿದ್ದಾರೆ.

ಪರಮದೇವೋತ್ತಮ ಪುರುಷನಾದ ಭಗವಂತನು ಸಕಲೈಶ್ವರ್ಯಗಳ ಸ್ವಾಮಿಯಾಗಿದ್ದಾನೆ. ಜಗತ್ತಿನಲ್ಲಿ ಅನೇಕ ಸಿರಿವಂತರಿದ್ದಾರೆ. ಆದರೆ, ಅವರು ಎಲ್ಲ ಐಶ್ವರ್ಯಗಳನ್ನೂ ಹೊಂದಿದ್ದಾರೆಂದು ಹೇಳಲು ಬರುವುದಿಲ್ಲ. ಹಾಗೆಯೇ ಒಬ್ಬನು ಮತ್ತೊಬ್ಬನು ತನಗಿಂತ ಹೆಚ್ಚು ಸಿರಿವಂತನಲ್ಲವೆಂದು ಹೇಳಲು ಬರುವುದಿಲ್ಲ. ಹಾಗೆಯೇ ಒಬ್ಬನು ತನಗಿಂತ ಹೆಚ್ಚು ಸಿರಿವಂತನಲ್ಲವೆಂದು ಹೇಳಿಕೊಳ್ಳಲೂ ಬರುವುದಿಲ್ಲ. ಕೃಷ್ಣನು ಈ ಭೂಲೋಕದಲ್ಲಿದ್ದಾಗ 16,108 ಮಂದಿ ಹೆಂಡತಿಯರನ್ನು ಹೊಂದಿದ್ದನೆಂದು ಶ್ರೀಮದ್ಭಾಗವತದಿಂದ ನಮಗೆ ತಿಳಿದುಬರುತ್ತದೆ, ಮತ್ತು ಅವನ ಪ್ರತಿಯೊಬ್ಬ ಪತ್ನಿಯೂ ಅಮೃತ ಶಿಲೆಗಳಿಂದ ನಿರ್ಮಿತವಾದ, ರತ್ನಖಚಿತವಾದ ಅರಮನೆಗಳಲ್ಲಿ ವಾಸಿಸುತ್ತಿದ್ದಳು. ಕೋಣೆಗಳೆಲ್ಲ ಹಸ್ತಿದಂತದ ಮತ್ತು ಸ್ವರ್ಣನಿರ್ಮಿತ ಪೀಠೋಪಕರಣಗಳಿಂದ ತುಂಬಿದ್ದವು. ಎಲ್ಲೆಡೆಯಲ್ಲಿಯೂ ಸಂಪತ್ ಸಮೃದ್ಧಿಯು ಕಾಣುತ್ತಿತ್ತು. ಶ್ರೀಮದ್ ಭಾಗವತದಲ್ಲಿ ಇವುಗಳ ಸ್ಪಷ್ಟವರ್ಣನೆ ಇದೆ. **ಹದಿನಾರು ಸಾವಿರ ಹೆಂಡಂದಿರನ್ನೂ** ಹದಿನಾರು ಸಾವಿರ ಅರಮನೆಗಳನ್ನೂ ಹೊಂದಿದ್ದ ಬೇರೊಬ್ಬ ವ್ಯಕ್ತಿಯನ್ನು ನಾವು ಮಾನವಕುಲದ ಇತಿಹಾಸದಲ್ಲಿಯೇ ಕಾಣಲಾರೆವು. ಕೃಷ್ಣನು ಒಬ್ಬೊಬ್ಬ ಹೆಂಡತಿಯ ಬಳಿ ಒಂದೊಂದು ದಿನ ಹೋದನೆಂಬುದೂ ಇಲ್ಲ. ಅವನು ಪ್ರತಿ ಒಂದು ಅರಮನೆಯಲ್ಲಿ ಏಕಕಾಲದಲ್ಲಿ ಸನ್ನಿಹಿತನಾಗಿರುತ್ತಿದ್ದನು. ಎಂದರೆ ಅವನು 16,108 ರೂಪಗಳಲ್ಲಿ ವಿಸ್ತೃತನಾಗುತ್ತಿದ್ದನು. ಇದು ಸಾಮಾನ್ಯ ಮನುಷ್ಯನಿಗೆ ಅಸಾಧ್ಯವೇ ಸರಿ. ಆದರೆ, ದೇವರಿಗೆ ಇದು ಕಷ್ಟಸಾಧ್ಯವಲ್ಲ. ದೇವರು ಅಪರಿಮಿತ ಎಂದಾದರೆ, ಅವನು ತನ್ನನ್ನು ಅಪರಿಮಿತ ರೂಪಗಳಲ್ಲಿ ವಿಸ್ತರಿಸಿಕೊಳ್ಳಬಲ್ಲನು. ಹಾಗಿಲ್ಲವಾದರೆ ಅಪರಿಮಿತ ಎಂಬ ಶಬ್ದಕ್ಕೆ ಅರ್ಥವಿಲ್ಲದಂತಾಗುವುದು. ದೇವರು ಸರ್ವಶಕ್ತನು, ಅವನು ಕೇವಲ ಹದಿನಾರು ಸಾವಿರ ಹೆಂಡಂದಿರನ್ನಷ್ಟೇ ಅಲ್ಲ, ಹದಿನಾರು ಕೋಟಿ ಹೆಂಡಂದಿರನ್ನು ಹೊಂದಿಯೂ ಕಷ್ಟಪಡಬೇಕಾಗಿಲ್ಲ; ಇಲ್ಲದಿದ್ದರೆ, ಅವನು ಸರ್ವಶಕ್ತನೆಂಬುದೂ ಅರ್ಥಹೀನವಾಗುವುದು.

ಇವೆಲ್ಲ ಆಕರ್ಷಕ ಲಕ್ಷಣಗಳು. ಈ ಭೌತಿಕ ಪ್ರಪಂಚದಲ್ಲಿ ಒಬ್ಬನು ಅತಿ ಶ್ರೀಮಂ ನಾಗಿದ್ದರೆ ಅವನು ಆಕರ್ಷಕ ವ್ಯಕ್ತಿಯಾಗಿರುತ್ತಾನೆಂಬುದನ್ನು ನಮ್ಮ ಅನುಭವದಲ್ಲಿ ಕಂಡಿ ದ್ದೇವೆ. ಅಮೇರಿಕದಲ್ಲಿ ರಾಕ್‌ಫೆಲರ್ ಮತ್ತು ಫೋರ್ಡ್ ಅವರುಗಳು ತಮ್ಮ ಐಶ್ವರ್ಯ ದಿಂದಾಗಿ ಬಹು ಆಕರ್ಷಕ ವ್ಯಕ್ತಿಗಳಾಗಿದ್ದಾರೆ. ಇಡೀ ಜಗತ್ತಿನ ಐಶ್ವರ್ಯವೆಲ್ಲ ಅವರ ಬ ಇರದಿದ್ದರೂ ಅವರು ಆಕರ್ಷಕ ವ್ಯಕ್ತಿಗಳಾಗಿದ್ದಾರೆ. ಹೀಗಿರುವಾಗ, ವಿಶ್ವದ ಸಕಲೈಶ್ವರ್ಯ ಸ್ವಾಮಿಯಾಗಿರುವ ದೇವರು ಅದಷ್ಟು ಆಕರ್ಷಕನಾಗಿರಬೇಡ !

ಹೀಗೆಯೇ ಕೃಷ್ಣನು ಅಪರಿಮಿತ ಸಾಮರ್ಥ್ಯವುಳ್ಳವನಾಗಿದ್ದಾನೆ. ಅವನು ಹುಟ್ಟಿದಾ ನಿಂದಲೂ ಅಷ್ಟೇ ಸಮರ್ಥನಾಗಿದ್ದನು. ಕೃಷ್ಣನು ಮೂರು ತಿಂಗಳು ಮಗುವಾಗಿರುವಾಗಲೆ ಪೂತನಿಯು ಅವನನ್ನು ಕೊಲ್ಲಲೆತ್ನಿಸಿದಳು. ಆದರೆ ಕೃಷ್ಣನಿಂದ ಅವಳೇ ಕೊಲ್ಲಲ್ಪಟ್ಟಳು ದೇವರು ಎಂದರೆ ಇದೇ. ದೇವರು ಪ್ರಾರಂಭದಿಂದಲೂ ದೇವರೇ. ಧ್ಯಾನದಿಂದಲೋ ಅಥವಾ ಅದ್ಭುತ ಶಕ್ತಿಯಿಂದಲೋ ಆಮೇಲೆ ಅವನು ದೇವರಾಗುವುದಿಲ್ಲ. ಕೃಷ್ಣನು ಆ ಬಗೆಯ ದೇವ ರಲ್ಲ. ಕೃಷ್ಣನು ಅವತರಿಸಿದಾಗಿನಿಂದಲೂ ದೇವರೇ ಆಗಿದ್ದನು.

ಕೃಷ್ಣನು ಅಪರಿಮಿತ ಕೀರ್ತಿಶಾಲಿಯೂ ಹೌದು. ನಾವು ಕೃಷ್ಣನ ಭಕ್ತರು, ಆದುದರಿಂದ ಅವನ ಗುಣಗಾನ ಮಾಡುತ್ತಿದ್ದೇವೆ ಎಂದು ಹೇಳಬಹುದು. ಆದರೆ ಜಗತ್ತಿನಲ್ಲಿ ಲಕ್ಷೋಪಲಕ್ಷ ಜನ ಭಗವದ್ಗೀತೆಯ ಮಹಾತ್ಮ್ಯವನ್ನು ಬಲ್ಲವರಾಗಿದ್ದಾರೆ. ಜಗತ್ತಿನಲ್ಲಿ ಎಲ್ಲ ದೇಶಗಳಲ್ಲಿ, ತತ್ವ ಜ್ಞಾನಿಗಳು, ಮನಶ್ಶಾಸ್ತ್ರಜ್ಞರು ಮತ್ತು ಧರ್ಮ ಪ್ರತಿಪಾದಕರು ಭಗವದ್ಗೀತೆಯನ್ನು ಓದು ತ್ತಾರೆ. 'ಭಗವದ್ಗೀತೆ ಯಥಾರೂಪ' ಎಂಬ ನಮ್ಮ ಪುಸ್ತಕವೂ ಸಾಕಷ್ಟು ಮಾರಾಟವಾಗುತ್ತಿದೆ. ಅದು ಅಪರಂಜಿ ಚಿನ್ನವಾಗಿರುವುದೇ ಇದಕ್ಕೆ ಕಾರಣ. ಭಗವದ್ಗೀತೆಯ ಅನೇಕ ಆವೃತ್ತಿಗಳಿವೆ. ಆದರೆ ಅವು ಶುದ್ಧವಾಗಿಲ್ಲ. ಭಗವದ್ಗೀತೆಯನ್ನು ಇದ್ದಂತೆಯೇ ನಾವು ಕೊಟ್ಟಿರುವುದರಿಂದ ನಮ್ಮ ಪುಸ್ತಕಕ್ಕೆ ಬಹಳ ಬೇಡಿಕೆಯಿದೆ. ಭಗವದ್ಗೀತೆಯ ಮಹಿಮೆ ಎಂದರೆ ಕೃಷ್ಣನ ಮಹಿ ಮೆಯೇ ಅಲ್ಲವೇ ?

ಸೌಂದರ್ಯ ಎಂಬುದು ಮತ್ತೊಂದು ಐಶ್ವರ್ಯ. ಅದೂ ಕೃಷ್ಣನಲ್ಲಿ ಅಪಾರವಾಗಿದೆ. ಸ್ವಯಂ ಕೃಷ್ಣನೇ ಬಹು ಚಲುವ, ಅವನ ಎಲ್ಲ ಸಂಗಾತಿಗಳೂ ಸುಂದರರು. ಹಿಂದಿನ ಜನ್ಮಗಳಲ್ಲಿ ಪವಿತ್ರರಾಗಿದ್ದವರು ಈ ಭೌತಿಕ ಪ್ರಪಂಚದಲ್ಲಿ ಒಳ್ಳೆಯ ಕುಟುಂಬಗಳಲ್ಲಿ ಮತ್ತು ಒಳ್ಳೆಯ ರಾಷ್ಟ್ರ ಗಳಲ್ಲಿ ಜನ್ಮವೆತ್ತುವ ಅವಕಾಶವನ್ನು ಪಡೆಯುತ್ತಾರೆ. ಅಮೇರಿಕದ ಜನ ಬಹು ಸಿರಿವಂತರು ಮತ್ತು ಸುಂದರರು. ಈ ಐಶ್ವರ್ಯಗಳು ಪೂರ್ವಜನ್ಮದ ಸುಕೃತಗಳ ಫಲ. ಅಮೇರಿಕದವರು ವಿಜ್ಞಾನದಲ್ಲಿ, ಸಂಪತ್ತಿನಲ್ಲಿ, ಸೌಂದರ್ಯ ಮೊದಲಾದ ವಿಷಯಗಳಲ್ಲಿ ಪ್ರಗತಿ ಹೊಂದಿರುವುದ ರಿಂದ, ಜನ ಅವರಿಂದ ಆಕರ್ಷಿತರಾಗಿದ್ದಾರೆ. ಇಡೀ ವಿಶ್ವದಲ್ಲಿ ಇದೊಂದು ಅಲ್ಪ ಗ್ರಹ, ಆದರೂ ಈ ವಿಶ್ವದಲ್ಲಿ ಅಮೇರಿಕಾ ದೇಶವೊಂದೇ ಅನೇಕಾನೇಕ ಆಕರ್ಷಕ ಲಕ್ಷಣಗಳನ್ನು ಹೊಂದಿದೆ. ಹೀಗಿರುವಾಗ, ಅನಂತಕೋಟಿ ಬ್ರಹ್ಮಾಂಡಗಳ ಸೃಷ್ಟಿಕರ್ತನಾದ ದೇವರು ಅದೆಷ್ಟು ಆಕರ್ಷಕ ಲಕ್ಷಣೋಪೇತನಾಗಿರುವನೆಂಬುದನ್ನು ನಾವು ಊಹಿಸಬಹುದಾಗಿದೆ. ಅವನೇ ಸರ್ವ ಸೌಂದರ್ಯ ಗಳ ನಿರ್ಮಾತೃವಾಗಿದ್ದು- ಅವನು ಅದೆಷ್ಟು ಸುಂದರನಾಗಿರಬಹುದು.

ಒಬ್ಬ ವ್ಯಕ್ತಿ ಕೇವಲ ದೈಹಿಕ ಸೌಂದರ್ಯದಿಂದಷ್ಟೆ ಅಲ್ಲದೆ ತನ್ನ ಜ್ಞಾನದಿಂದಲೂ ಆಕರ್ಷಕನಾಗಿರುವನು. ಒಬ್ಬ ವಿಜ್ಞಾನಿ ಅಥವಾ ತತ್ವಜ್ಞಾನಿಯು ತನ್ನ ಜ್ಞಾನದಿಂದಾಗಿ ಆಕರ್ಷಕನಾಗಿರುತ್ತಾನೆ. ಆದರೆ, ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ನೀಡಿದ ಜ್ಞಾನಕ್ಕಿಂತ ಪವಿತ್ರ ನಾದ ಜ್ಞಾನ ಬೇರೊಂದಿದೆಯೇ ? ಆ ಜ್ಞಾನಕ್ಕೆ ಸಾಟಿಯಾದುದು ಜಗತ್ತಿನಲ್ಲಿ ಬೇರೊಂದಿಲ್ಲ. ಹೀಗಿದ್ದೂ, ಕೃಷ್ಣನು ಸಂಪೂರ್ಣ ವೈರಾಗ್ಯಸಂಪನ್ನನೂ ಆಗಿದ್ದಾನೆ. ಈ ಭೌತಿಕ ಜಗತ್ತಿನಲ್ಲಿ ಅನೇಕ ವಸ್ತುಗಳು ಅವನ ನಿರ್ದೇಶನಾನುಸಾರ ವರ್ತಿಸುತ್ತಿವೆ. ಆದರೆ, ಸ್ವಯಂ ಕೃಷ್ಣನು ಇಲ್ಲಿ ಕಾಣುವಂತೆ ಸನ್ನಿಹಿತನಾಗಿಲ್ಲ. ಒಡೆಯನು ಅಲ್ಲಿ ಇಲ್ಲದಿದ್ದರೂ ಒಂದು ದೊಡ್ಡ ಕಾರ್ಖಾನೆಯು ಕೆಲಸ ಮಾಡುತ್ತಿರುತ್ತದೆ. ಅದೇ ಪ್ರಕಾರ ಕೃಷ್ಣಶಕ್ತಿಗಳು ಅವನ ಸಹಾಯಕರಾದ ದೇವತೆಗಳ ನಿರ್ದೇಶನದ ಮೇರೆಗೆ ಕಾರ್ಯ ನಿರ್ವಹಿಸುತ್ತಿರುತ್ತವೆ. ಹೀಗೆ ಕೃಷ್ಣನು ಈ ಭೌತಿಕ ಜಗತ್ತಿನಿಂದ ನಿರ್ಲಿಪ್ತನಾಗಿರುತ್ತಾನೆ. ಇದನ್ನು ಶ್ರುತಿಗಳು ಸಾರಿವೆ.

ಹೀಗೆ ದೇವರು ತನ್ನ ಅನಂತ ವ್ಯಾಪಾರಗಳಿಂದಾಗಿ ಅನೇಕ ಹೆಸರುಗಳನ್ನು ಹೊಂದಿದ್ದಾನೆ. ಅವನು ಈ ಎಲ್ಲ ಐಶ್ವರ್ಯ ಸಂಪನ್ನನಾಗಿರುವುದರಿಂದ ಮತ್ತು ಈ ಐಶ್ವರ್ಯಗಳಿಂದ ಸಕಲರನ್ನೂ ಆಕರ್ಷಿಸುವುದರಿಂದ ಅವನನ್ನು 'ಕೃಷ್ಣ' ಎಂದು ಕರೆಯಲಾಗುತ್ತಿದೆ. ದೇವರಿಗೆ ಅನಂತ ನಾಮಗಳಿವೆಯೆಂದು ವೇದ ಸಾಹಿತ್ಯವು ಸಾರಿದೆ, ಆದರೆ ಕೃಷ್ಣ ಎಂಬ ನಾಮವೇ ಅವೆಲ್ಲವುಗಳಲ್ಲಿ ಪ್ರಧಾನವಾದುದು.

ದೇವರ ನಾಮ, ದೇವರ ವೈಭವ, ದೇವರ ಕರ್ತೃತ್ವ, ದೇವರ ಸೌಂದರ್ಯ ಮತ್ತು ದೇವರ ಪ್ರೇಮ ಇವುಗಳನ್ನು ಕುರಿತು ಪ್ರಚಾರ ಮಾಡುವುದೇ ಕೃಷ್ಣ ಪ್ರಜ್ಞಾ ಆಂದೋಲನದ ಉದ್ದೇಶವಾಗಿದೆ. ಈ ಭೌತಿಕ ಪ್ರಪಂಚದಲ್ಲಿ ಅನೇಕ ವಸ್ತುಗಳಿವೆ. ಅವೆಲ್ಲವೂ ಕೃಷ್ಣನಲ್ಲಿವೆ. ಈ ಭೌತಿಕ ಜಗತ್ತಿನ ಅತ್ಯಂತ ಪ್ರಮುಖ ವಿಷಯವೆಂದರೆ ಕಾಮ. ಅದೂ ಕೃಷ್ಣನಲ್ಲಿದೆ. ನಾವು ರಾಧಾ ಕೃಷ್ಣರನ್ನು ಆರಾಧಿಸುತ್ತೇವೆ. ಅವರಲ್ಲಿ ಪರಸ್ಪರ ಆಕರ್ಷಣೆಯಿದೆ. ಆದರೆ ಭೌತಿಕ ಆಕರ್ಷಣೆಗೂ ಆಧ್ಯಾತ್ಮಿಕ ಆಕರ್ಷಣೆಗೂ ವ್ಯತ್ಯಾಸವಿದೆ. ಕೃಷ್ಣನಲ್ಲಿ ಕಾಮ ಸತ್ಯ ಸ್ವರೂಪದ್ದು, ಭೌತಿಕ ಪ್ರಪಂಚದಲ್ಲಿ ಅದು ಅಸತ್ಯವಾದುದು. ಇಲ್ಲಿ ನಾವು ಕಾಣುವುದೆಲ್ಲ ಆಧ್ಯಾತ್ಮಿಕ ಪ್ರಪಂಚದಲ್ಲಿಯೂ ಉಂಟು, ಆದರೆ ಇಲ್ಲಿ ಅದು ನೈಜಮೌಲ್ಯವನ್ನು ಹೊಂದಿಲ್ಲ. ಅದೂ ಕೇವಲ ಪ್ರತಿಬಿಂಬ. ಈ ಅಂಗಡಿಗಳ ಮುಖದ್ವಾರಗಳಲ್ಲಿ ನಾವು ಅನೇಕ ಬೊಂಬೆಗಳನ್ನು ಕಾಣುತ್ತೇವೆ. ಆದರೆ ಅವುಗಳಿಗೆ ಯಾರೂ ಲಕ್ಷ್ಯಕೊಡುವುದಿಲ್ಲ. ಅವು ಕೇವಲ ಪ್ರತಿಮೆಗಳು ಎಂಬುದನ್ನು ಅವರು ಬಲ್ಲರು. ಒಂದು ಬೊಂಬೆಯು ಅತ್ಯಂತ ಸುಂದರವಾಗಿರಬಹುದು, ಆದರೂ ಅದು ಸತ್ಯಸ್ವರೂಪದ್ದಲ್ಲ. ಆದರೆ ಜನ ಒಬ್ಬ ಸುಂದರಾಂಗನೆಯನ್ನು ಕಂಡಾಗ ಆಕರ್ಷಿತರಾಗುತ್ತಾರೆ. ಕಾರಣವೆಂದರೆ, ಅವಳು ನಿಜ ಎಂದು ಅವರು ಭಾವಿಸುತ್ತಾರೆ. ನಿಜ ಹೇಳುವುದಾದರೆ, ಇಲ್ಲಿ ಸಜೀವರೆಂದು ಹೇಳಿಕೊಳ್ಳುವವರೆಲ್ಲರೂ ಮೃತರೇ ಸರಿ. ಕಾರಣ ಇಷ್ಟೆ : ಅವರೆಲ್ಲರೂ ಕೇವಲ ಜಡ ಪ್ರಕೃತಿಯ ಒಂದು ಮುದ್ದೆ ಮಾತ್ರ ; ಆತ್ಮವು ದೇಹವನ್ನು ತೊರೆದಾಕ್ಷಣ, ಯಾರೂ ಆ ಸುಂದರ ಸ್ತ್ರೀ ದೇಹವನ್ನು ನೋಡ ಬಯಸುವುದಿಲ್ಲ. ನಿಜಾಂಶವೆಂದರೆ, ಆತ್ಮವೇ ನಿಜವಾದ ಆಕರ್ಷಕ ಶಕ್ತಿಯಾಗಿದೆ.

ಈ ಭೌತಿಕ ಜಗತ್ತಿನಲ್ಲಿ ಎಲ್ಲವೂ ಜಡಪದಾರ್ಥ ನಿರ್ಮಿತವಾಗಿದೆ, ಅಂತೆಯೇ ಅನು

ಕೇವಲ ಅನುಕರಣ. ಅದರ ಸತ್ಯ ಸ್ವರೂಪ ಆಧ್ಯಾತ್ಮ ಪ್ರಪಂಚದಲ್ಲಿದೆ. ಭಗವದ್ಗೀತೆಯನ್ನು ಓದಿದವರು ಆಧ್ಯಾತ್ಮಿಕ ಪ್ರಪಂಚ ಹೇಗಿರುತ್ತದೆ ಎಂಬುದನ್ನು ಅರಿತವರಾಗಿರುತ್ತಾರೆ. ಅಲ್ಲಿ ಅದನ್ನು ಹೀಗೆ ವರ್ಣಿಸಲಾಗಿದೆ :

ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ ಸನಾತನಃ ।
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥

"ಇದಕ್ಕಿಂತ ಬೇರಾದ ನಿಸರ್ಗವೊಂದಿದೆ, ಅದು ಪ್ರಕಟ ಮತ್ತು ಅಪ್ರಕಟ ವಸ್ತುಗಳಿಗೆ ಅತೀತವಾದ ನಿತ್ಯ ಸ್ವರೂಪದ್ದಾಗಿದೆ. ಅದು ಪರಮ ಸ್ವರೂಪದ್ದು, ಅದಕ್ಕೆ ನಾಶವೆಂಬುದೇ ಇಲ್ಲ. ಈ ಜಗತ್ತೆಲ್ಲ ನಾಶಹೊಂದಿದರೂ ಅದು ಇದ್ದಂತೆಯೇ ಉಳಿದುಕೊಂಡಿರುತ್ತದೆ". ('ಭ. ಗೀ.' 8.20)

ವಿಜ್ಞಾನಿಗಳು ಈ ಭೌತಿಕ ಜಗತ್ತಿನ ಉದ್ದಗಲವನ್ನು ಅಳೆಯಲು ಯತ್ನಿಸುತ್ತಿದ್ದಾರೆ. ಆದರೆ ಅವರಿಗೆ ಅದರ ಸುಳಿವೇ ಸಿಕ್ಕಿಲ್ಲ. ಅತ್ಯಂತ ಸಮೀಪದ ನಕ್ಷತ್ರಕ್ಕೆ ಹೋಗಲು ಕೂಡ ಅವರಿಗೆ ಸಾವಿರಾರು ವರ್ಷ ಬೇಕು. ಇನ್ನೂ ಆಧ್ಯಾತ್ಮಿಕ ಜಗತ್ತಿನ ಮಾತೇನು ? ನಮಗೆ ಭೌತಿಕ ಜಗತ್ತಿನ ಜ್ಞಾನವೇ ಆಗದಿರುವಾಗ ಅದರಾಚೆಗಿರುವುದನ್ನು ನಾವು ತಿಳಿಯುವುದಾದರೂ ಹೇಗೆ ? ಗಮನಿಸಬೇಕಾದ ಅಂಶವೆಂದರೆ ನಾವು ಅಧಿಕೃತ ಮೂಲದಿಂದ ಇದನ್ನು ಅರಿತುಕೊಳ್ಳಬೇಕು.

ಪರಮ ಅಧಿಕೃತ ಮೂಲವೆಂದರೆ ಕೃಷ್ಣನೇ, ಅವನೇ ಸರ್ವಜ್ಞಾನದ ಮೂಲ ಸ್ರೋತನಾಗಿರುವುದರಿಂದ ಕೃಷ್ಣನಿಗಿಂತ ಬುದ್ಧಿವಂತರೂ ಅಥವಾ ಹೆಚ್ಚಿನ ಜ್ಞಾನಿಗಳು ಯಾರೂ ಇಲ್ಲ. ಈ ಭೌತಿಕ ಜಗತ್ತಿನಾಚೆಗೆ ಆಧ್ಯಾತ್ಮಿಕ ವ್ಯೋಮವಿದೆ. ಅದು ಅನೇಕ ಗ್ರಹವ್ಯೂಹಯುಕ್ತವಾಗಿದೆ ಎಂದು ಕೃಷ್ಣನು ಹೇಳುತ್ತಾನೆ. ಆ ಪರವ್ಯೋಮವು ಈ ಭೌತಿಕ ಆಕಾಶಕ್ಕಿಂತ ದೊಡ್ಡದು, ಬಹು ದೊಡ್ಡದಾಗಿದೆ. ಈ ಭೌತಿಕ ಜಗತ್ತು ಇಡೀ ಸೃಷ್ಟಿಯ ಏಕಪಾದ ಮಾತ್ರ. ಹಾಗೆಯೇ ಭೌತಿಕ ಜಗತ್ತಿನಲ್ಲಿರುವ ಜೀವರುಗಳೆಲ್ಲ ಇಡೀ ಸೃಷ್ಟಿಯ ಜೀವಾತ್ಮರ ಅತ್ಯಲ್ಪ ಭಾಗ ಮಾತ್ರ. ಈ ಭೌತಿಕ ಜಗತ್ತನ್ನು ಬಂದೀಖಾನೆಗೆ ಹೋಲಿಸಲಾಗಿದೆ. ಬಂದೀಖಾನೆಯಲ್ಲಿರುವವರು ಹೇಗೆ ಒಟ್ಟು ಜನಸಂಖ್ಯೆಯ ಅತ್ಯಲ್ಪ ಪ್ರಮಾಣವಾಗಿರುತ್ತಾರೋ ಹಾಗೆಯೇ ಭೌತಿಕ ಜಗತ್ತಿನ ಜೀವರುಗಳೆಲ್ಲ ಎಲ್ಲ ಜೀವಾತ್ಮರ ಒಟ್ಟು ಪ್ರಮಾಣದ ಅತ್ಯಲ್ಪ ಭಾಗವಾಗಿರುತ್ತಾರೆ.

ದೇವರ ವಿರುದ್ಧ ತಲೆಯೆತ್ತಿ ನಿಂತವರನ್ನೆಲ್ಲ– ಅವರು ಅಪರಾಧಿಗಳಾಗಿದ್ದು–ಈ ಭೌತಿಕ ಜಗತ್ತಿಗೆ ಕಳಿಸಲಾಗುತ್ತದೆ. ತಾವು ಸರಕಾರವನ್ನು ಗಮನಿಸುವುದೇ ಇಲ್ಲ ಎಂದು ಕೆಲವು ಸಣ್ಣ ಪಾತಕಿಗಳು ಹೇಳುತ್ತಾರೆ. ಆದರೂ, ಅವರನ್ನು ಸೆರೆ ಹಿಡಿದು ದಂಡಿಸಲಾಗುತ್ತದೆ. ಅದೇ ಪ್ರಕಾರ, ದೇವರ ಅಸ್ತಿತ್ವವನ್ನು ನಿರಾಕರಿಸುವ ಜೀವರನ್ನು ಭೌತಿಕ ಜಗತ್ತಿಗೆ ತಳ್ಳಲಾಗುತ್ತದೆ.

ಮೂಲತಃ, ತಂದೆ ಮಕ್ಕಳ ಸಂಬಂಧದಂತೆ, ಎಲ್ಲ ಜೀವಾತ್ಮರೂ ಭಗವಂತನ ವಿಭಿನ್ನಾಂಶರೇ ಆಗಿದ್ದಾರೆ. ದೇವರು ಪರಮ ತಂದೆ ಎಂಬುದನ್ನು ಕ್ರೈಸ್ತಧರ್ಮೀಯರೂ ಒಪ್ಪುತ್ತಾರೆ. ಅವರು ಚರ್ಚಿಗೆ ಹೋಗಿ, "ಸ್ವರ್ಗ ಲೋಕದಲ್ಲಿರುವ ಹೇ ನಮ್ಮ ತಂದೆಯೇ" ಎಂದು

ಪ್ರಾರ್ಥಿಸುತ್ತಾರೆ. ಭಗವದ್ಗೀತೆಯಲ್ಲಿಯೂ [14.4] ದೇವರು ಪರಮ ಪಿತನೆಂಬ ಕಲ್ಪನೆ ಉಕ್ತವಾಗಿದೆ:

ಸರ್ವಯೋನಿಷು ಕೌಂತೇಯ ಮೂರ್ತಯಃ ಸಭಂವಂತಿ ಯಾಃ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ॥

''ಹೇ ಕುಂತೀಪುತ್ರನೇ, ಎಲ್ಲ ಯೋನಿಗಳ ಜೀವರಾಶಿಗಳು ಈ ಭೌತಿಕ ಪ್ರಪಂಚದಲ್ಲಿ ಹುಟ್ಟಿಬರುವ ಅವಕಾಶವಿದೆ. ಅವರೆಲ್ಲರಿಗೂ ಬೀಜಪ್ರದನಾಗಿರುವ ತಂದೆ ನಾನೇ.''

ಜಲಚರಗಳೂ, ಗಿಡಮರಗಳೂ, ಪಶು ಪಕ್ಷಿಗಳೂ, ಕ್ರಿಮಿ ಕೀಟಗಳೂ ಮತ್ತು ಮಾನವ ಜೀವರೂ ಸೇರಿ 8,400,000 ಯೋನಿಶರೀರ ಜೀವರಾಶಿಗಳಿದ್ದಾರೆ. ಮಾನವ ಜೀವರಲ್ಲಿ ಅನೇಕರು ಅನಾಗರಿಕರು, ಮತ್ತು ಕೆಲವೇ ನಾಗರಿಕ ಮಾನವರಲ್ಲಿ ಅತ್ಯಲ್ಪ ಸಂಖ್ಯೆಯ ಜನ ಮಾತ್ರ ಧಾರ್ಮಿಕ ಜೀವನವನ್ನು ಆಯ್ದುಕೊಳ್ಳುತ್ತಾರೆ. ಹಾಗೆ ಧಾರ್ಮಿಕರೆಂದು ಹೇಳಿಕೊಳ್ಳುವವರಲ್ಲಿ ಕೂಡ, ಅನೇಕರು, ''ನಾನು ಹಿಂದೂ'', '' ನಾನು ಮುಸ್ಲಿಮ್'', 'ನಾನು ಕ್ರಿಶ್ಚನ್' ಎಂದು ಮುಂತಾಗಿ ಹೇಳಿಕೊಳ್ಳುವವರೇ ಹೆಚ್ಚು ಜನ. ಮತ್ತೆ ಕೆಲವರು ಮಾನವ ಕಲ್ಯಾಣ ಕಾರ್ಯದಲ್ಲಿ ತೊಡಗುತ್ತಾರೆ. ಕೆಲವರು ಬಡವರಿಗೆ ದಾನ ಮಾಡುತ್ತಾರೆ. ಮತ್ತೆ ಕೆಲವರು ಶಾಲೆ ಆಸ್ಪತ್ರೆಗಳನ್ನು ತೆರೆಯುತ್ತಾರೆ. ಈ ಪರಹಿತ ಸಾಧನೆಯ ಮಾರ್ಗವನ್ನು ಕರ್ಮ-ಕಾಂಡ ಎಂದು ಕರೆಯಲಾಗುತ್ತದೆ. ಲಕ್ಷೋಪಲಕ್ಷ ಇಂಥ ಕರ್ಮ ಕಾಂಡಿಗಳಲ್ಲಿ ಒಬ್ಬ ಜ್ಞಾನಿಯು (ತಿಳಿದವನಾದ) ಸಿಕ್ಕುವುದು ದುರ್ಲಭ. ಅಂಥ ಲಕ್ಷೋಪಲಕ್ಷ ಜ್ಞಾನಿಗಳಲ್ಲಿ ಒಬ್ಬನು ಮುಕ್ತನು ಸಿಕ್ಕಬಹುದೇನೋ: ಅಂಥ ಕೋಟಿಗಟ್ಟಲೆ ಮುಕ್ತ ಜೀವರಲ್ಲಿ ಒಬ್ಬನು ಕೃಷ್ಣನನ್ನು ಅರಿಯಲು ಸಾಧ್ಯವಾದೀತೇನೋ. ಇದು ಕೃಷ್ಣನ ಸ್ಥಾನ. ಕೃಷ್ಣನೇ ಭಗವದ್ಗೀತೆಯಲ್ಲಿ ಹೀಗೆ ಹೇಳಿದ್ದಾನೆ [7.3] :

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ॥

"ಸಹಸ್ರಾರು ಮಾನವರಲ್ಲಿ ಪರಿಪೂರ್ಣತೆಗಾಗಿ ಒಬ್ಬನು ಪ್ರಯತ್ನಿಸಬಹುದು, ಮತ್ತು ಹಾಗೆ ಪರಿಪೂರ್ಣತೆಯನ್ನು ಸಾಧಿಸಿದವರಲ್ಲಿ ನಿಜವಾಗಿ ನನ್ನನ್ನು ಬಲ್ಲವನು ಒಬ್ಬನು ಸಿಕ್ಕುವುದೂ ಕಷ್ಟ."

ಹೀಗಿರುವಾಗ ಕೃಷ್ಣನನ್ನು ಅರಿಯುವುದು ಬಹು ಕಷ್ಟಕರ. ದೇವರನ್ನು ಅರಿತುಕೊಳ್ಳುವುದು ಕಷ್ಟಸಾಧ್ಯವಾದ ವಿಷಯವಾಗಿದ್ದರು ಕೂಡ ದೇವರು ಭಗವದ್ಗೀತೆಯಲ್ಲಿ ತನ್ನನ್ನು ಕುರಿತು ಹೀಗೆ ವರ್ಣಿಸುತ್ತಾನೆ: "ನಾನು ಹೀಗಿದ್ದೇನೆ, ಭೌತಿಕ ಪ್ರಪಂಚ ಹೀಗಿದೆ. ಆಧ್ಯಾತ್ಮಿಕ ಪ್ರಪಂಚ ಹೀಗಿದೆ. ಜೀವಾತ್ಮರು ಹೀಗಿದ್ದಾರೆ. ಪರಮಾತ್ಮನು ಹೀಗಿದ್ದಾನೆ." ಹೀಗೆ ಭಗವದ್ಗೀತೆಯಲ್ಲಿ ಎಲ್ಲದರ ಪೂರ್ಣ ವಿವರಣೆ ಇದೆ. ದೇವರನ್ನು ಅರಿಯುವುದು ಬಹು ಕಷ್ಟವಾಗಿದ್ದರೂ ಕೂಡ, ಸ್ವಯಂ ದೇವರೇ ತನ್ನನ್ನು ಕುರಿತು ಜ್ಞಾನವನ್ನು ನೀಡುವಾಗ ಅದು ಕಷ್ಟ ಸಾಧ್ಯವಾಗುವುದಿಲ್ಲ. ನಿಜವಾಗಿ ದೇವರನ್ನು ಅರಿತುಕೊಳ್ಳಲು ಅದೊಂದೇ ಮಾರ್ಗ. ನಮ್ಮ ಊಹೆಯಿಂದ ದೇವರನ್ನು ತಿಳಿದುಕೊಳ್ಳುವುದು ಅಸಾಧ್ಯ. ಕಾರಣವೇನೆಂದರೆ ಅವನು ಅಪರಿಮಿತ, ನಾವು ಪರಿಮಿತ.

ನಮ್ಮ ಜ್ಞಾನ ಮತ್ತು ದೃಷ್ಟಿ ಎರಡೂ ಬಹು ಪರಿಮಿತವಾದುವು. ಎಂದ ಮೇಲೆ ಅಪರಿಮಿತನನ್ನು ನಾವು ಹೇಗೆ ಅರಿಯಲು ಸಾಧ್ಯ? ಅಪರಿಮಿತನ ಬಗ್ಗೆ ವರ್ಣನೆಯನ್ನು ನಾವು ಸುಮ್ಮನೆ ಒಪ್ಪಿಕೊಳ್ಳುವುದಾದರೆ, ನಾವು ಆವನನ್ನು ತಿಳಿದುಕೊಳ್ಳಬಹುದು. ಅಂಥ ಅರಿವೇ ನಮ್ಮ ಪರಿಪೂರ್ಣತೆ.

ದೇವರ ಬಗ್ಗೆ ಊಹಾಪೋಹದಿಂದ ನಮಗೆ ಯಾವುದೂ ನಿಲುಕುವುದಿಲ್ಲ. ಮಗು ತನ್ನ ತಂದೆ ಯಾರೆಂಬುದನ್ನು ತಿಳಿದುಕೊಳ್ಳಲು ಬಯಸಿದರೆ, ಸರಳ ಮಾರ್ಗವೆಂದರೆ ಅದು ತನ್ನ ತಾಯಿಯನ್ನು ಕೇಳಬೇಕು. ಆಗ ತಾಯಿ "ಇವನು ನಿನ್ನ ತಂದೆ" ಎಂದು ಹೇಳುತ್ತಾಳೆ. ಇದೇ ಪರಿಪೂರ್ಣ ಜ್ಞಾನ ಪ್ರಾಪ್ತಿಯ ಮಾರ್ಗ. ಒಬ್ಬನು ತನ್ನ ತಂದೆ ಯಾರೆಂಬ ಬಗ್ಗೆ ಊಹಾಪೋಹ ಮಾಡಬಹುದಾಗಿದೆ. ಇವನು ತನ್ನ ತಂದೆಯೋ ಅಥವಾ ಅವನು ತನ್ನ ತಂದೆಯೋ ಎಂದು ಕುತೂಹಲದಿಂದ ಇಡೀ ನಗರವನ್ನೆಲ್ಲ ಸುತ್ತುತ್ತ "ನೀನು ನನ್ನ ತಂದೆಯೋ, ಮತ್ತೆ ನೀನು ನನ್ನ ತಂದೆಯೋ ?" ಎಂದು ಕೇಳುತ್ತ ಅಲೆಯಬಹುದು. ಈ ವಿಧಾನದಿಂದ ದೊರೆತ ಜ್ಞಾನವು ಸದಾ ಅಪರಿಪೂರ್ಣವಾಗಿರುವುದು. ಈ ವಿಧಾನದಿಂದ ಯಾರೂ ತನ್ನ ತಂದೆಯನ್ನು ತಿಳಿದುಕೊಳ್ಳುವುದು ಸಾಧ್ಯವಿಲ್ಲ. ಒಬ್ಬ ಅಧಿಕೃತ ವ್ಯಕ್ತಿಯಿಂದ ತಿಳುವಳಿಕೆಯನ್ನು ಪಡೆದುಕೊಳ್ಳುವುದೇ ಸರಳ ಮಾರ್ಗ. ಈ ಸಂದರ್ಭದಲ್ಲಿ ತಾಯಿಯೇ ಅಂಥ ಅಧಿಕೃತ ವ್ಯಕ್ತಿ. ಅವಳು "ನನ್ನ ಮುದ್ದು ಮಗುವೆ, ನಿನ್ನ ತಂದೆ ಇಲ್ಲಿದ್ದಾನೆ" ಎಂದು ಸರಳವಾಗಿ ಉತ್ತರಿಸುತ್ತಾಳೆ. ಈ ರೀತಿಯಿಂದ ದೊರೆತ ಜ್ಞಾನ ಪರಿಪೂರ್ಣವಾದದ್ದು. ದಿವ್ಯ ಜ್ಞಾನ ಪ್ರಾಪ್ತಿಯು ಹೀಗೆಯೆ. ನಾನು ಇದೀಗ ಆಧ್ಯಾತ್ಮ ಪ್ರಪಂಚದ ಬಗ್ಗೆ ಕೇಳುತ್ತಿದ್ದೆ. ಈ ಆಧ್ಯಾತ್ಮ ಪ್ರಪಂಚವು ನಮ ಊಹೆಗೆ ನಿಲುಕುವುದಿಲ್ಲ. "ಆಧ್ಯಾತ್ಮ ಲೋಕವೊಂದಿದೆ. ಅದೇ ನನ್ನ ಕೇಂದ್ರ ಸ್ಥಾನ" ಎಂದು ದೇವರು ಹೇಳುತ್ತಾನೆ. ಹೀಗೆ ಪರಮಾಧಿಕಾರಿಯಾದ ಕೃಷ್ಣನಿಂದಲೇ ನಾವು ಜ್ಞಾನವನ್ನು ಪಡೆದುಕೊಳ್ಳುತ್ತೇವೆ. ನಾವು ಪರಿಪೂರ್ಣರಾಗಿ ಇಲ್ಲದಿರಬಹುದು. ಆದರೆ ನಾವು ಪರಿಪೂರ್ಣ ಮೂಲದಿಂದ ಜ್ಞಾನವನ್ನು ಪಡೆದುಕೊಂಡಿರುವುದರಿಂದ ಈ ಜ್ಞಾನವು ಪರಿಪೂರ್ಣವಾದದ್ದಾಗಿದೆ.

ಮಾನವ ಸಮಾಜಕ್ಕೆ ಪರಿಪೂರ್ಣ ಜ್ಞಾನವನ್ನು ದೊರಕಿಸಿಕೊಡುವುದೇ ಕೃಷ್ಣಪ್ರಜ್ಞಾ ಆಂದೋಲನದ ಉದ್ದೇಶವಾಗಿದೆ. ಇಂಥ ಜ್ಞಾನದಿಂದ ನಾನು ಯಾರು, ದೇವರು ಯಾರು, ಭೌತಿಕ ಜಗತ್ತು ಏನು, ನಾವೇಕೆ ಇಲ್ಲಿಗೆ ಬಂದಿದ್ದೇವೆ, ನಾವೇಕೆ ಇಷ್ಟೊಂದು ಕಷ್ಟ ಕಾರ್ಪಣ್ಯ ಸಹಿಸಬೇಕು ಮತ್ತು ನಾವೇಕೆ ಸಾಯಬೇಕು ಎಂಬುದನ್ನು ಮನುಷ್ಯನು ಅರಿತುಕೊಳ್ಳಬಹುದು. ಯಾರೂ ಸಾಯಬಯಸುವುದಿಲ್ಲ ನಿಜ. ಆದರೆ ಮರಣ ಒದಗುತ್ತದೆ. ಯಾರೂ ಮುಪ್ಪನ್ನು ಬಯಸುವುದಿಲ್ಲ. ಆದರೆ ಮುಪ್ಪು ಬರುತ್ತದೆ. ಯಾರೂ ರೋಗಗ್ರಸ್ತರಾಗಲು ಬಯಸುವುದಿಲ್ಲ. ಆದರೆ ಕಾಯಿಲೆಗಳು ಬರುವುದು ಖಂಡಿತ. ಇವು ಮಾನವ ಜೀವನದ ನಿಜವಾದ ಸಮಸ್ಯೆಗಳು. ಇವುಗಳಿಗೆ ನಾವು ಇನ್ನೂ ಪರಿಹಾರ ಕಂಡುಕೊಳ್ಳಬೇಕಾಗಿದೆ. ನಮ್ಮ ನಾಗರಿಕತೆಯು ನಮ್ಮ ತಿನ್ನುವ, ನಿದ್ರಿಸುವ, ಭೋಗಿಸುವ ಮತ್ತು ರಕ್ಷಿಸಿಕೊಳ್ಳುವ ವಿಧಾನಗಳನ್ನು ಸುಧಾರಿಸಲು ಪ್ರಯತ್ನಿಸುತ್ತಿದೆ. ಆದರೆ ಇವು ನಿಜವಾದ ಸಮಸ್ಯೆಗಳಲ್ಲ. ಮನುಷ್ಯನೂ ನಿದ್ರಿಸುತ್ತಾನೆ. ನಾಯಿಯೂ ನಿದ್ರಿಸುತ್ತದೆ. ಮನುಷ್ಯನಿಗೆ ಒಂದು ಭವ್ಯವಾದ ನಿವಾಸ ಇದೆಯೆಂಬ ಮಾತ್ರ

ದಿಂದ ಅವನು ಪ್ರಗತಿ ಹೊಂದಿದ್ದಾನೆಂದಲ್ಲ. ಈ ಎರಡೂ ಪ್ರಸಂಗಗಳಲ್ಲಿ ನಡೆಯುವ ವ್ಯವಹಾರ ಎಂದರೆ ನಿದ್ರಿಸುವುದು ಒಂದೇ ಬಗೆಯದಾಗಿದೆ. ಮನುಷ್ಯನು ತನ್ನ ರಕ್ಷಣೆಗಾಗಿ ಅಣು ಶಸ್ತ್ರಗಳನ್ನು ಕಂಡುಹಿಡಿದಿದ್ದಾನೆ. ಆದರೆ ನಾಯಿಗೂ ಕೂಡ ತನ್ನ ರಕ್ಷಣೆಗಾಗಿ ಹರಿತವಾದ ಹಲ್ಲುಗಳು ಚೂಪಾದ ಉಗುರುಗಳು ಇವೆ. ಈ ಉಭಯ ಪ್ರಸಂಗಗಳಲ್ಲಿ ರಕ್ಷಣೆಯ ಏರ್ಪಾಡು ಇದೆ. ಮನುಷ್ಯನು ತಾನು ಅಣು ಬಾಂಬನ್ನು ಹೊಂದಿರುವುದರಿಂದ ಇಡೀ ಜಗತ್ತನ್ನಾಗಲಿ ಅಥವಾ ಇಡೀ ವಿಶ್ವವನ್ನಾಗಲಿ ತಾನು ಗೆಲ್ಲಬಹುದೆಂದು ಹೇಳಲು ಬರುವುದಿಲ್ಲ. ಅದು ಸಾಧ್ಯವೂ ಇಲ್ಲ. ಮನುಷ್ಯನು ತನ್ನ ರಕ್ಷಣೆಗಾಗಿ ವಿಸ್ತೃತವಾದ ವಿಧಾನವನ್ನು ಏರ್ಪಡಿಸಿಕೊಳ್ಳಬಹುದು, ಅಥವಾ ತನ್ನ ಭೋಜನ, ನಿದ್ರೆ ಅಥವಾ ಸಂಭೋಗದ ವೈಭವವೋಪೇತವಾದ ಏರ್ಪಾಡುಗಳನ್ನು ಮಾಡಿಕೊಳ್ಳಬಹುದು. ಆದರೆ ಅಷ್ಟರಿಂದಲೇ ಅವನು ಪ್ರಗತಿ ಹೊಂದಿದವನಾಗುವುದಿಲ್ಲ. ಮಾನವನ ಪ್ರಗತಿಯನ್ನು ನಾವು ಕೇವಲ ಒಂದು ಮೆರುಗಿನ ಪಶು ಜೀವನ ಎಂದು ಹೇಳಬಹುದಷ್ಟೆ.

ನಿಜವಾದ ಪ್ರಗತಿಯೆಂದರೆ ದೇವರನ್ನು ತಿಳಿದುಕೊಳ್ಳುವುದು, ನಮಗೆ ದೇವರ ಬಗ್ಗೆ ಜ್ಞಾನವಿಲ್ಲದಿದ್ದರೆ ನಾವು ನಿಜವಾಗಿ ಪ್ರಗತಿಪರರಲ್ಲ. ಅನೇಕ ಖೂಳರು ದೇವರ ಅಸ್ತಿತ್ವವನ್ನು ಅಲ್ಲಗಳೆಯುತ್ತಾರೆ. ಕಾರಣವಿಷ್ಟೆ. ದೇವರು ಇಲ್ಲ ಎಂದಾದರೆ ಅವರು ತಮ್ಮ ಪಾಪ ಕಾರ್ಯಗಳನ್ನು ಮುಂದುವರಿಸಲು ಅನುಕೂಲವಾಗುತ್ತದೆ. ದೇವರು ಇಲ್ಲ ಎಂದು ಭಾವಿಸುವುದು ಅವರಿಗೆ ಸೊಗಸೆನಿಸಬಹುದು, ಆದರೆ ನಾವು ನಿರಾಕರಿಸಿದ ಮಾತ್ರದಿಂದ ದೇವರು ಸಾಯುವುದಿಲ್ಲ. ದೇವರು ಇದ್ದೇ ಇರುತ್ತಾನೆ ಮತ್ತು ಅವನ ಶಾಸನವೂ ಇದ್ದೇ ಇರುತ್ತದೆ. ಅವನ ಆಜ್ಞಾನುಸಾರ ಸೂರ್ಯನು ಮೂಡುತ್ತಾನೆ, ಚಂದ್ರನು ಉದಯಿಸುತ್ತಾನೆ, ಜಲಪ್ರವಹಿಸುತ್ತದೆ, ಮತ್ತು ಸಾಗರವು ತರಂಗಗಳನ್ನೇಳಿಸುತ್ತದೆ. ಹೀಗೆ ಎಲ್ಲವೂ ಅವನ ಆಜ್ಞಾಧೀನವಾಗಿ ವರ್ತಿಸುತ್ತವೆ. ಎಲ್ಲವೂ ಅಚ್ಚುಕಟ್ಟಾಗಿ ನಡೆದಿರುವುದರಿಂದ, ದೇವರು ಸತ್ತುಹೋಗಿದ್ದಾನೆಂದು ಯಾರಾದರೂ ಭಾವಿಸಬಹುದೇ ? ಅವ್ಯವಸ್ಥೆ ಇದ್ದರೆ, ಸರ್ಕಾರವೆಂಬುದಿಲ್ಲ ಎಂದು ನಾವು ಹೇಳಬಹುದು. ಆದರೆ ಸುವ್ಯವಸ್ಥಿತವಾದ ಏರ್ಪಾಡು ಇದೆ. ಹೀಗಿರುವಾಗ ಸರ್ಕಾರ ಎಂಬುದಿಲ್ಲ ಎಂದು ಹೇಗೆ ತಾನೆ ನಾವು ಹೇಳಬಹುದು ? ಜನರಿಗೆ ದೇವರ ಅರಿವು ಇಲ್ಲ, ಅಂತೆಯೇ ಅವರು, ದೇವರು ಮೃತ, ದೇವರು ಇಲ್ಲ ಅಥವಾ ಅವನಿಗೆ ಯಾವ ರೂಪವೂ ಇಲ್ಲ ಎಂದು ಹೇಳುತ್ತಾರೆ. ಆದರೆ ದೇವರು ಇದ್ದಾನೆ ಮತ್ತು ಅವನೇ ಕೃಷ್ಣ ಎಂಬುದೇ ನಮ್ಮ ಅಚಲನಂಬುಗೆ. ಅಂತೆಯೇ ನಾವು ಅವನನ್ನು ಆರಾಧಿಸುತ್ತೇವೆ. ಇದೇ ಕೃಷ್ಣಪ್ರಜ್ಞೆಯ ವಿಧಾನ. ಇದನ್ನು ನೀವು ಅರಿತುಕೊಳ್ಳಿರಿ. ನಿಮಗೆ ಅನಂತ ಧನ್ಯವಾದಗಳು.





# ಪುನರ್ಜನ್ಮ ಮತ್ತು ಆ ಮುಂದೆ

**ಆಗಸ್ಟ್ 1976 ರಲ್ಲಿ ಶ್ರೀಲ ಪ್ರಭುಪಾದರು ಲಂಡನ್ನಿನಿಂದ ಉತ್ತರಕ್ಕೆ 15 ಮೈಲಿ ದೂರದಲ್ಲಿರುವ ಭಕ್ತಿವೇದಾಂತ ಮಂದಿರದಲ್ಲಿ (ಮ್ಯಾನರ್) ಕೆಲವು ವಾರ ಕಳೆದರು. ಆ ಸಮಯದಲ್ಲಿ ಅವರ ನಿವಾಸದಲ್ಲಿಯೇ ಲಂಡನ್ ಬ್ರಾಡ್‌ಕಾಸ್ಟಿಂಗ್ ಕಂಪನಿಯ ಮೈಕ್ ರಾಬಿನ್‌ಸನ್ ಎಂಬಾತನು ಅವರ ಸಂದರ್ಶನ ಮಾಡಿದನು. ಆ ಬಳಿಕವೇ ಪ್ರಸಾರವಾದ ಅವರ ಮಾತುಕತೆಗಳಲ್ಲಿ ಶ್ರೀಲ ಪ್ರಭುಪಾದರು ಕೃಷ್ಣಪ್ರಜ್ಞೆ ಎಂದರೆ "ನಾನು ಭಾವಿಸುವ, ನೀವು ಭಾವಿಸುವ ಕುರುಡು ಆಚರಣೆಗಳಲ್ಲ" ಎಂದಿದ್ದಾರೆ. ಅದೊಂದು ಆಳವಾದ ತತ್ವಜಿಜ್ಞಾಸೆಯ ವಿಧಾನವಾಗಿದೆ. ಅದರಲ್ಲಿ ಪುನರ್ಜನ್ಮದ ವಿಷಯವನ್ನು ಸ್ಪಷ್ಟವಾಗಿ ಮತ್ತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.**

ಮೈಕ್ ರಾಬಿನ್‌ಸನ್ : ಹರೇ ಕೃಷ್ಣ ಆಂದೋಲನದ ತತ್ವಜ್ಞಾನವೆಂದರೇನು—ಎಂಬ ಬಗ್ಗೆ ನಿಮ್ಮ ಭಾವನೆ ಏನೆಂಬುದನ್ನು ಹೇಳುವಿರಾ ?

ಶ್ರೀಲ ಪ್ರಭುಪಾದ : ಆಗಲಿ. ಕೃಷ್ಣಪ್ರಜ್ಞೆಯೆಂಬುದು ಒಂದು ಭಾವನೆಯ ಪ್ರಶ್ನೆ ಅಲ್ಲ. ಅದೊಂದು ವಿಜ್ಞಾನ. ಮೊದಲನೆಯದಾಗಿ ಸಜೀವ ಶರೀರ ಮತ್ತು ಮೃತ ಶರೀರದ ನಡುವಿನ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕು. ವ್ಯತ್ಯಾಸವೇನು ? ವ್ಯತ್ಯಾಸವೆಂದರೆ, ಯಾರಾದರೂ ಸತ್ತಾಗ, ಜೀವಾತ್ಮವು ಆ ದೇಹವನ್ನು ಬಿಡುತ್ತದೆ. ಆದ್ದರಿಂದ ದೇಹವು "ಮೃತ" ಎಂದು ಹೇಳುತ್ತೇವೆ. ಹೀಗೆ ಎರಡು ಭಿನ್ನ ವಸ್ತುಗಳಿವೆ. ಒಂದು ದೇಹ ಮತ್ತು ಇನ್ನೊಂದು ಆತ್ಮ. ನಾವು ದೇಹಗತವಾದ ಜೀವಾತ್ಮನನ್ನು ಕುರಿತು ಪ್ರಸ್ತಾಪಿಸುತ್ತೇವೆ. ಇದೇ ಆಧ್ಯಾತ್ಮಿಕವಾದ ಕೃಷ್ಣಪ್ರಜ್ಞಾ ವಿಜ್ಞಾನಕ್ಕೂ ಭೌತಿಕ ಸಾಮಾನ್ಯ ವಿಜ್ಞಾನಕ್ಕೂ ಇರುವ ವ್ಯತ್ಯಾಸ. ಆದ ಕಾರಣ ಪ್ರಾರಂಭದಲ್ಲಿ ನಮ್ಮ ಆಂದೋಲನವನ್ನು ಅರಿತುಕೊಳ್ಳಲು ಸಾಮಾನ್ಯ ಮನುಷ್ಯನಿಗೆ ಬಹಳಷ್ಟು ಕಷ್ಟವಾಗುವುದು. ಪ್ರಥಮತಃ ಮನುಷ್ಯನು ಈ ಜಡದೇಹದಿಂದ ಭಿನ್ನವಾದ ಆತ್ಮ ಎಂಬುದನ್ನು ಅರಿತುಕೊಳ್ಳಬೇಕು.

ಮೈಕ್ ರಾಬಿನ್‌ಸನ್ : ನಾವು ಅದನ್ನು ಯಾವಾಗ ಅರಿತುಕೊಳ್ಳುವೆವು ?

ಶ್ರೀಲ ಪ್ರಭುಪಾದ : ನೀವು ಯಾವ ಕ್ಷಣದಲ್ಲಾದರೂ ಅರಿತುಕೊಳ್ಳಬಹುದಾಗಿದೆ,

ಆದರೆ ಅದಕ್ಕೆ ಕೆಲಮಟ್ಟಿನ ಬುದ್ಧಿ ಕೌಶಲ ಬೇಕು. ಉದಾಹರಣೆಗೆ: ಮಗು ಬೆಳೆದು ಹುಡುಗ ನಾಗುತ್ತದೆ. ಹುಡುಗನು ಯುವಕನಾಗುತ್ತಾನೆ. ಯವಕನು ಪ್ರಬುದ್ಧನಾಗುತ್ತಾನೆ ಮತ್ತು ಪ್ರಬುದ್ಧನು ಮುದುಕನಾಗುತ್ತಾನೆ. ಈ ಎಲ್ಲ ಸಮಯದಲ್ಲಿ ಅವನ ದೇಹವು ಶೈಶವದಿಂದ ವೃದ್ಧಾಪ್ಯಕ್ಕೆ ಬದಲಾವಣೆ ಹೊಂದುತ್ತ ನಡೆದಿದ್ದರೂ, ತಾನು ಅದೇ ವ್ಯಕ್ತಿ ಎಂಬ ಪ್ರಜ್ಞೆ ಹೊಂದಿರುತ್ತಾನೆ. ನೋಡಿ : ದೇಹ ಬದಲಾಗುತ್ತಿದೆ, ಆದರೆ ದೇಹಿಯಾದ ಆತ್ಮನು ಹಾಗೆಯೇ ಇರುತ್ತಾನೆ· ನಮ್ಮ ಈಗಿನ ದೇಹವು ಮೃತಿ ಹೊಂದಿದಾಗ, ನಮಗೆ ಮತ್ತೊಂದು ದೇಹವು ದೊರಕುತ್ತದೆ ಎಂಬುದನ್ನು ನಾವು ಯುಕ್ತಿಯುಕ್ತವಾಗಿ ಕಂಡುಕೊಳ್ಳಬೇಕು. ಇದೇ ಆತ್ಮನ ದೇಹಾಂತರ ಪ್ರಾಪ್ತಿ ಎನಿಸಿದೆ.

ಮೈಕ್ ರಾಬಿನ್‌ಸನ್ : ಎಂದರೆ ಜನ ಸತ್ತಾಗ ಅವರ ಭೌತಿಕ ದೇಹ ಮಾತ್ರ ಸಾಯುವುದು ಎಂದ ಹಾಗಾಯಿತಲ್ಲವೇ ?

ಶ್ರೀಲ ಪ್ರಭುಪಾದ : ಹೌದು. ಇದನ್ನು ಭಗವದ್ಗೀತೆಯುಲ್ಲಿ ಬಹು ವಿಸ್ತೃತವಾಗಿ ವಿವರಿಸಲಾಗಿದೆ. [2.20]: "ನ ಜಾಯತೇ ಮ್ರಿಯತೇ ವಾ ಕದಾಚಿನ್ನ ........ನ ಹನ್ಯತೇ ಹನ್ಯಮಾನೇ ಶರೀರೇ "

ಮೈಕ್ ರಾಬಿನ್‌ಸನ್ : ನೀವು ಹೆಚ್ಚಾಗಿ ಶ್ಲೋಕಗಳನ್ನು ಉದಹರಿಸುವಿರಿ ?

ಶ್ರೀಲ ಪ್ರಭುಪಾದ : ಹೌದು, ನಾವು ಯಾವಾಗಲು ಶ್ಲೋಕಗಳನ್ನು ಉಲ್ಲೇಖಿಸುತ್ತೇವೆ. ಕೃಷ್ಣಪ್ರಜ್ಞೆ ಎಂಬುದು ಒಂದು ಗಹನವಾದ ಶಿಕ್ಷಣವಾಗಿದೆ. ಅದೊಂದು ಕೇವಲ ಸಾಮಾನ್ಯ ಧರ್ಮವಲ್ಲ. (ಪಕ್ಕದಲ್ಲಿ ಶಿಷ್ಯನನ್ನು ಕುರಿತು) ಭಗವದ್ಗೀತೆಯ ಈ ಶ್ಲೋಕವನ್ನು ತೆಗೆಯಿರಿ.

ಶಿಷ್ಯ :

ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾಭವಿತಾ ವಾ ನ ಭೂಯಃ।
ಅಜೋ ನಿತ್ಯ ಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥

"ಆತ್ಮಕ್ಕೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಒಮ್ಮೆ ಅಸ್ತಿತ್ವವಿರುವವನಿಗೆ ಕೊನೆಯೆಂಬುದೇ ಇಲ್ಲ ಜೀವನು ಅಜಾತನು, ನಿತ್ಯನು, ಸದಾ ಇರುವವನು, ಅಮರಣಿ ಮತ್ತು ಅನಾದಿ ದೇಹನಾಶವಾದರೂ ಅವನು ಅವಿನಾಶಿ."

ಮೈಕ್ ರಾಬಿನ್‌ಸನ್ : ತಮಗೆ ವಂದನೆ. ಇನ್ನೂ ಸ್ವಲ್ಪ ವಿವರಿಸುವಿರಾ ? ಆತ್ಮವು ಅವಿನಾಶಿ ಎಂದ ಮೇಲೆ, ಜನ ಸತ್ತಾಗ ಅವರ ಆತ್ಮವು ದೇವರನ್ನು ಹೋಗಿ ಸೇರುವುದೇ ?

ಶ್ರೀಲ ಪ್ರಭುಪಾದ : ಎಲ್ಲ ಸಂದರ್ಭದಲ್ಲಿಯೂ ಹಾಗೇ ಆಗುವುದೆಂದು ಹೇಳಲು ಬರುವುದಿಲ್ಲ. ಜೀವಾತ್ಮನು ಅರ್ಹನಾಗಿದ್ದರೆ ಮಾತ್ರ ಅದು ಸಾಧ್ಯ—ಅವನು ಮರಳಿ ದೇವತ್ವದೆಡೆಗೆ ಹೋಗಲು ಈ ಜೀವನದಲ್ಲಿ ಅರ್ಹತೆಯನ್ನು ಪಡೆದಿದ್ದರೆ ಮಾತ್ರ—ಅವನು ದೇವರಲ್ಲಿಗೆ ಹೋಗಬಹುದು. ಅವನು ಅರ್ಹತೆಯನ್ನು ಪಡೆದಿರದಿದ್ದರೆ, ಭೌತಿಕ ಶರೀರವನ್ನು ಹೊಂದುವನು. ಒಟ್ಟು 8,400,000 ಯೋನಿಗಳ ಬೇರೆ ಬೇರೆ ಬಗೆಯ ಶರೀರಗಳಿವೆ. ಜೀವನಿಗೆ

ಅವನ ವಾಸನಾನುಸಾರ ಮತ್ತು ಕರ್ಮಾನುಸಾರವಾಗಿ ನಿಸರ್ಗ ನಿಯಮಗಳು ಅವನಿಗೆ ಸೂಕ್ತ ವಾದ ದೇಹವನ್ನು ನೀಡುತ್ತವೆ. ಒಬ್ಬ ಮನುಷ್ಯನಿಗೆ ರೋಗ ಅಂಟಿ ಅದು ಉಲ್ಬಣವಾದ ಹಾಗೆ. ಇದನ್ನು ಅರಿತುಕೊಳ್ಳುವುದು ಕಷ್ಟಸಾಧ್ಯವೇ ?

ಮೈಕ್ ರಾಬಿನ್‌ಸನ್ : ಇದೆಲ್ಲವನ್ನು ಅರಿತುಕೊಳ್ಳುವುದು ಬಹು ಕಷ್ಟವೇ ಆಗಿದೆ.

ಶ್ರೀಲ ಪ್ರಭುಪಾದ : ಒಬ್ಬನಿಗೆ ದೇವಿ (ಮೈಲಿ) ಸೋಂಕುತಾಗಿದೆಯೆಂದು ಭಾವಿ ಸೋಣ. ಏಳು ದಿನಗಳಲ್ಲಿ ಅದರ ಲಕ್ಷಣಗಳು ಕಾಣತೊಡಗುತ್ತವೆ. ಆ ಅವಧಿಗೆ ಏನನ್ನು ತ್ತೇವೆ ?

ಮೈಕ್ ರಾಬಿನ್‌ಸನ್ : ರೋಗ ಪಕ್ವಕಾಲವೇ ?

ಶ್ರೀಲ ಪ್ರಭುಪಾದ : ರೋಗ ಪಕ್ವಕಾಲ, ಹೌದು. ನೀವು ಅದನ್ನು ತಡೆಯಲು ಸಾಧ್ಯವಾಗುವುದಿಲ್ಲ. ನಿಮಗೆ ಯಾವುದಾದರೂ ರೋಗದ ಸೋಂಕು ತಾಕಿದರೆ, ನಿಸರ್ಗನಿಯ ಮಾನುಸಾರ ಅದು ವೃದ್ಧಿಹೊಂದುತ್ತದೆ. ಅದೇ ಪ್ರಕಾರ, ನೀವು ಈ ಜೀವನದಲ್ಲಿ ಅನೇಕ ಬಗೆಯ ಭೌತಿಕ ಸ್ವರೂಪದ ಗುಣಗಳನ್ನು ಹೊಂದಿದರೆ, ಆ ಸಂಪರ್ಕದಿಂದ ನಿಮಗೆ ಮುಂದಿನ ಜೀವನದಲ್ಲಿ ಎಂಥ ದೇಹ ದೊರಕುವುದೆಂಬುದು ನಿರ್ಣಯವಾಗುತ್ತದೆ. ಇದು ನಿಸರ್ಗದ ಕಠೋರ ನಿಯಮ. ಪ್ರತಿಯೊಬ್ಬರೂ ಈ ನಿಸರ್ಗ ನಿಯಮಗಳಿಗೆ ಒಳಪಟ್ಟಿದ್ದಾರೆ-ಅವರು ಅವುಗಳನ್ನೇ ಸಂಪೂರ್ಣವಾಗಿ ಆವಲಂಬಿಸಿದ್ದಾರೆ- ಅಜ್ಞಾನದೆಶೆಯಿಂದ ಜನ ತಾವು ಸ್ವತಂತ್ರರೆಂದು ತಿಳಿದು ಕೊಂಡಿರುತ್ತಾರೆ. ಅವರು ನಿಜವಾಗಿ ಸ್ವತಂತ್ರರಿರುವುದಿಲ್ಲ. ತಾವು ಸ್ವತಂತ್ರರೆಂಬುದು ಅವರ ಕಲ್ಪನೆ ಮಾತ್ರ. ಆದರೆ ಅವರು ಸಂಪೂರ್ಣವಾಗಿ ಪ್ರಕೃತಿಯ ನಿಯಮಗಳಿಗೆ ಬದ್ಧರಾಗಿರುತ್ತಾರೆ. ಹೀಗೆ ನಿಮ್ಮ ಮುಂದಿನ ಜನ್ಮವೂ ಸಂದರ್ಭಾನುಸಾರ ನಿಮ್ಮ ಪಾಪ-ಪುಣ್ಯ ಕರ್ಮಾನುಸಾರ ನಿರ್ಧಾರವಾಗುತ್ತದೆ.

ಮೈಕ್ ರಾಬಿನ್‌ಸನ್ : ಪೂಜ್ಯರೆ, ದಯವಿಟ್ಟು ಈ ಹಿಂದಿನದನ್ನೇ ಮತ್ತೆ ಒಂದು ಕ್ಷಣ ವಿವರಿಸುವಿರಾ ? ಯಾರೂ ಸ್ವತಂತ್ರರಲ್ಲ ಎಂದು ತಾವು ಹೇಳಿದಿರಿ. ನಾವು ಪುಣ್ಯ ಜೀವನ ನಡೆಸಿದರೆ ನಮ್ಮ ಉತ್ತಮ ಭವಿಷ್ಯವನ್ನು ನಿರ್ಮಿಸಿಕೊಳ್ಳಬಲ್ಲೆವೆಂದು ತಾವು ಹೇಳುತ್ತಿರು ವಿರಲ್ಲವೇ ?

ಶ್ರೀಲ ಪ್ರಭುಪಾದ : ಹೌದು.

ಮೈಕ್ ರಾಬಿನ್‌ಸನ್ : ಹಾಗಾದರೆ ಯಾವುದು ಮಹತ್ವದ್ದು ಎಂಬುದನ್ನು ನಿರ್ಧರಿಸಿ ಕೊಳ್ಳಲು ನಾವು ಸ್ವತಂತ್ರರೆಂದಂತಾಗಲಿಲ್ಲವೇ ? ಧರ್ಮ ಮುಖ್ಯವಾದುದು. ನಾವು ದೇವರಲ್ಲಿ ನಂಬಿಗೆಯಿಟ್ಟು ಪವಿತ್ರ ಜೀವನ ನಡೆಸಿದರೆ .......

ಶ್ರೀಲ ಪ್ರಭುಪಾದ : ಇದು ಕೇವಲ ನಂಬಿಗೆಯ ಪ್ರಶ್ನೆಯಲ್ಲ. ನೀವು ಇಲ್ಲಿ ನಂಬಿ ಗೆಯ ಪ್ರಶ್ನೆಯನ್ನು ದಯವಿಟ್ಟು ತರಬೇಡಿ. ಅದು ಒಂದು ನಿಯಮ. ಉದಾಹರಣೆಗೆ : ಒಂದು ಸರಕಾರವಿದೆ. ನೀವು ನಂಬಿರಿ ಬಿಡಿರಿ, ನೀವು ನಿಯಮೋಲ್ಲಂಘನೆ ಮಾಡಿದರೆ, ಆ ಸರ ಕಾರವು ನಿಮ್ಮನ್ನು ದಂಡಿಸುತ್ತದೆ. ಹಾಗೆಯೇ, ನೀವು ಶ್ರದ್ಧೆ ಹೊಂದಿರಲಿ ಇಲ್ಲದಿರಲಿ, ದೇವರು

ಒಬ್ಬನಿದ್ದಾನೆ. ನೀವು ದೇವರಲ್ಲಿ ಶ್ರದ್ಧೆಯಿಡದೆ ನಿಮ್ಮ ಇಷ್ಟ ಬಂದಂತೆ ಸ್ವತಂತ್ರವಾಗಿ ವರ್ತಿಸಿದರೆ, ನಿಸರ್ಗ ನಿಯಮಗಳು ನಿಮ್ಮನ್ನು ದಂಡನೆಗೆ ಗುರಿಪಡಿಸುತ್ತವೆ.

ಮೈಕ್ ರಾಬಿನ್‌ಸನ್: ಹೀಗೋ ಸರಿ. ನೀವು ಯಾವ ಧರ್ಮದಲ್ಲಾದರೂ ಶ್ರದ್ಧೆಯುಳ್ಳವರಾಗಿರಬಹುದಲ್ಲವೇ? ಒಬ್ಬನು ಕೃಷ್ಣಭಕ್ತನಾಗಿದ್ದರೇನು ವಿಶೇಷ?

ಶ್ರೀಲ ಪ್ರಭುಪಾದ: ಇದು ಕೇವಲ ಧರ್ಮದ ಪ್ರಶ್ನೆಯಲ್ಲ. ಇದೊಂದು ವಿಜ್ಞಾನದ ಪ್ರಶ್ನೆ. ನೀವು ಆತ್ಮ ಸ್ವರೂಪಿಗಳು. ನೀವು ಪ್ರಕೃತಿ ನಿಯಮ ಬದ್ಧರಾಗಿರುವುದರಿಂದಲೇ ನಿಸರ್ಗ ನಿಯಮಗಳಿಗೆ ಒಳಗಾಗಿರುವಿರಿ. ನೀವು ಕ್ರೈಸ್ತ ಧರ್ಮದಲ್ಲಿ ಶ್ರದ್ಧೆಯುಳ್ಳವರಾಗಿರಬಹುದು, ನಾನು ಹಿಂದೂ ಧರ್ಮದಲ್ಲಿ ಶ್ರದ್ಧೆ ಹೊಂದಿರಬಹುದು, ಹಾಗೆಂದ ಮಾತ್ರದಿಂದ ನೀವು ವೃದ್ಧರಾಗುವಿರಿ, ನಾನು ಮಾತ್ರ ಆಗುವುದಿಲ್ಲ ಎಂದರ್ಥವಲ್ಲ. ನಾವು ವೃದ್ಧರಾಗುವ ವಿಜ್ಞಾನವನ್ನು ಕುರಿತು ನಾವೀಗ ಮಾತನಾಡುತ್ತಿದ್ದೇವೆ. ಇದು ನಿಸರ್ಗ ನಿಯಮ. ನೀವು ಕ್ರಿಶ್ಚನ್ ಆಗಿರುವುದರಿಂದ ಮುದುಕರಾಗುತ್ತಿದ್ದೇರಿ, ನಾನು ಹಿಂದೂ ಆಗಿರುವುದರಿಂದ ಮುದುಕನಾಗುವುದಿಲ್ಲ ಎಂದಲ್ಲ. ಎಲ್ಲರೂ ಮುಪ್ಪು ಹೊಂದುತ್ತಾರೆ. ಹಾಗೆಯೇ ಎಲ್ಲ ನಿಸರ್ಗ ನಿಯಮಗಳು ಎಲ್ಲರಿಗೂ ಅನ್ವಯಿಸುತ್ತದೆ. ನೀವು ಯಾವ ಧರ್ಮದವರಾದರೇನಂತೆ, ಅದರಿಂದ ಯಾವ ವ್ಯತ್ಯಾಸವಾಗುವುದಿಲ್ಲ.

ಮೈಕ್ ರಾಬಿನ್‌ಸನ್: ಹಾಗಾದರೆ, ನಮಗೆಲ್ಲರಿಗೂ ನಿಯಾಮಕನಾದ ದೇವರೊಬ್ಬನೇ ಎಂದು ನೀವು ಹೇಳುತ್ತಿರುವಿರಾ?

ಶ್ರೀಲ ಪ್ರಭುಪಾದ: ದೇವನೊಬ್ಬನೇ. ನಿಸರ್ಗನಿಯಮವೂ ಎಲ್ಲೆಡೆಗೆ ಒಂದೇ. ನಾವೆಲ್ಲರೂ ಆ ನಿಸರ್ಗ ನಿಯಮಕ್ಕೆ ಒಳಪಟ್ಟಿದ್ದೇವೆ. ನಾವು ಭಗವಂತನ ನಿಯಂತ್ರಣಕ್ಕೆ ಒಳಪಟ್ಟಿದ್ದೇವೆ. ಆದುದರಿಂದ, ನಾವು ಸ್ವತಂತ್ರರು ಅಥವಾ ನಮಗಿಷ್ಟ ಬಂದದನ್ನು ನಾವು ಮಾಡಬಹುದು ಎಂದು ತಿಳಿದುಕೊಂಡಿದ್ದರೆ, ಅದು ನಮ್ಮ ಮೌಢ್ಯವಾಗುವುದು.

ಮೈಕ್ ರಾಬಿನ್‌ಸನ್: ಹೀಗೋ. ಹಾಗಾದರೆ ಹರೇಕೃಷ್ಣ ಆಂದೋಲನ ಸೇರುವುದರಿಂದಾಗುವ ವ್ಯತ್ಯಾಸವೇನು? ದಯವಿಟ್ಟು ಇದನ್ನು ವಿವರಿಸಬಹುದೇ?

ಶ್ರೀಲ ಪ್ರಭುಪಾದ: ಹರೇಕೃಷ್ಣ ಆಂದೋಲನವು ಈ ವಿಜ್ಞಾನವನ್ನು ಅರಿತುಕೊಳ್ಳುವ ಕುತೂಹಲ ಉಳ್ಳವರಿಗಾಗಿ ಇದೆ. ನಾವು ಯಾವುದೇ ಮತೀಯರಾಗಿರುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆ ಮಾತೇ ಇಲ್ಲ. ಯಾರೂ ಬೇಕಾದರೂ ಇದಕ್ಕೆ ಸೇರಬಹುದು. ಕಾಲೇಜಿನ ಹುಡುಗರು ಇದಕ್ಕೆ ಸೇರಿಕೊಳ್ಳಬಹುದು. ನೀವು ಕ್ರಿಶ್ಚಿಯನ್‌ರಾಗಿರಬಹುದು, ಹಿಂದೂ ಆಗಿರಬಹುದು, ಮಹಮದೀಯರಾಗಿರಬಹುದು–ಇದರಿಂದ ಯಾವ ವ್ಯತ್ಯಾಸವಿಲ್ಲ. ಬ್ರಹ್ಮವಿದ್ಯೆಯನ್ನು ಅರಿತುಕೊಳ್ಳಬಯಸುವ ಯಾರಿಗಾದರೂ ಕೃಷ್ಣಪ್ರಜ್ಞಾ ಆಂದೋಲನದಲ್ಲಿ ಪ್ರವೇಶಾವಕಾಶವಿದೆ.

ಮೈಕ್ ರಾಬಿನ್‌ಸನ್: ಹರೇಕೃಷ್ಣ ಭಕ್ತನಾಗುವಂತೆ ಶಿಕ್ಷಣ ನೀಡುವುದರಿಂದ ವ್ಯಕ್ತಿಯಲ್ಲಾಗುವ ವ್ಯತ್ಯಾಸವೇನು?

ಶ್ರೀಲ ಪ್ರಭುಪಾದ : ಅಂಥ ವ್ಯಕ್ತಿಯ ನಿಜವಾದ ಶಿಕ್ಷಣ ಅಲ್ಲಿಂದಲೇ ಪ್ರಾರಂಭ ವಾಗುತ್ತದೆ. ನೀವು ತಿಳಿದುಕೊಳ್ಳಬೇಕಾದ ಮೊದಲ ಅಂಶವೆಂದರೆ ನೀವು ಜೀವಾತ್ಮರು. ನೀವು ಜೀವಾತ್ಮರಾಗಿರುವುದರಿಂದಲೇ ನಿಮ್ಮ ದೇಹಗಳನ್ನು ಬದಲಾಯಿಕೊಳ್ಳುತ್ತಿದ್ದೀರಿ. ಇದೇ ಆಧ್ಯಾತ್ಮಿಕ ಅರಿವಿನ ಅಕ್ಷರಾಭ್ಯಾಸ. ಹೀಗೆ ನಿಮ್ಮ ದೇಹವು ಕೊನೆಗೊಂಡಾಗ, ನಾಶಹೊಂದಿದಾಗ ನೀವು ನಾಶವಾಗುವುದಿಲ್ಲ. ನೀವು ನಿಮ್ಮ ಕೋಟನ್ನೋ ಷರಟನ್ನೋ ಬದಲಾಯಿಸಿಕೊಂಡ ಹಾಗೆ ಮತ್ತೊಂದು ದೇಹವನ್ನು ಪಡೆಯುತ್ತೀರಿ. ನಾಳೆ ನೀವು ನನ್ನ ಬಳಿ ಬರುವಾಗ ಬೇರೊಂದು ಷರಟನ್ನೋ ಕೋಟನ್ನೋ ಧರಿಸಿ ಬರುವಿರಿ. ಹಾಗೆಂದ ಮಾತ್ರದಿಂದ ನೀವು ಬೇರೊಬ್ಬ ವ್ಯಕ್ತಿ ಆದಂತಾಯಿತೇ ? ಇಲ್ಲ. ಹಾಗೆಯೇ ಪ್ರತಿಯೊಂದು ಸಲ ಮರಣ ಹೊಂದಿದಾಗ ದೇಹವನ್ನು ಬದಲಾಯಿಸಿಕೊಳ್ಳುವಿರಿ, ಆದರೆ ದೇಹದಲ್ಲಿರುವ ಆತ್ಮಸ್ವರೂಪರಾಗಿ ನೀವು ಬದಲಾವಣೆ ಹೊಂದುವುದಿಲ್ಲ. ಈ ಅಂಶವನ್ನು ಚೆನ್ನಾಗಿ ಅರಿತುಕೊಳ್ಳಬೇಕು ? ಆಮೇಲೆ ಕೃಷ್ಣ ಪ್ರಜ್ಞಾ ವಿದ್ಯೆಯ ಮಾರ್ಗದಲ್ಲಿ ಪ್ರಗತಿಯನ್ನು ಸಾಧಿಸಬಹುದಾಗಿದೆ.

ಮೈಕ್ ರಾಬಿನ್‌ಸನ್ : ನನಗೆ ಅರಿವು ಮೂಡಲಾರಂಭಿಸಿದೆ. ಆದರೆ ಬಹು ಸಂಖ್ಯೆಯ ನಿಮ್ಮ ಜನ ಆಕ್ಸ್‌ಫರ್ಡ್ ಬೀದಿಯಲ್ಲಿ ಹರೇಕೃಷ್ಣ ಕರಪತ್ರಗಳನ್ನು ಹಂಚುತ್ತಿರುವುದನ್ನು ನೋಡಿದಾಗ, ಈ ವಿಷಯಕ್ಕೂ ಮತ್ತು ಕರಪತ್ರ ವಿತರಣೆಗೂ ಏನು ಸಂಬಂಧ ಎಂಬುದು ನನಗೆ ತಿಳಿಯುತ್ತಿಲ್ಲ.

ಶ್ರೀಲ ಪ್ರಭುಪಾದ : ಜನರಲ್ಲಿ ಆಧ್ಯಾತ್ಮಿಕ ಜೀವನದ ಆವಶ್ಯಕತೆಯ ಬಗ್ಗೆ ವಿಶ್ವಾಸ ಮೂಡಿಸುವುವೇ ಈ ಕರಪತ್ರ ವಿತರಣೆಯ ಉದ್ದೇಶ.

ಮೈಕ್ ರಾಬಿನ್‌ಸನ್ : ಎಂದರೆ ಅವರು ಹರೇಕೃಷ್ಣ ಆಂದೋಲನದಲ್ಲಿ ಸೇರುವರೋ ಇಲ್ಲವೋ ಎಂದು ನೀವು ಯೋಚಿಸುತ್ತಿಲ್ಲವೆ ?

ಶ್ರೀಲ ಪ್ರಭುಪಾದ : ಅದು ಅಷ್ಟು ಮಹತ್ವದಲ್ಲ. ಅವರಿಗೆ ಶಿಕ್ಷಣ ನೀಡುವುದೇ ನಮ್ಮ ಉದ್ದೇಶ. ಜನರು ಅಜ್ಞಾನದೆಶೆಯಲ್ಲಿದ್ದಾರೆ. ತಮ್ಮ ದೇಹವು ಕೊನೆಗೊಂಡಾಗ ಎಲ್ಲವೂ ಕೊನೆಗೊಳ್ಳುತ್ತದೆ ಎಂಬ ಮೂಢ ಕಲ್ಪನೆಯಲ್ಲಿ ಜನ ಸಿಲುಕಿದ್ದಾರೆ. ಇದೊಂದು ಬಗೆಯ ಮೌಢ್ಯ.

ಮೈಕ್ ರಾಬಿನ್‌ಸನ್ : ಹಾಗಾದರೆ ಜೀವನಕ್ಕೆ ಆಧ್ಯಾತ್ಮಿಕ ಆಯಾಮವೊಂದಿದೆ ಎಂದು ಹೇಳಿಕೊಡುವುದೇ ನಿಮ್ಮ ಮೂಲ ಉದ್ದೇಶವಾಗಿದೆಯೆ ?

ಶ್ರೀಲ ಪ್ರಭುಪಾದ : ನೀವು ಈ ದೇಹವಲ್ಲ. ನಿಮ್ಮ ದೇಹವು (ನಿಮ್ಮ ಷರಟು ಕೋಟಿನ ಹಾಗೆ) ಒಂದು ಹೊದಿಕೆ ಮಾತ್ರ, ಅದರ ಒಳಗಡೆ ಇರುವ ನೀವು ಚೇತನ ಸ್ವರೂಪಿ ಎಂದು ತಿಳಿಸುವುದೇ ನಮ್ಮ ಪ್ರಥಮ ಉದ್ದೇಶ.

ಮೈಕ್ ರಾಬಿನ್‌ಸನ್ : ಹೌದು, ನಾನು ಈಗ ಅದನ್ನು ಸ್ವಲ್ಪ ಅರಿತಿದ್ದೇನೆ. ಸಾವು ಅಲ್ಲಿಂದ ಮುಂದೆ ಹೋದರೆ ನಾವು ಹೇಗೆ ಬಾಳಿದೆವು ಎಂಬುದು ನಮ್ಮ ಮರಣಾನಂತರದ ಜೀವನಕ್ಕೆ ಕಾರಣವಾಗುತ್ತದೆ, ಪ್ರಕೃತಿ ನಿಯಮಗಳು ನಮ್ಮ ಜೀವನವನ್ನು ನಿರ್ಧರಿಸುವುವು ಎಂದು ತಾವು ಹೇಳಿದ್ದೀರಿ. ಈ ಜನ್ಮಾಂತರಗಳ ಪ್ರಕ್ರಿಯೆ ಹೇಗೆ ನಡೆಯುತ್ತದೆ ?

ಶ್ರೀಲ ಪ್ರಭುಪಾದ : ಈ ಪ್ರಕ್ರಿಯೆ ಬಹು ಸೂಕ್ಷ್ಮವಾದುದು. ಜೀವಾತ್ಮವು ನಮ್ಮ ಭೌತಿಕ ಕಣ್ಣುಗಳಿಗೆ ಅಗೋಚರವಾದುದು. ಅದು ಗಾತ್ರದಲ್ಲಿ ಅಣು ಪ್ರಮಾಣದ್ದು. ಇಂದ್ರಿಯಗಳು, ರಕ್ತ, ಸ್ನಾಯುಗಳು, ಮಜ್ಜ ಮೊದಲಾದ ವಸ್ತುಗಳಿಂದ ಕೂಡಿದ ಈ ಸ್ಥೂಲ ದೇಹವು ನಾಶವಾದ ಬಳಿಕ ಮನಸ್ಸು ಬುದ್ಧಿ ಮತ್ತು ಅಹಂಕಾರ ರೂಪದ ಸೂಕ್ಷ್ಮ ದೇಹವು ಕೆಲಸ ಮಾಡುತ್ತಿರುತ್ತದೆ. ಮರಣ ಸಂಭವಿಸಿದಾಗ ಈ ಸೂಕ್ಷ್ಮ ದೇಹವು ಅತ್ಯಂತ ಸೂಕ್ಷ್ಮವಾದ ಜೀವಾತ್ಮವನ್ನು ಮತ್ತೊಂದು ಸ್ಥೂಲ ದೇಹಕ್ಕೆ ಸಾಗಿಸುತ್ತದೆ. ಗಾಳಿಯು ಗಂಧವನ್ನು ಸಾಗಿಸಿಕೊಂಡು ಹೋದಂತಿದೆ ಈ ವಿಧಾನ. ಈ ಗುಲಾಬಿಯ ಸುಗಂಧವು ಎಲ್ಲಿಂದ ಬಂತು ಎಂಬುದು ಯಾರಿಗೂ ಕಾಣುವುದಿಲ್ಲ. ಆದರೆ ಗಾಳಿಯು ಅದನ್ನು ಹೊತ್ತುಕೊಂಡು ಬರುತ್ತಿದೆ ಎಂಬುದು ಮಾತ್ರ ಗೊತ್ತಾಗುತ್ತದೆ. ಹೇಗೆ ಎಂಬುದು ಕಾಣುವುದಿಲ್ಲ. ಆದರೆ ಅದು ನಡೆಯುತ್ತದೆ. ಅದೇ ಪ್ರಕಾರ, ಜೀವದ ದೇಹಾಂತರವು ಅಷ್ಟೇ ಸೂಕ್ಷ್ಮವಾದುದು. ಮರಣ ಕಾಲದ ಮನಃಸ್ಥಿತಿಗೆ ಅನುಸಾರವಾಗಿ ಅತಿ ಸೂಕ್ಷ್ಮವಾದ ಜೀವಾತ್ಮವು ತಂದೆಯ ವೀರ್ಯಾಣುವಿನ ಮೂಲಕ ವಿಶಿಷ್ಟ ತಾಯಿಯ ಗರ್ಭವನ್ನು ಸೇರುತ್ತದೆ. ಆಮೇಲೆ ಜೀವಾತ್ಮವು ತಾಯಿಯು ನೀಡುವ ವಿಶಿಷ್ಟ ಮಾದರಿಯ ದೇಹವನ್ನು ಬೆಳೆಸಿಕೊಳ್ಳುತ್ತದೆ. ಮನುಷ್ಯನಾಗಲಿ, ಬೆಕ್ಕಾಗಲಿ, ನಾಯಿಯಾಗಲಿ ಅಥವಾ ಬೇರಾವುದೇ ಪ್ರಾಣಿಯಾಗಲಿ, ಎಲ್ಲಕ್ಕೂ ಇದೇ ವಿಧಾನ.

ಮೈಕ್ ರಾಬಿನ್‌ಸನ್ : ಹಾಗಾದರೆ ಇದಕ್ಕೆ ಮುಂಚಿನ ಜೀವನದಲ್ಲಿ ನಾವು ಬೇರೇನೋ ಆಗಿದ್ದೆವು ಎಂದು ತಾವು ಹೇಳುತ್ತೀರಾ ?

ಶ್ರೀಲ ಪ್ರಭುಪಾದ : ಹೌದು

ಮೈಕ್ ರಾಬಿನ್‌ಸನ್ : ಹಾಗಾದರೆ ಮುಂದಿನ ಜನ್ಮದಲ್ಲಿ ನಾವು ಮತ್ತೆ ಬೇರೇನೋ ಆಗಬಹುದೆ ?

ಶ್ರೀಲ ಪ್ರಭುಪಾದ : ಹೌದು, ನೀವು ಸನಾತನ. ನಿಮ್ಮ ಕರ್ಮಾನುಸಾರ ನೀವು ಕೇವಲ ದೇಹಗಳನ್ನು ಬದಲಾಯಿಸಿಕೊಳ್ಳುತ್ತಿರುವಿರಿ. ಆದುದರಿಂದ ಈ ವ್ಯಾಪಾರವನ್ನು ಹೇಗೆ ನಿಲ್ಲಿಸಬೇಕು? ನೀವು ನಿಮ್ಮ ಮೂಲ ಆಧ್ಯಾತ್ಮಿಕ ಜೀವನದಲ್ಲಿ ಉಳಿದುಕೊಳ್ಳುವುದು ಹೇಗೆ ? ಎಂಬುದನ್ನು ನೀವು ತಿಳಿದುಕೊಳ್ಳಬೇಕಲ್ಲವೆ ? ಅದೇ ಕೃಷ್ಣ ಪ್ರಜ್ಞೆ.

ಮೈಕ್ ರಾಬಿನ್‌ಸನ್ : ಹೀಗೋ ಸರಿ. ಹಾಗಾದರೆ ನಾನು ಕೃಷ್ಣ ಪ್ರಜ್ಞಾವಂತನಾದರೆ ಮತ್ತೆ ನಾಯಿಯಾಗಿ ಹುಟ್ಟಿ ಬರುವ ಭಯವಿಲ್ಲ ತಾನೆ ?

ಶ್ರೀಲ ಪ್ರಭುಪಾದ : ಭಯವಿಲ್ಲ. [ಶಿಷ್ಯನನ್ನು ಕುರಿತು] ಜನ್ಮ ಕರ್ಮ ಚ ಮೇ ದಿವ್ಯಂ ಎಂಬ ಶ್ಲೋಕವನ್ನು ತೆಗೆಯಿರಿ.

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।

ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥

"ನನ್ನ ದಿವ್ಯಸ್ವರೂಪ ಗುಣಗಳನ್ನು ಮತ್ತು ಕಾರ್ಯಗಳನ್ನು ಅರಿತವನು ಈ ದೇಹವನ್ನೂ ಬಿಟ್ಟ ಬಳಿಕ ಮತ್ತೆ ಈ ಭೌತಿಕ ಜಗತ್ತಿನಲ್ಲಿ ಹುಟ್ಟುವುದಿಲ್ಲ. ಹೇ ಅರ್ಜುನ, ಅವನು

ನನ್ನ ನಿತ್ಯಧಾಮವನ್ನು ಹೊಂದುತ್ತಾನೆ." ['ಭ.ಗೀ.', 4.9]

ಶ್ರೀಲ ಪ್ರಭುಪಾದ: "ನನ್ನನ್ನು ಅರಿತವನು ಜನನ ಮರಣಗಳಿಂದ ಮುಕ್ತನಾಗುತ್ತಾನೆ" ಎಂದು ದೇವರು ಹೇಳಿದ್ದಾನೆ. ಆದರೆ ಭೌತಿಕ ಊಹಾ ಪೋಹಗಳಿಂದ ದೇವರನ್ನು ಅರಿಯುವುದು ಸಾಧ್ಯವಿಲ್ಲ. ಮೊದಲು ಮನುಷ್ಯನು ಆಧ್ಯಾತ್ಮಿಕ ವೇದಿಕೆಗೆ ಬರಬೇಕು. ಆಗ ಅವನಿಗೆ ದೇವರನ್ನು ಅರಿತುಕೊಳ್ಳಲು ಅಗತ್ಯವಾದ ಬುದ್ಧಿಮತ್ತೆಯು ಲಭಿಸುತ್ತದೆ. ಅವನು ದೇವರನ್ನು ಅರಿತುಕೊಂಡಾಗ ಅವನಿಗೆ ಭೌತಿಕ ದೇಹಗಳು ಬರುವುದಿಲ್ಲ. ಅವನು ಮರಳಿ ತನ್ನ ಮನೆಗೆ ಎಂದರೆ ಭಗವದ್ಧಾಮಕ್ಕೆ ಹೋಗಿ ಸೇರುತ್ತಾನೆ. ಅವನು ಅಲ್ಲಿ ನಿತ್ಯವಾಗಿ ವಾಸಿಸುತ್ತಾನೆ. ಅವನಿಗೆ ಮತ್ತೆ ದೇಹಾಂತರವಿಲ್ಲ.

ಮೈಕ್ ರಾಬಿನ್‌ಸನ್: ಸರಿ. ಈಗ ನೀವು ಎರಡು ಸಲ ಶಾಸ್ತ್ರಾಧಾರಗಳನ್ನು ಉದಹರಿಸಿದಿರಿ. ಈ ಶಾಸ್ತ್ರಗಳು ಎಲ್ಲಿಂದ ಬರುತ್ತವೆ? ನೀವು ಸಂಕ್ಷೇಪವಾಗಿ ಇದನ್ನು ವಿವರಿಸುವಿರಾ?

ಶ್ರೀಲ ಪ್ರಭುಪಾದ: ನಮ್ಮ ಶಾಸ್ತ್ರಗಳು ಸೃಷ್ಟಿಯ ಆದಿಯಿಂದ ಅಸ್ತಿತ್ವದಲ್ಲಿರುವ ವೈದಿಕ ಸಾಹಿತ್ಯ ಮೂಲದಿಂದ ನಮಗೆ ದೊರೆಯುತ್ತವೆ. ಪ್ರತಿ ಸಲ ಭೌತಿಕ ಸೃಷ್ಟಿಯಾದಾಗ ಜೊತೆ ಜೊತೆಗೆ ಈ ಧ್ವನಿವರ್ಧಕದೊಂದಿಗೆ ಅದರ ಉಪಯೋಗದ ಸಾಹಿತ್ಯವು ಮೂಡಿಬರುವಂತೆ ಈ ಸಾಹಿತ್ಯವು ಹುಟ್ಟಿ ಬರುತ್ತದೆ ಅಲ್ಲವೆ?

ಮೈಕ್ ರಾಬಿನ್‌ಸನ್: ಹೌದು, ನಿಜ.

ಶ್ರೀಲ ಪ್ರಭುಪಾದ: ಆ ಸಾಹಿತ್ಯವು ಆ ಧ್ವನಿವರ್ಧಕದ ಸೃಷ್ಟಿಯೊಂದಿಗೆಯೇ ಬರುತ್ತದೆ.

ಮೈಕ್ ರಾಬಿನ್‌ಸನ್: ಹೌದು, ನಿಜ.

ಶ್ರೀಲ ಪ್ರಭುಪಾದ: ಅದರಂತೆಯೇ, ವಿಶ್ವದ ಸೃಷ್ಟಿಯೊಂದಿಗೆ, ಅಲ್ಲಿ ಹೇಗೆ ವ್ಯವಹರಿಸಬೇಕು ಎಂಬ ವೈದಿಕ ಸಾಹಿತ್ಯವೂ ಲಭ್ಯವಾಗುತ್ತದೆ.

ಮೈಕ್ ರಾಬಿನ್‌ಸನ್: ಸರಿ. ಹಾಗಾದರೆ ಈ ಶಾಸ್ತ್ರಗಳು ಸೃಷ್ಟಿಯ ಆದಿಯಿಂದಲೇ ಅಸ್ತಿತ್ವದಲ್ಲಿ ಇವೆ ಎಂದಾಯಿತು. ಈಗ ನಾವು ಮತ್ತೊಂದು ವಿಷಯಕ್ಕೆ ಹೋದರೆ ನೀವು ಆ ಬಗ್ಗೆ ಜಿಗುಪ್ಸೆ ಪಡುವಿರಿ ಎಂದು ನಾನು ಭಾವಿಸಿದ್ದೇನೆ. ಕೃಷ್ಣ ಪ್ರಜ್ಞೆಗೂ ಮತ್ತು ಪಾಶ್ಚಾತ್ಯ ಜಗತ್ತಿನಲ್ಲಿ ಬೋಧಿಸಲಾಗುತ್ತಿರುವ ಇತರ ಪೌರ್ವಾತ್ಯ ದರ್ಶನಗಳಿಗೂ ಇರುವ ಮುಖ್ಯ ವ್ಯತ್ಯಾಸವೇನು?

ಶ್ರೀಲ ಪ್ರಭುಪಾದ: ವ್ಯತ್ಯಾಸವಿಷ್ಟೆ: ನಾವು ಮೂಲ ಸಾಹಿತ್ಯವನ್ನೇ (ಶಾಸ್ತ್ರ) ಅನುಸರಿಸುತ್ತಿದ್ದೇವೆ; ಆದರೆ ಅವರು ತಮ್ಮದೇ ಆದ ಸಾಹಿತ್ಯವನ್ನು ಸೃಷ್ಟಿಸುತ್ತಿದ್ದಾರೆ. ಇದೇ ವ್ಯತ್ಯಾಸ. ಆಧ್ಯಾತ್ಮ ವಿಷಯದಲ್ಲಿ ಏನಾದರೂ ಪ್ರಶ್ನೆಯುಂಟಾದರೆ, ನೀವು ಮೂಲ ಸಾಹಿತ್ಯವನ್ನು ನೋಡಬೇಕೇ ಹೊರತು ಸುಳ್ಳು ವ್ಯಕ್ತಿಯು ಹೊರಡಿಸಿದ ಸಾಹಿತ್ಯವನ್ನು ನೋಡಕೂಡದು.

ಮೈಕ್ ರಾಬಿನ್‌ಸನ್: ಹರೇಕೃಷ್ಣ, ಹರೇಕೃಷ್ಣ ಮಂತ್ರ ಜಪ ಎಂದರೇನು?

ಶ್ರೀಲ ಪ್ರಭುಪಾದ : ವಿಶೇಷವಾಗಿ ಈ ಯುಗದಲ್ಲಿ ಜನರು ಆಧ್ಯಾತ್ಮ ಜ್ಞಾನವನ್ನು ಅರಿತುಕೊಳ್ಳದಷ್ಟು ಮಂದಮತಿಗಳಾಗಿರುವಾಗ, ಶುದ್ಧಾತ್ಮರಾಗಲು ಹರೇ ಕೃಷ್ಣ ಮಂತ್ರಜಪವೇ ಅತ್ಯಂತ ಸುಲಭೋಪಾಯವಾಗಿದೆ. ಒಬ್ಬನು ಹರೇ ಕೃಷ್ಣ ಮಂತ್ರವನ್ನು ಜಪಿಸಲು ಪ್ರಾರಂಭಿಸಿದರೆ ಸಾಕು, ಅವನ ಬುದ್ಧಿಯು ಶುದ್ಧವಾಗುತ್ತದೆ ಮತ್ತು ಆಧ್ಯಾತ್ಮ ವಿಷಯುಗಳನ್ನು ಅರಿತುಕೊಳ್ಳಲು ಶಕ್ತನಾಗುತ್ತಾನೆ.

ಮೈಕ್ ರಾಬಿನ್‌ಸನ್ : ನೀವು ನಿಮ್ಮ ಕಾರ್ಯಗಳಲ್ಲಿ ಹೇಗೆ ಮಾರ್ಗದರ್ಶನ ಪಡೆಯುತ್ತೀರೆಂಬುದನ್ನು ಕುರಿತು ಹೇಳಬಲ್ಲಿರಾ ?

ಶ್ರೀಲ ಪ್ರಭುಪಾದ : ನಾವು ವೇದಸಾಹಿತ್ಯದಿಂದ ಮಾರ್ಗದರ್ಶನ ಪಡೆಯುತ್ತೇವೆ.

ಮೈಕ್‌ರಾಬಿನ್‌ಸನ್ : ನೀವು ಉಲ್ಲೇಖಿಸುವ ಶಾಸ್ತ್ರಗಳಿಂದಲೇ ?

ಶ್ರೀಲ ಪ್ರಭುಪಾದ : ಹೌದು, ಅದೆಲ್ಲವೂ ನಮಗೆ ಆ ಸಾಹಿತ್ಯದಲ್ಲಿ ದೊರೆಯುತ್ತದೆ. ನಾವು ಅದನ್ನು ಇಂಗ್ಲಿಷಿನಲ್ಲಿ ವಿವರಿಸುತ್ತಿದ್ದೇವೆ ಅಷ್ಟೆ. ಆದರೆ ನಾವು ಯಾವುದನ್ನೂ ಹೊಸದಾಗಿ ತಯಾರಿಸುತ್ತಿಲ್ಲ. ನಾವು ಜ್ಞಾನವನ್ನು ತಯಾರಿಸಲು ಹೊರಟರೆ ಎಲ್ಲವೂ ಹಾಳಾಗಿ ಹೋಗುತ್ತದೆ. ಈ ಧ್ವನಿವರ್ಧಕವನ್ನು ಸರಿಪಡಿಸುವ ಸಾಹಿತ್ಯವಿದ್ದಂತೆಯೇ ಇದೆ ವೈದಿಕಸಾಹಿತ್ಯ. ಅದು "ಹೀಗೆ ಮಾಡಿ, ಈ ಸ್ಕ್ರೂ ಇಲ್ಲಿ ಎಂದು ಹೇಳುತ್ತದೊ". ನೀವು ಅದರಲ್ಲಿ ಯಾವ ವ್ಯತ್ಯಾಸ ಮಾಡುವ ಹಾಗಿಲ್ಲ. ಮಾಡಿದರೆ ಎಲ್ಲವೂ ಹಾಳಾಗುತ್ತದೆ. ಅದೇ ಪ್ರಕಾರ, ನಾವು ಯಾವುದನ್ನೂ ತಯಾರಿಸುತ್ತಿಲ್ಲವಾದುದರಿಂದ, ನಮ್ಮ ಶಾಸ್ತ್ರಗಳನ್ನು ಯಾರಾದರೂ ಓದಿದರೆ ಸಾಕು, ಅವರಿಗೆ ನಿಜವಾದ ಆಧ್ಯಾತ್ಮ ಜ್ಞಾನ ದೊರೆಯುತ್ತದೆ.

ಮೈಕ್ ರಾಬಿನ್‌ಸನ್ : ಕೃಷ್ಣಪ್ರಜ್ಞಾ ತತ್ವಜ್ಞಾನವು ಜನಜೀವನದ ಮೇಲೆ ಏನು ಪರಿಣಾಮ ಬೀರುತ್ತದೆ ?

ಶ್ರೀಲ ಪ್ರಭುಪಾದ : ಅದರಿಂದ ಜನರ ದುಃಖನಿವೃತ್ತಿಯಾಗುತ್ತದೆ. ಜನರು ದೇಹವೇ ತಾವೆಂದು ತಪ್ಪು ತಿಳಿದುಕೊಂಡಿರುವುದರಿಂದ ದುಃಖಿಗಳಾಗಿದ್ದಾರೆ. ನೀವು ನಿಮ್ಮ ಕೋಟು, ಷರ್ಟು ಎಂದು ತಿಳಿದುಕೊಂಡು ಅದನ್ನು ಚೆನ್ನಾಗಿ ಎಚ್ಚರಿಕೆಯಿಂದ ಸ್ವಚ್ಛಮಾಡಿಟ್ಟು, ನೀವು ಆಹಾರ ತಿನ್ನುವುದನ್ನು ಮರೆತರೆ, ಸುಖವಾಗಿರುವಿರಾ ?

ಮೈಕ್ ರಾಬಿನ್‌ಸನ್ : ಇಲ್ಲ.

ಶ್ರೀಲ ಪ್ರಭುಪಾದ : ಹಾಗೆಯೇ, ಪ್ರತಿಯೊಬ್ಬನೂ ದೇಹವೆಂಬ "ಕೋಟು ಮತ್ತು ಷರ್ಟನ್ನು" ಸ್ವಚ್ಛ ಮಾಡುತ್ತಿದ್ದಾನೆ ಮತ್ತು ದೇಹದಲ್ಲಿರುವ ಆತ್ಮವನ್ನು ಮರೆಯುತ್ತಿದ್ದಾನೆ. ದೇಹದ "ಕೋಟು ಷರ್ಟು"ಗಳ ಒಳಗೆ ಏನಿದೆಯೆಂಬುದು ಅವರಿಗೆ ತಿಳಿದೇ ಇಲ್ಲ. ನೀವು ಯಾರು ಎಂದು ಯಾರನ್ನಾದರೂ ಕೇಳಿ, ಅವನು " ನಾನು ಒಬ್ಬ ಆಂಗ್ಲ" ಅಥವಾ "ನಾನೊಬ್ಬ ಭಾರತೀಯ" ಎಂದು ಹೇಳುತ್ತಾನೆ. ಮತ್ತೆ ನಾನು "ನಿನ್ನ ಇಂಗ್ಲಿಷ್ ಅಥವಾ ಭಾರತೀಯ ದೇಹ ವನ್ನು ನೋಡಬಲ್ಲೆ, ಆದರೆ ನೀನು ಯಾರು" ಎಂದು ಕೇಳಿದರೆ ಅವನು ಅದನ್ನು ಹೇಳಲಾರನು.

ಮೈಕ್ ರಾಬಿನ್‌ಸನ್ : ಹೀಗೊ !

ಶ್ರೀಲಪ್ರಭುಪಾದ: ಇಡೀ ಆಧುನಿಕ ನಾಗರಿಕತೆಯು ದೇಹವೇ ಆತ್ಮವೆಂಬ (ದೇಹಾತ್ಮ-ಬುದ್ಧಿ)

ತಪ್ಪು ತಿಳಿವಳಿಕೆಯಿಂದ ಪ್ರವರ್ತಿತವಾಗಿದೆ. ಇದು ಬೆಕ್ಕು ನಾಯಿಗಳ ಬುದ್ಧಿ ಅಷ್ಟೆ. ನಾನು ಇಂಗ್ಲೆಂಡ್ ಪ್ರವೇಶಿಸಲು ಪ್ರಯತ್ನಿಸಿದೆನೆಂದೆಣಿಸೋಣ, ನೀವು ನನ್ನನ್ನು ಗಡಿಯಲ್ಲಿ ತಡೆಯುತ್ತೀರಿ. "ನಾನೊಬ್ಬ ಆಂಗ್ಲನು. ಆದರೆ ನೀವು ಭಾರತೀಯರು. ಏಕೆ ಇಲ್ಲಿಗೆ ಬಂದಿದ್ದೀರಿ ? " ಎಂದು ಕೇಳುತ್ತೀರಿ. ನಾಯಿಯೂ "ಬೌ, ಬೌ, ನೀವೇಕೆ ಬರುತ್ತೀರಿ ? " ಎಂದು ಬೊಗಳುತ್ತವೆ. ಹೀಗಿರುವಾಗ ಬುದ್ಧಿಮತ್ತೆಯ ವ್ಯತ್ಯಾಸವೇನು ? ನಾಯಿ ತಾನು ನಾಯಿಯೆಂದೂ ನಾನೊಬ್ಬ ಹೊಸಬನೆಂದೂ ತಿಳಿದುಕೊಂಡಿರುತ್ತದೆ. ನೀವು ಹಾಗೆಯೇ ನೀವೊಬ್ಬ ಆಂಗ್ಲರು ಮತ್ತು ನಾನು ಭಾರತೀಯ ಎಂದು ತಿಳಿಯುತ್ತೀರಿ. ಹೀಗೆ ಬುದ್ಧಿಯಲ್ಲಿ ಯಾವ ವ್ಯತ್ಯಾಸವಿಲ್ಲ. ಹೀಗೆ ನೀವು ಜನರನ್ನು ನಾಯಿಬುದ್ಧಿಯ ಕತ್ತಲೆಯಲ್ಲಿರಿಸಿ, ನಾಗರಿಕತೆಯಲ್ಲಿ ಮುಂದುವರಿದವರೆಂದು ಸಾರುತ್ತೀರಿ, ಇದು ನಿಮ್ಮ ತಪ್ಪು ತಿಳಿವಳಿಕೆಯಾಗಿದೆ.

ಮೈಕ್ ರಾಬಿನ್‌ಸನ್ : ಬೇರೆ ಅಂಶವನ್ನು ಈಗ ಗಮನಿಸೋಣ. ಜಗತ್ತಿನಲ್ಲಿ ದುಃಖವು ಆವರಿಸಿರುವ ಪ್ರದೇಶಗಳಲ್ಲಿ ಹರೇಕೃಷ್ಣ ಆಂದೋಲನವು ಕಾರ್ಯಮಾಡಬೇಕಾಗಿದೆಯೆಂದು ಕೇಳಿದ್ದೇನೆ.

ಶ್ರೀಲ ಪ್ರಭುಪಾದ: ಹೌದು, ನಾವೇ ಈ ಕೆಲಸ ಮಾಡಬೇಕಾಗಿದೆ. ಉಳಿದವರು ಮುಖ್ಯ ಸಮಸ್ಯೆಗಳಾದ ಜನ್ಮಮೃತ್ಯುಜರಾವ್ಯಾಧಿ ಇವುಗಳನ್ನೇ ಮರೆಯುತ್ತಿದ್ದಾರೆ. ಅವರು ಈ ಸಮಸ್ಯೆಗಳಿಗೆ ಪರಿಹಾರವನ್ನೇ ಕಾಣುತ್ತಿಲ್ಲ, ಏನೇನೋ ಅಸಂಬದ್ಧ ವಿಷಯಗಳನ್ನು ಹೇಳುತ್ತಾರೆ. ಜನರಿಗೆ ತಪ್ಪು ತಿಳಿವಳಿಕೆಯುಂಟಾಗುತ್ತಿದೆ. ಅವರನ್ನು ಅಂಧಕಾರದಲ್ಲಿಯೇ ಇರಿಸಲಾಗಿದೆ. ನಾವು ಸ್ವಲ್ಪ ಅವರಿಗೆ ಬೆಳಕು ನೀಡೋಣ.

14987

ಮೈಕ್ ರಾಬಿನ್‌ಸನ್ : ಆಗಲಿ, ಆದರೆ ಜನರಿಗೆ ಆಧ್ಯಾತ್ಮಿಕ ಜ್ಞಾನ ನೀಡುವ ಜೊತೆಗೆ ಅವರ ಆರೋಗ್ಯ ಸುಸ್ಥಿತಿಯನ್ನು ನೀವು ಗಮನಿಸುವಿರಾ ?

ಶ್ರೀಲ ಪ್ರಭುಪಾದ : ಆಧ್ಯಾತ್ಮಿಕ ಸುಸ್ಥಿತಿಯುಂಟಾದರೆ ದೈಹಿಕ ಸುಸ್ಥಿತಿ ತಾನಾಗಿಯೇ ಒದಗುತ್ತದೆ.

ಮೈಕ್ ರಾಬಿನ್‌ಸನ್ : ಅದು ಹೇಗೆ ?

ಶ್ರೀಲ ಪ್ರಭುಪಾದ : ನೀವು ಒಂದು ಕಾರು ಹೊಂದಿದ್ದೀರಿ ಎಂದು ಭಾವಿಸೋಣ. ಸ್ವಾಭಾವಿಕವಾಗಿಯೇ ನೀವು ನಿಮ್ಮ ಕಾರು ಮತ್ತು ನಿಮ್ಮ ಬಗ್ಗೆ ಜಾಗರೂಕರಾಗಿರುವಿರಿ, ಆದರೆ ನೀವೇ ಕಾರು ಎಂದು ಹೇಳುವುದಿಲ್ಲ. "ನಾನೇ ಈ ಕಾರು" ಎಂದು ನೀವು ಹೇಳುವುದಿಲ್ಲ. ಹಾಗೆ ಹೇಳುವುದು ಅಸಂಬದ್ಧ. ಆದರೆ ಜನ ಹೀಗೆ ಮಾಡುತ್ತಿದ್ದಾರೆ. ಕಾರೇ ತಾವೆಂದು ಭಾವಿಸಿ ಜನ ಈ ದೇಹಾಖ್ಯ "ಕಾರಿ" ನ ಬಗ್ಗೆ ಬಹಳ ಎಚ್ಚರಿಕೆ ವಹಿಸುತ್ತಿದ್ದಾರೆ. ಅವರು ತಾವು ಕಾರಿನಿಂದ ಭಿನ್ನರು, ಆತ್ಮಸ್ವರೂಪಿಗಳು ಮತ್ತು ತಮ್ಮ ಕೆಲಸವೇ ಬೇರೆ ಎಂಬುದನ್ನು ಮರೆತಿದ್ದಾರೆ. ಒಬ್ಬನು ಪೆಟ್ರೋಲ್ ಕುಡಿದು ಹೇಗೆ ತೃಪ್ತನಾಗುವುದು ಸಾಧ್ಯವಿಲ್ಲವೋ ಹಾಗೆಯೇ ಯಾರೂ ದೈಹಿಕ ಕಾರ್ಯಗಳಿಂದ ತೃಪ್ತಿಹೊಂದುವಂತಿಲ್ಲ. ಆತ್ಮಕ್ಕೆ ಸರಿಯಾದ ಆಹಾರವನ್ನು ಕಂಡುಕೊಳ್ಳಲು ಯತ್ನಿಸಬೇಕು. ಒಬ್ಬನು "ನಾನೇ ಕಾರು, ಆದ್ದರಿಂದ ನಾನು ಈ ಪೆಟ್ರೋಲನ್ನು ಕುಡಿಯಬೇಕು" ಎಂದು ಭಾವಿಸಿದರೆ ಅವನು ಹುಚ್ಚನೆಂದು ಜನ ಹೇಳುತ್ತಾರೆ. ಹಾಗೆಯೇ, ತಾನು

K128·1
PRA

ಈ ದೇಹವೆಂದು ಭಾವಿಸಿ, ದೈಹಿಕ ತೃಪ್ತಿಗಳಿಂದಲೇ ಸುಖಿಸಲು ಯತ್ನಿಸುವವನೂ ಹುಚ್ಚನೇ ಸರಿ.

ಮೈಕ್ ರಾಬಿನ್‌ಸನ್ : ಇಲ್ಲಿ ಒಂದು ಉಲ್ಲೇಖವಿದೆ. ನೀವು ಅದನ್ನು ವ್ಯಾಖ್ಯಾನಿಸಬೇಕೆಂಬುದು ನನ್ನ ಆಸೆ. ನಾನು ಇಲ್ಲಿಗೆ ಬರುವ ಮುಂಚೆ ನಿಮ್ಮ ಜನ ನನಗೆ ಈ ಸಾಹಿತ್ಯವನ್ನು ನೀಡಿದರು. ಅದರಲ್ಲಿ "ಯುಕ್ತ ಆಧಾರವಿಲ್ಲದ ಧರ್ಮವು ಕೇವಲ ಒಂದು ಮೂಢ ಭಾವನೆಯೇ ಸರಿ" ಎಂದು ನೀವು ಹೇಳಿದ್ದೀರಿ. ನೀವು ದಯವಿಟ್ಟು ಇದನ್ನು ವಿವರಿಸುವಿರಾ ?

ಶ್ರೀಲ ಪ್ರಭುಪಾದ : ಅತ್ಯಂತ ಧಾರ್ಮಿಕರಾದ ಜನರು ಕೂಡ "ನಾವು ಶ್ರದ್ಧೆಯುಳ್ಳವರಾಗಿದ್ದೇವೆ ......" ಎಂದು ಹೇಳುತ್ತಾರೆ. ಆದರೆ ಇಂಥಹ ಶ್ರದ್ಧೆಯ ಮೂಲ್ಯವೇನು ? ನಿಜವಲ್ಲದುದನ್ನು ನೀವು ನಂಬಬಹುದು. ಉದಾಹರಣೆಗೆ, ಕ್ರಿಶ್ಚನರು "ಪ್ರಾಣಿಗಳಿಗೆ ಆತ್ಮವಿಲ್ಲ ಎಂದು ನಂಬುತ್ತೇವೆ" ಎಂದು ಹೇಳುತ್ತಾರೆ. ಇದು ಸರಿಯಲ್ಲ ಅವರು ಪ್ರಾಣಿಗಳನ್ನು ತಿನ್ನುತ್ತಾರಾದ್ದರಿಂದ ಅವುಗಳಿಗೆ ಆತ್ಮವಿಲ್ಲವೆಂದು ಭಾವಿಸುತ್ತಾರೆ, ಆದರೆ ವಾಸ್ತವಿಕವಾಗಿ ಪ್ರಾಣಿಗಳಿಗೂ ಆತ್ಮವಿದೆ.

ಮೈಕ್ ರಾಬಿನ್‌ಸನ್ : ಪ್ರಾಣಿಗಳಿಗೂ ಆತ್ಮವಿದೆಯೆಂಬುದು ನಿಮಗೆ ಹೇಗೆ ಗೊತ್ತು?

ಶ್ರೀಲ ಪ್ರಭುಪಾದ : ನೀವೂ ಅದನ್ನು ತಿಳಿಯಬಹುದು. ಇಲ್ಲಿ ನೋಡಿ, ವೈಜ್ಞಾನಿಕ ಆಧಾರವಿದೆ. ಪ್ರಾಣಿಯೂ ತಿನ್ನುತ್ತದೆ, ನೀವೂ ತಿನ್ನುತ್ತೀರಿ. ಪ್ರಾಣಿಯೂ ನಿದ್ರಿಸುತ್ತದೆ, ನೀವೂ ನಿದ್ರಿಸುತ್ತೀರಿ. ಪ್ರಾಣಿಯೂ ಸಂಭೋಗ ಮಾಡುತ್ತದೆ, ನೀವೂ ಸಂಭೋಗ ಮಾಡುತ್ತೀರಿ. ಪ್ರಾಣಿಯೂ ಆತ್ಮ ರಕ್ಷಣೆ ಮಾಡಿಕೊಳ್ಳುತ್ತದೆ, ನೀವೂ ನಿಮ್ಮ ರಕ್ಷಣೆ ಮಾಡಿಕೊಳ್ಳುತ್ತೀರಿ. ಹಾಗಾದರೆ ನಿಮಗೂ ಪ್ರಾಣಿಗೂ ಏನು ವ್ಯತ್ಯಾಸ ? ಹೀಗಿರುವಾಗ ನಿಮಗೆ ಮಾತ್ರ ಆತ್ಮವಿದೆ ಆದರೆ ಪ್ರಾಣಿಗಳಿಗೆ ಇಲ್ಲ ಎಂದು ನೀವು ಹೇಗೆ ಹೇಳುವಿರಿ ?

ಮೈಕ್ ರಾಬಿನ್‌ಸನ್ : ಅದು ನಿಜ. ಆದರೆ ಕ್ರಿಶ್ಚನ್ ಧರ್ಮ ಗ್ರಂಥಗಳು ......

ಶ್ರೀಲ ಪ್ರಭುಪಾದ : ಇಲ್ಲಿ ಧರ್ಮಗ್ರಂಥಗಳ ಪ್ರಸ್ತಾಪ ಬೇಡ. ಇದು ಸಾಮಾನ್ಯ ವ್ಯವಹಾರಜ್ಞಾನದ ವಿಷಯ. ತಿಳಿದುಕೊಳ್ಳಲು ಯತ್ನಿಸಿ. ಪ್ರಾಣಿಯೂ ತಿನ್ನುತ್ತದೆ, ನೀವೂ ತಿನ್ನುತ್ತೀರಿ, ಪ್ರಾಣಿಯೂ ನಿದ್ರಿಸುತ್ತದೆ, ನೀವೂ ನಿದ್ರಿಸುತ್ತೀರಿ, ಪ್ರಾಣಿಯೂ ರಕ್ಷಣೆ ಮಾಡಿಕೊಳ್ಳುತ್ತದೆ, ನೀವೂ ರಕ್ಷಣೆ ಮಾಡಿಕೊಳ್ಳುತ್ತೀರಿ, ಪ್ರಾಣಿಯೂ ಸಂಭೋಗ ಮಾಡುತ್ತದೆ, ನೀವೂ ಸಂಭೋಗ ಮಾಡುತ್ತೀರಿ, ಪ್ರಾಣಿಗಳೂ ಮರಿಗಳನ್ನು ಹೆರುತ್ತವೆ, ನೀವೂ ಮಕ್ಕಳನ್ನು ಹೆರುತ್ತೀರಿ, ಅದಕ್ಕೂ ವಾಸಸ್ಥಾನವಿದೆ, ನೀವೂ ವಾಸಸ್ಥಾನವನ್ನು ಹೊಂದಿರುತ್ತೀರಿ, ಪ್ರಾಣಿಯ ದೇಹವನ್ನು ಕತ್ತರಿಸಿದಾಗ ರಕ್ತ ಬರುತ್ತದೆ, ನಿಮ್ಮ ದೇಹವನ್ನು ಕಡಿದಾಗಲೂ ರಕ್ತ ಬರುತ್ತದೆ. ಈ ಎಲ್ಲ ಹೋಲಿಕೆಗಳೂ ಇವೆ. ಹೀಗಿರುವಾಗ ಆತ್ಮದ ಹೋಲಿಕೆಯೊಂದನ್ನೇ ನೀವೇಕೆ ನಿರಾಕರಿಸುವಿರಿ? ಇದು ಯುಕ್ತಿ ಯುಕ್ತವಲ್ಲ. ನೀವು ತರ್ಕವನ್ನು ಓದಿದ್ದೀರಿ. ತರ್ಕದಲ್ಲಿ ಸಾದೃಶ್ಯ ಎಂಬುದೊಂದಿದೆ. ಸಾದೃಶ್ಯ ಎಂದರೆ ಒಂದೇ ಬಗೆಯ ಅನೇಕ ಹೋಲಿಕೆಗಳಿಂದ ಒಂದು ನಿರ್ಣಯಕ್ಕೆ ಬರುವುದು. ಮನುಷ್ಯನಿಗೂ ಪ್ರಾಣಿಗೂ ಇಷ್ಟೊಂದು ಹೋಲಿಕೆಗಳಿರುವಾಗ, ಇದೊಂದು ಹೋಲಿಕೆಯನ್ನು ಏಕೆ ನಿರಾಕರಿಸುವಿರಿ? ಅದು ತರ್ಕಬದ್ಧವೂ ಅಲ್ಲ, ವೈಜ್ಞಾನಿಕವೂ ಅಲ್ಲ.

ಮೈಕ್ ರಾಬಿನ್ ಸನ್ : ಆದರೆ ನೀವು ಅದೇ ವಾದವನ್ನು ತದ್ವಿರುದ್ಧವಾಗಿ ಹೇಳಿದರೆ... ....

ಶ್ರೀಲ ಪ್ರಭುಪಾದ : ತದ್ವಿರುದ್ಧವಾಗಿ ಹೇಳುವ ಹಾಗಿಲ್ಲ. ನೀವು "ತರ್ಕಬದ್ಧವಾಗಿ ವಾದಿಸದಿದ್ದರೆ ನಿಮ್ಮದು ಯುಕ್ತಿ ಸಮ್ಮತವಾದವಾಗುವುದಿಲ್ಲ."

ಮೈಕ್ ರಾಬಿನ್‌ಸನ್ : ಆಗಲಿ ಈಗ ಮತ್ತೊಂದು ದೃಷ್ಟಿಯಿಂದ ವಿಚಾರಮಾಡೋಣ. ಮನುಷ್ಯನಿಗೆ ಆತ್ಮ ಇಲ್ಲವೆಂದು ಭಾವಿಸಿದರೆ .......

ಶ್ರೀಲ ಪ್ರಭುಪಾದ : ಹಾಗಾದರೆ ನೀವು ಸಜೀವ ದೇಹಕ್ಕೂ ನಿರ್ಜೀವ ದೇಹಕ್ಕೂ ಇರುವ ವ್ಯತ್ಯಾಸವೇನೆಂಬುದನ್ನು ವಿವರಿಸಬೇಕಾಗುವುದು. ನಾನು ಪ್ರಾರಂಭದಲ್ಲಿಯೇ ಇದನ್ನು ವಿವರಿಸಿದ್ದೇನೆ. ಚೈತನ್ಯಶಕ್ತಿ ಸ್ವರೂಪವಾದ ಆತ್ಮವು ದೇಹದಿಂದ ತೊಲಗಿದೊಡನೆಯೇ, ಅತ್ಯಂತ ಸುಂದರವಾದ ದೇಹಕ್ಕೂ ಕೂಡ ಯಾವ ಬೆಲೆಯಿಲ್ಲ. ಅದನ್ನು ಯಾರೂ ಪರಿವೆ ಮಾಡುವುದಿಲ್ಲ; ಅದನ್ನು ತಳ್ಳಿಹಾಕಿಬಿಡುತ್ತಾರೆ. ಆದರೆ ಈಗ ನಾನು ನಿಮ್ಮ ಕೂದಲು ಮುಟ್ಟಿದರೂ ಕೂಡ ಕದನವಾಗುತ್ತದೆ. ಸಜೀವ ಶರೀರಕ್ಕೂ ನಿರ್ಜೀವ ಶರೀರಕ್ಕೂ ಇರುವ ವ್ಯತ್ಯಾಸವೇ ಇದು. ಸಜೀವ ಶರೀರದಲ್ಲಿ ಆತ್ಮವಿದೆ. ನಿರ್ಜೀವ ಶರೀರದಲ್ಲಿ ಆತ್ಮವಿಲ್ಲ. ಆತ್ಮವು ದೇಹವನ್ನು ಬಿಟ್ಟೊಡನೆಯೇ ದೇಹಕ್ಕೆ ಬೆಲೆಯಿಲ್ಲ. ಅದು ನಿರುಪಯುಕ್ತ. ಇದನ್ನು ಸರಳವಾಗಿ ತಿಳಿದುಕೊಳ್ಳಬಹುದಾಗಿದೆ. ಆದರೆ ಅತಿ ದೊಡ್ಡವರೆನಿಸಿಕೊಂಡ ವಿಜ್ಞಾನಿಗಳು ಮತ್ತು ವೇದಾಂತಿಗಳು ಕೂಡ ಇದನ್ನು ತಿಳಿದುಕೊಳ್ಳಲಾರದಷ್ಟು ಮಂದಮತಿಗಳಾಗಿದ್ದಾರೆ. ಆಧುನಿಕ ಸಮಾಜವು ಭಯಾನಕ ಸ್ಥಿತಿಯಲ್ಲಿದೆ. ನಿಜವಾದ ಬುದ್ಧಿಯಿದ್ದ ಮನುಷ್ಯನೇ ಇಲ್ಲವೆಂದೆನಿಸುತ್ತದೆ.

ಮೈಕ್ ರಾಬಿನ್‌ಸನ್ : ನೀವು ಜೀವನದ ಆಧ್ಯಾತ್ಮಿಕ ಆಯಾಮವನ್ನು ಅರಿತುಕೊಳ್ಳದ ಎಲ್ಲ ವಿಜ್ಞಾನಿಗಳನ್ನೂ ಕುರಿತು ಹೇಳುತ್ತಿರುವಿರಾ ?

ಶ್ರೀಲ ಪ್ರಭುಪಾದ : ಹೌದು. ನಿಜವಾದ ವಿಜ್ಞಾನವೆಂದರೆ ಭೌತಿಕ ಮತ್ತು ಆಧ್ಯಾತ್ಮಿಕ ಎಲ್ಲ ವಸ್ತುಗಳ ಪೂರ್ಣಜ್ಞಾನ ಹೊಂದಿರುವುದು.

ಮೈಕ್ ರಾಬಿನ್‌ಸನ್ : ನೀವು ನಿಮ್ಮ ಭೌತಿಕ ಜೀವನದಲ್ಲಿ ರಸಾಯನಶಾಸ್ತ್ರಜ್ಞರಾಗಿ ಇದ್ದಿರಲ್ಲವೆ ?

ಶ್ರೀಲ ಪ್ರಭುಪಾದ : ಹೌದು, ನಾನು ನನ್ನ ಪೂರ್ವಾಶ್ರಮದಲ್ಲಿ ರಸಾಯನ ಶಾಸ್ತ್ರಜ್ಞನಾಗಿದ್ದೆ. ಆದರೆ ರಸಾಯನ ಶಾಸ್ತ್ರಜ್ಞನಾಗಲು ಬಹಳ ಬುದ್ಧಿಯೇನೂ ಬೇಕಿಲ್ಲ. ಸಾಮಾನ್ಯ ವ್ಯವಹಾರ ಜ್ಞಾನವಿರುವ ಯಾರೂ ಕೂಡ ರಸಾಯನಶಾಸ್ತ್ರಜ್ಞನಾಗಬಹುದು.

ಮೈಕ್ ರಾಬಿನ್‌ಸನ್ : ಆದರೆ ಇಂದಿನ ವಿಜ್ಞಾನಿಗಳು ಮಂದಮತಿಗಳಾಗಿದ್ದರೂ, ಭೌತಿಕ ವಿಜ್ಞಾನವೂ ಮಹತ್ವದ್ದೆಂದು ಭಾವಿಸಿರುವರಲ್ಲವೇ ?

ಶ್ರೀಲ ಪ್ರಭುಪಾದ : ಭೌತಿಕ ವಿಜ್ಞಾನವು ತಕ್ಕಮಟ್ಟಿಗೆ ಮಹತ್ವದ್ದಾಗಿದೆ. ಅದು ಎಲ್ಲ ರೀತಿಯಲ್ಲಿಯೂ ಮಹತ್ವದ್ದಲ್ಲ.

ಮೈಕ್ ರಾಬಿನ್‌ಸನ್ : ಹೀಗೋ. ನಾನು ಮುಂಚೆ ಕೇಳಿದ ಪ್ರಶ್ನೆಗೆ ಮತ್ತೆ ಬರಬಹುದಲ್ಲವೆ ? "ಧರ್ಮ ಗ್ರಂಥಗಳ ಪ್ರಸ್ತಾಪ ಬೇಡ. ಸಾಮಾನ್ಯ ವ್ಯವಹಾರಜ್ಞಾನವನ್ನು

ಉಪಯೋಗಿಸಿ ಸಾಕು" ಎಂದು ನಾವು ಕೆಲವೇ ನಿಮಿಷಗಳ ಹಿಂದೆ ಭಿನ್ನಾಭಿಪ್ರಾಯ ಹೊಂದಿದ್ದಾಗ ನೀವು ಹೇಳಿದಿರಿ. ಹಾಗಾದರೆ ನಿಮ್ಮ ಧರ್ಮದಲ್ಲಿ ಧರ್ಮಶಾಸ್ತ್ರಗಳ ಪಾತ್ರವೇನು ? ಅವು ಎಷ್ಟರಮಟ್ಟಿಗೆ ಮಹತ್ವದ್ದಾಗಿವೆ ?

ಶ್ರೀಲ ಪ್ರಭುಪಾದ : ನಮ್ಮ ಧರ್ಮ ಒಂದು ವಿಜ್ಞಾನವಾಗಿದೆ. ಒಂದು ಶಿಶು ಹುಡುಗನಾಗಿ ಬೆಳೆಯುತ್ತದೆ ಎಂದು ನಾವು ಹೇಳಿದರೆ ಅದು ವಿಜ್ಞಾನವೇ ಸರಿ . ಅದು ಧರ್ಮವಲ್ಲ. ಪ್ರತಿಯೊಂದು ಶಿಶುವೂ ಹುಡುಗನಾಗಿ ಬೆಳೆಯುತ್ತದೆ. ಇದರಲ್ಲಿ ಧರ್ಮದ ಪ್ರಶ್ನೆಯೇನು ಬಂತು ? ಪ್ರತಿಯೊಬ್ಬನೂ ಸಾಯುತ್ತಾನೆ. ಇಲ್ಲಿ ಧರ್ಮದ ಪ್ರಶ್ನೆಯೇನು ? ಮನುಷ್ಯನು ಸತ್ತಾಗ ದೇಹ ನಿರುಪಯುಕ್ತವಾಗುತ್ತದೆ. ಇದರಲ್ಲಿಯೂ ಧರ್ಮದ ಪ್ರಶ್ನೆ ಏನಿದೆ ? ಇದು ಕೇವಲ ವಿಜ್ಞಾನ. ನೀವು ಕ್ರಿಶ್ಚನ್, ಹಿಂದೂ ಅಥವಾ ಮುಸ್ಲಿಮ್ ಯಾರಾದರೇನು, ನೀವು ಸತ್ತಾಗ ನಿಮ್ಮ ದೇಹ ನಿರುಪಯುಕ್ತವಾಗುತ್ತದೆ. ಇದೂ ವಿಜ್ಞಾನವೇ? ನಿಮ್ಮ ಒಬ್ಬ ಸಂಬಂಧಿಯು ಸತ್ತಾಗ, "ನಾವು ಕ್ರಿಶ್ಚನ್ನರು, ಅವನು ಸತ್ತಿಲ್ಲವೆಂದು ನಾವು ಭಾವಿಸುತ್ತೇವೆ" ಎಂದು ನೀವು ಹೇಳಲಾರಿರಿ. ಅವನು ಸತ್ತಿದ್ದಾನೆ. ನಾವು ಈ ಆಧಾರದ ಮೇಲೆ ಮಾತನಾಡುತ್ತೇವೆ. ಆತ್ಮವು ದೇಹದಲ್ಲಿರುವವರೆಗೆ ಆ ದೇಹಕ್ಕೆ ಮಹತ್ವವಿದೆ. ಆತ್ಮವು ಅಲ್ಲಿ ಇಲ್ಲದಾಗ ಅದು ನಿರುಪಯುಕ್ತ. ಈ ವಿಜ್ಞಾನವು ಎಲ್ಲರಿಗೂ ಅನ್ವಯಿಸುವುದು, ನಾವು ಈ ಆಧಾರವನ್ನಿಟ್ಟುಕೊಂಡೇ ಎಲ್ಲರಿಗೂ ಶಿಕ್ಷಣ ನೀಡಬಯಸುತ್ತೇವೆ.

ಮೈಕ್ ರಾಬಿನ್‌ಸನ್ : ನಾನು ನಿಮ್ಮನ್ನು ಸರಿಯಾಗಿ ತಿಳಿದುಕೊಂಡಿರುವೆನಾದರೆ, ನೀವು ಕೇವಲ ವೈಜ್ಞಾನಿಕ ತಳಹದಿಯ ಮೇಲೆ ಜನರಿಗೆ ಶಿಕ್ಷಣ ನೀಡ ಬಯಸುವಿರಲ್ಲವೇ ? ಅದರಲ್ಲಿ ಧರ್ಮಕ್ಕೆ ಪ್ರಸಕ್ತಿಯೇ ಇಲ್ಲ ಎಂದ ಹಾಗಾಯಿತಲ್ಲವೇ ?

ಶ್ರೀಲ ಪ್ರಭುಪಾದ : ಧರ್ಮ ಎಂಬುದು ವಿಜ್ಞಾನವೂ ಹೌದು. ಜನ ತಪ್ಪಾಗಿ ಧರ್ಮ ಎಂದರೆ ಶ್ರದ್ಧೆ—"ನನ್ನ ನಂಬಿಕೆ" ಎಂದು ತಿಳಿದುಕೊಂಡಿದ್ದಾರೆ. (ಶಿಷ್ಯನನ್ನು ಕುರಿತು) ಧರ್ಮ ಎಂಬುದಕ್ಕೆ ನಿಘಂಟಿನಲ್ಲಿ ಏನು ಅರ್ಥವಿದೆ ನೋಡಿ.

ಶಿಷ್ಯ : ಧರ್ಮ ಎಂಬ ಶಬ್ದಕ್ಕೆ ನಿಘಂಟು, "ಪುರುಷೋತ್ತಮನ ನಿಯಂತ್ರಣ ಅಥವಾ ಶಕ್ತಿಯನ್ನು ಅದರಲ್ಲಿಯೂ ವಿಶೇಷವಾಗಿ ವಿಧೇಯತೆಯನ್ನು ಪಡೆಯುವ ಪರಮ ದೇವೋತ್ತಮ ವ್ಯಕ್ತಿ ಸ್ವರೂಪನಾದ ದೇವರನ್ನು ಅರಿತುಕೊಳ್ಳುವುದು, ಮತ್ತು ಅಂಥ ಅರಿವನ್ನು ತಕ್ಕ ಮಾನಸಿಕ ಭಾವನೆಯೊಂದಿಗೆ ಮೇಳೈಸುವುದು" ಎಂದು ಹೇಳುತ್ತದೆ.

ಶ್ರೀಲ ಪ್ರಭುಪಾದ : ಹೌದು. ಧರ್ಮ ಎಂದರೆ ಪರಮ ನಿಯಂತ್ರಕನಿಗೆ ಹೇಗೆ ವಿಧೇಯರಾಗಿರುವುದು ಎಂಬುದನ್ನು ಕಲಿತುಕೊಳ್ಳುವುದು. ಆದುದರಿಂದ ನೀವು ಕ್ರಿಶ್ಚನರಾಗಿರಬಹುದು, ನಾನು ಹಿಂದೂ ಆಗಿರಬಹುದು, ಅದರಿಂದ ಯಾವ ವ್ಯತ್ಯಾಸವಾಗುವುದಿಲ್ಲ. ಒಬ್ಬ ಪರಮ ನಿಯಂತ್ರಕನಿದ್ದಾನೆ ಎಂಬುದನ್ನು ನಾವಿಬ್ಬರೂ ಒಪ್ಪಿಕೊಳ್ಳಲೇಬೇಕು. ಪ್ರತಿಯೊಬ್ಬನೂ ಅದನ್ನು ಒಪ್ಪಿಕೊಳ್ಳಲೇಬೇಕು. ಅದೇ ನಿಜವಾದ ಧರ್ಮ. "ಪ್ರಾಣಿಗಳಿಗೆ ಆತ್ಮವಿಲ್ಲ

ವೆಂದು ನಾವು ನಂಬುತ್ತೇವೆ" ಎಂಬುದಲ್ಲ. ಅದು ಧರ್ಮವಲ್ಲ. ಅದು ತೀರಾ ಅವೈಜ್ಞಾನಿಕ. ಧರ್ಮ ಎಂದರೆ ಪರಮ ನಿಯಂತ್ರಕನ ಬಗ್ಗೆ ವೈಜ್ಞಾನಿಕ ಅರಿವು ಹೊಂದುವುದು. ಪರಮ ನಿಯಂತ್ರಕನನ್ನೂ ಅರಿತುಕೊಳ್ಳುವುದು ಮತ್ತು ಅವನಿಗೆ ವಿಧೇಯರಾಗಿರುವುದು–ಅಷ್ಟೆ. ರಾಜ್ಯದಲ್ಲಿ ಯಾವನು ಸರಕಾರವನ್ನು ಅರಿತುಕೊಂಡು ಅದರ ಕಾನೂನುಗಳಿಗೆ ವಿಧೇಯನಾಗಿರುತ್ತಾನೋ ಅವನೇ ಒಳ್ಳೆಯ ಪ್ರಜೆ; ಸರಕಾರವನ್ನು ಲೆಕ್ಕಿಸದವನೇ ಕೆಟ್ಟಪ್ರಜೆ. ನೀವು ದೇವರ ರಾಜ್ಯವನ್ನು ನಿರ್ಲಕ್ಷಿಸಿ ಕೆಟ್ಟ ಪ್ರಜೆಯಾದರೆ, ನೀವು ಅಧರ್ಮಿಗಳು, ನೀವು ಒಳ್ಳೆಯ ಪ್ರಜೆಯಾದರೆ ಧರ್ಮಿಗಳು.

ಮೈಕ್ ರಾಬಿನ್‌ಸನ್ : ಹೀಗೇನು, ಸರಿ. ಈ ಜೀವಿತಕ್ಕೆ ಏನು ಅರ್ಥ ಎಂದು ನೀವು ನಂಬುತ್ತೀರಿ ಹೇಳಬಲ್ಲಿರಾ? ಮೊದಲನೆಯದಾಗಿ ನಾವು ಇರುವುದು ಏಕೆ?

ಶ್ರೀಲ ಪ್ರಭುಪಾದ : ಸುಖಾನುಭೂತಿಯೇ ಜೀವನದ ಉದ್ದೇಶ. ಆದರೆ ನೀವೀಗ ಜೀವನದ ಸುಳ್ಳು ವೇದಿಕೆಯ ಮೇಲೆ ಇದ್ದೀರಿ, ಅಂತೆಯೇ ನೀವು ಸುಖಿಗಳಾಗಿರುವ ಬದಲು ದುಃಖಿಗಳಾಗಿರುವಿರಿ. ಎಲ್ಲಿ ನೋಡಿದರೂ ಅಸ್ತಿತ್ವಕ್ಕಾಗಿ ನಾವು ಹೋರಾಟವನ್ನು ಕಾಣುತ್ತೇವೆ. ಪ್ರತಿಯೊಬ್ಬನು ಹೆಣಗಾಡುತ್ತಿದ್ದಾನೆ. ಆದರೆ ಕೊನೆಯಲ್ಲಿ ಅವರಿಗೆ ಸಿಕ್ಕುವ ಸುಖವೇನು? ಅವರು ಕೇವಲ ದುಃಖಪಡುತ್ತಾರೆ ಮತ್ತು ಸಾಯುತ್ತಾರೆ. ಆದುದರಿಂದ, ಜೀವನವೆಂದರೆ ಸುಖಾನುಭೂತಿಯೆಂಬುದೇನೋ ನಿಜ. ಆದರೆ ಸದ್ಯದ ನಿಮ್ಮ ಜೀವನ ಸುಖಮಯವಾದುದಲ್ಲ. ನೀವು ನಿಜವಾದ ಆಧ್ಯಾತ್ಮ ಜೀವನದ ವೇದಿಕೆಗೆ ತಲುಪಿದಾಗ, ಸುಖ ಪಡೆಯುವಿರಿ.

ಮೈಕ್ ರಾಬಿನ್‌ಸನ್ : ಕೊನೆಯದಾಗಿ, ಆಧ್ಯಾತ್ಮ ಜೀವನದಲ್ಲಿ ನೀವು ಯಾವ ಯಾವ ಹಂತದಲ್ಲಿ ಹೋಗುವಿರಿ ? ಹೊಸ ಭಕ್ತನು ಯಾವ ಯಾವ ಆಧ್ಯಾತ್ಮ ಹಂತಗಳಲ್ಲಿ ಸಾಗಿ ಹೋಗುತ್ತಾನೆ ? ಎಂಬುದನ್ನು ತಿಳಿಸುವಿರಾ ?

ಶ್ರೀಲ ಪ್ರಭುಪಾದ : ಕುತೂಹಲವೇ ಮೊದಲನೆಯ ಹಂತ. "ಈ ಕೃಷ್ಣಪ್ರಜ್ಞಾ ಆಂದೋಲನವೆಂದರೇನು ? ಇದನ್ನು ನಾನು ಅಧ್ಯಯನ ಮಾಡಬೇಕು" ಎಂದು ನೀವು ಹೇಳುತ್ತೀರಿ. ಇದನ್ನು ಶ್ರದ್ಧೆ ಎಂದು ಕರೆಯುತ್ತಾರೆ. ಇದು ಪ್ರಾರಂಭದೆಶೆ. ನೀವು ಇನ್ನೂ ಹೆಚ್ಚು ಆಸಕ್ತಿಯುಳ್ಳವರಾದರೆ, ಈ ಜ್ಞಾನ ಸಾಧನೆ ಮಾಡುತ್ತಿರುವವರ ಜೊತೆ ಸೇರುತ್ತೀರಿ. ಅವರ ಮನೋಭಾವವನ್ನು ನೀವು ತಿಳಿದುಕೊಳ್ಳಲೆತ್ನಿಸುವಿರಿ. ಆಗ "ನೀವೂ ಅವರಲ್ಲೊಬ್ಬರಾಗಬಾರದು" ಎಂದು ಬಯಸುತ್ತೀರಿ. ನೀವೂ ಅವರಲ್ಲೊಬ್ಬರಾದಾಗ, ನಿಮ್ಮ ಎಲ್ಲ ತಪ್ಪು ತಿಳಿವಳಿಕೆಗಳೂ ದೂರಾಗುತ್ತವೆ. ಇನ್ನೂ ಹೆಚ್ಚು ಶ್ರದ್ಧಾವಂತರಾಗುತ್ತೀರಿ. ಆಗ ನಿಮಗೆ ಕೃಷ್ಣಪ್ರಜ್ಞೆಯ ಬಗ್ಗೆ ಇನ್ನೂ ಹೆಚ್ಚಿನ ಅಭಿರುಚಿ ಹುಟ್ಟುತ್ತದೆ. ಈ ಹುಡುಗರು ಸಿನಿಮಾ ನೋಡಲು ಏಕೆ ಹೋಗುವುದಿಲ್ಲ ? ಇವರು ಮಾಂಸ ಭಕ್ಷಣ ಏಕೆ ಮಾಡುವುದಿಲ್ಲ ಅಥವಾ ರಾತ್ರಿ ಕ್ಲಬ್ಬುಗಳಿಗೆ ಏಕೆ ಹೋಗುವುದಿಲ್ಲ? ಅವರ ಅಭಿರುಚಿ ಬದಲಾಗಿರುವುದೇ ಇದಕ್ಕೆ ಕಾರಣ. ಅವರು ಈಗ ಈ ಎಲ್ಲವನ್ನು ಕುರಿತು ಜುಗುಪ್ಸೆ ಪಡುತ್ತಾರೆ. ಹೀಗೆ ನೀವು ಪ್ರಗತಿ ಪಥದಲ್ಲಿ ಮುಂದುವರಿಯುತ್ತೀರಿ. ಮೊದಲು ಶ್ರದ್ಧೆ, ಆಮೇಲೆ ಭಕ್ತರಸಂಗ, ಅಜ್ಞಾನನಿವೃತ್ತಿ, ಆಮೇಲೆ ದೃಢಭಕ್ತಿ, ಆ ಬಳಿಕ ಅಭಿರುಚಿ, ಆಮೇಲೆ ದೇವರ ಜ್ಞಾನ, ಅನಂತರ ದೇವರಲ್ಲಿ ಪ್ರೀತಿ (ಭಕ್ತಿ), ಇದೇ ಪರಿಪೂರ್ಣತೆ. ಇದೇ ಶ್ರೇಷ್ಠತಮವಾದ ಧರ್ಮ. "ನಾನು ನಂಬುತ್ತೇನೆ, ನೀನು ನಂಬುತ್ತಿ" ಎಂಬ

ಕೇವಲ ಕುರುಡು ಆಚರಣೆಯಲ್ಲ. ಅದು ಧರ್ಮವಲ್ಲ. ಅದು ಕೇವಲ ಮೋಸ. ದೇವರಲ್ಲಿ ಪ್ರೀತಿಯನ್ನು ಬೆಳೆಸಿಕೊಳ್ಳುವುದೇ ನಿಜವಾದ ಧರ್ಮದ ಅರ್ಥ. ಅದೇ ಧರ್ಮದ ಪರಿಪೂರ್ಣತೆ.

ಮೈಕ್ ರಾಬಿನ್ ಸನ್ : ಧನ್ಯವಾದಗಳು ನಿಮ್ಮೊಡನೆ ಮಾತನಾಡುವುದೇ ಒಂದು ಆನಂದ.

ಶ್ರೀಲ ಪ್ರಭುಪಾದ : ಹರೇಕೃಷ್ಣ.



# ಸತ್ಯ ಮತ್ತು ಸೌಂದರ್ಯ

**ಶ್ರೀಲಪ್ರಭುಪಾದರು ಈ ಪ್ರಬಂಧವನ್ನು ಪ್ರಥಮ ಬಾರಿಗೆ ಭಾರತದಲ್ಲಿ ಮರಳಿ ದೇವತ್ವದೆಡೆಗೆ ಎಂಬ ತಮ್ಮ ಆಂದಿನ ಪಾಕ್ಷಿಕ ಪತ್ರಿಕೆಯಲ್ಲಿ(ನವೆಂಬರ್ 20, 1958) ಪ್ರಕಟಿಸಿದರು. ಇದು "ಲಿಕ್ವಿಡ್ ಬ್ಯೂಟಿ" ಎಂಬ ಒಂದು ಮರೆಯಲಾಗದ ಕಥೆಯನ್ನು ಒಳಗೊಂಡಿದೆ. ಇದರಲ್ಲಿ ಶ್ರೀಲ ಪ್ರಭುಪಾದರು ಮಾನವ ಲೈಂಗಿಕತೆಯ ತತ್ವವನ್ನು ಮನಮುಟ್ಟುವಂತೆ ಬಯಲು ಮಾಡಿದ್ದಾರೆ. ಸತ್ಯ ಮತ್ತು ಸೌಂದರ್ಯ ಸ್ವರೂಪವನ್ನು ಕುರಿತು ಈ ದೀಪ್ತಿಮಂತ ಪ್ರತಿಪಾದನೆಯು ಕಾಲಾತೀತವಾಗಿದೆ ಮತ್ತು ಅದು "ಆತ್ಮ ಶೋಧಕರಿಗೆ" ಆಶ್ಚರ್ಯಕರವಾಗಿ ಸುಸಂಬದ್ಧವಾಗಿದೆ.**

"ಸತ್ಯ" ಮತ್ತು "ಸೌಂದರ್ಯ" ಎಂಬ ಶಬ್ದಗಳು ಒಂದಕ್ಕೊಂದು ಹೊಂದಿಕೊಳ್ಳುವ ಶಬ್ದಗಳೇ ? ಎಂಬ ಬಗ್ಗೆ ಕೆಲವು ಸಲ ವಾದವಿವಾದಗಳು ನಡೆಯಬಹುದು. ಒಬ್ಬರು ಸತ್ಯವೇನೆಂಬುದನ್ನು ಅಭಿವ್ಯಕ್ತಪಡಿಸಲು ಧಾರಾಳವಾಗಿ ಒಪ್ಪುವುದಾಗಿ ಹೇಳಬಹುದು. ಆದರೆ ಸತ್ಯವು ಸದಾ ಸುಂದರವಾಗಿಲ್ಲದಿರುವುದರಿಂದ–ನಿಜವಾಗಿಯೂ, ಸತ್ಯ ಮತ್ತು ಸೌಂದರ್ಯ ಇವೆರಡನ್ನೂ ಏಕಕಾಲದಲ್ಲಿ ವ್ಯಕ್ತಪಡಿಸುವುದು ಯಾರಿಗಾದರೂ ಪ್ರಾಯಃ ಆಶ್ಚರ್ಯಕರವೂ ಅಪ್ರಿಯವೂ ಆದುದಲ್ಲವೇ ?

ಉತ್ತರರೂಪವಾಗಿ, "ಸತ್ಯ" ಮತ್ತು "ಸೌಂದರ್ಯ" ಎಂಬ ಪದಗಳು ಪರಸ್ಪರ ಸಹವರ್ತೀ ಪದಗಳಾಗಿವೆಯೆಂಬುದನ್ನು ನಾವು ಆಸಕ್ತರಾಗಿರುವ ಎಲ್ಲರಿಗೂ ತಿಳಿಸಬಯಸುತ್ತೇವೆ. ನಿಜವಾಗಿ, ವಾಸ್ತವಿಕವಾದ ಪೂರ್ಣ ಸತ್ಯವು ಸದಾ ಸುಂದರವಾಗಿರುತ್ತದೆ ಎಂದು ನಾವು ಖಡಾ ಖಂಡಿತವಾಗಿ ಹೇಳಬಯಸುತ್ತೇವೆ. ಸತ್ಯವೆಂಬುದು ಎಷ್ಟು ಸುಂದರವಾಗಿದೆಯೆಂದರೆ, ಅದು ಸತ್ಯವನ್ನು ಒಳಗೊಂಡು ಎಲ್ಲರನ್ನೂ ಆಕರ್ಷಿಸುತ್ತದೆ. ಸತ್ಯವು ಎಷ್ಟು ಸುಂದರವಾಗಿದೆಯೆಂದರೆ, ಅನೇಕ ಋಷಿಮುನಿಗಳು, ಸಾಧುಸಂತರು ಮತ್ತು ಭಕ್ತರು ಸತ್ಯಕ್ಕಾಗಿ ಸರ್ವಸ್ವವನ್ನು ತ್ಯಜಿಸಿದ್ದಾರೆ. ಆಧುನಿಕ ಜಗತ್ತಿನ ಆದರ್ಶವ್ಯಕ್ತಿಯಾದ ಮಹಾತ್ಮಾಗಾಂಧೀ ಅವರು ಸತ್ಯಶೋಧನೆಗಾಗಿಯೇ ತಮ್ಮ ಇಡೀ ಜೀವನವನ್ನು ಮುಡಿಪಾಗಿಟ್ಟರು. ಅವರ ಎಲ್ಲ ಚಟುವಟಿಕೆಗಳಿಗೆ ಸತ್ಯಶೋಧನೆಯೇ ಪರಮ ಗುರಿಯಾಗಿತ್ತು.

ಮಹಾತ್ಮಾಗಾಂಧಿ ಒಬ್ಬರೇ ಏಕೆ ? ಸತ್ಯವು ಕೇವಲ ಸುಂದರವಷ್ಟೇ ಅಲ್ಲ, ಅದು ಸರ್ವ ಶಕ್ತವೂ ಸರ್ವಸಂಪನ್ನವೂ ಸರ್ವಯಶಸ್ಸೂ ಸರ್ವವೈರಾಗ್ಯವೂ ಮತ್ತು ಸರ್ವಜ್ಞೇಯವೂ ಆಗಿರುವುದರಿಂದ ನಾವೆಲ್ಲ ಸತ್ಯ ಶೋಧನೆಗಾಗಿಯೇ ಹಾತೊರೆಯುತ್ತಿದ್ದೇವೆ.

ದುರ್ದೈವದಿಂದ ಜನರಿಗೆ ನಿಜವಾದ ಸತ್ಯದ ಅರಿವಿಲ್ಲ. ಜೀವನದ ಎಲ್ಲ ವರ್ಗದ ನೂರಕ್ಕೆ 99 ರಷ್ಟು ಜನ, ನಿಜವಾಗಿ, ಸತ್ಯದ ಹೆಸರಿನಲ್ಲಿ ಅಸತ್ಯವನ್ನೇ ಅನುಸರಿಸಿ ನಡೆದಿದ್ದಾರೆ. ನಾವು ನಿಜವಾಗಿ ಸತ್ಯದ ಸೌಂದರ್ಯದಿಂದ ಆಕರ್ಷಿತರಾಗಿದ್ದೇವೆ, ಆದರೆ ಅನಾದಿ ಕಾಲದಿಂದಲೂ ಪ್ರಾತಿಭಾಸಿಕ ಸತ್ಯವನ್ನೇ ನಾವು ಸತ್ಯವೆಂದು ಪ್ರೀತಿಸುವ ಅಭ್ಯಾಸಕ್ಕೆ ಒಗ್ಗಿಹೋಗಿದ್ದೇವೆ. ಆದುದರಿಂದ ಲೌಕಿಕರಿಗೆ "ಸತ್ಯ" ಮತ್ತು "ಸೌಂದರ್ಯ" ಎಂಬ ಪದಗಳು ಪರಸ್ಪರ ಭಿನ್ನವಾಗಿ ತೋರುತ್ತವೆ. ಲೌಕಿಕ ಸತ್ಯ ಮತ್ತು ಸೌಂದರ್ಯವನ್ನು ಕೆಳಕಂಡಂತೆ ವಿವರಿಸಬಹುದಾಗಿದೆ.

ಒಂದು ಕಾಲದಲ್ಲಿ ಸಶಕ್ತನೂ ದೃಢಕಾಯನೂ ಆಗಿದ್ದ ವ್ಯಕ್ತಿಯೊಬ್ಬನು ಒಂದು ಸುಂದರ ಹುಡುಗಿಯನ್ನು ಪ್ರೀತಿಸುತ್ತಿದ್ದ. ಆದರೆ ಅವನ ಶೀಲವು ಮಾತ್ರ ಸಂದೇಹಾಸ್ಪದವಾಗಿತ್ತು. ಆ ಹುಡುಗಿಯಾದರೋ ನೋಡಲು ಚಲುವೆಯಷ್ಟೇ ಅಲ್ಲ, ಪವಿತ್ರ ಚಾರಿತ್ರ್ಯವುಳ್ಳವಳಾಗಿದ್ದಳು. ಅಂತೆಯೇ ಅವಳು ಅವನ ಪ್ರೀತಿಯನ್ನು ಬಯಸುತ್ತಿರಲಿಲ್ಲ. ಆದರೆ ಅವನು ಅತ್ಯಂತ ಕಾಮುಕ ನಾದುದರಿಂದ ಅವಳ ಪ್ರೀತಿಗೆ ಒತ್ತಾಸೆ ಪಡುತ್ತಿದ್ದನು. ಆ ಹುಡುಗಿ ಅವನಿಗೆ ಏಳುದಿನ ತಡೆಯಲು ಹೇಳಿ, ಆ ಬಳಿಕ ಅವನು ತನ್ನನ್ನು ಯಾವಾಗ ಕಾಣಬೇಕು ಎಂಬ ಬಗ್ಗೆ ಸಮಯ ನಿಗದಿ ಮಾಡಿದಳು. ಅವನು ಒಪ್ಪಿಕೊಂಡ ಮತ್ತು ಆ ಕಾಲ ಸನ್ನಿಹಿತವಾಗುವುದನ್ನೇ ಆಸೆ ತುಂಬಿ ನಿರೀಕ್ಷಿಸುತ್ತಿದ್ದ.

ಆ ಸಾಧು ಸ್ವಭಾವದ ಹುಡುಗಿಯಾದರೋ, ಪೂರ್ಣ ಸತ್ಯದ ನಿಜ ಸೌಂದರ್ಯವನ್ನು ಪ್ರದರ್ಶಿಸಲು ಒಂದು ಉದ್ಬೋಧಕ ವಿಧಾನವನ್ನೇ ಅನುಸರಿಸಿದಳು. ಅವಳು ತನಗೆ ತುಂಬ ಭೇದಿಯಾಗುವಂಥಹ ಪರಿಣಾಮಕಾರೀ ಪ್ರಮಾಣದ ಔಷಧಿಗಳನ್ನು ಸೇವಿಸಿದಳು ಮತ್ತು ಏಳು ದಿನಗಳವರೆಗೆ ಅವಳಿಗೆ ನಿರಂತರ ಭೇದಿಯಾಗ ತೊಡಗಿತು ಮತ್ತು ಅವಳು ತಿಂದುದನ್ನೆಲ್ಲ ಕಕ್ಕ ತೊಡಗಿದಳು. ಅಷ್ಟೇ ಅಲ್ಲ ಆ ಭೇದಿ ಮತ್ತು ಕಾರಿದ್ದನ್ನೆಲ್ಲ ಒಂದು ಮಡಕೆಯಲ್ಲಿ ಕೂಡಿಟ್ಟಳು. ಆ ಭೇದಿ ಮತ್ತು ವಮನದಿಂದಾಗಿ ಆ ಸುಂದರ ಹುಡುಗಿ ಅಸ್ಥಿಪಂಜರದ ಹಾಗೆ ತೀರಾ ಬಡಕಲಾದಳು, ಅವಳ ಬಣ್ಣ ಕಪ್ಪಿಟ್ಟಿತು, ಅವಳ ಸುಂದರ ಕಣ್ಣುಗಳು ಕುಳಿಬಿದ್ದುಹೋದುವು. ಅಂತೂ ಆ ನಿಗದಿಯಾದ ಕಾಲಕ್ಕೆ ಅವಳು ಆ ವ್ಯಕ್ತಿಯ ಬರವನ್ನು ಕಾತುರದಿಂದ ನಿರೀಕ್ಷಿಸ ತೊಡಗಿದಳು.

ಆ ವ್ಯಕ್ತಿಯು ಒಳ್ಳೆಯ ಉಡುಗೆ ತೊಡಿಗೆ ಧರಿಸಿ, ಸೊಗಸಾಗಿ ಮಾತನಾಡುತ್ತಾ, ಅಲ್ಲಿಗೆ ಬಂದ ಮತ್ತು ತಾನು ಭೇಟಿಯಾಗಬೇಕಾಗಿದ್ದ ಆ ಸುಂದರ ಹುಡುಗಿ ಎಲ್ಲಿ ಎಂದು ಅಲ್ಲಿ ನಿರೀಕ್ಷಣೆ ಯಲ್ಲಿರುವ ಆ ಕುರೂಪಿಯನ್ನು ಕೇಳಿದ. ತಾನು ಕೇಳುತ್ತಿದ್ದ ಆ ಸುಂದರ ಹುಡುಗಿಯೇ ಅವಳು ಎಂಬುದನ್ನು ಅವನಿಗೆ ಗುರುತಿಸಲಾಗಲಿಲ್ಲ. ಅವಳು ನಿಜವಾಗಿಯೂ ತಾನೇ ಆ ಹುಡುಗಿ ಎಂದು ಹೇಳಿದರೂ ಅವಳ ದುಃಸ್ಥಿತಿಯ ಕಾರಣದಿಂದ ಅವನು ಅವಳನ್ನು ಗುರುತಿಸದೇ ಹೋದ.

ಕೊನೆಗೆ, ತಾನು ತನ್ನ ಸೌಂದರ್ಯದ ಅಂಶಗಳನ್ನೆಲ್ಲ ಬೇರ್ಪಡಿಸಿ ಅವುಗಳನ್ನು ಒಂದು ಮಡಕೆಯಲ್ಲಿ ಕೂಡಿಟ್ಟಿರುವುದಾಗಿ ಆ ಹುಡುಗಿ ಆ ಧಡೂತಿ ವ್ಯಕ್ತಿಗೆ ಹೇಳಿದಳು. ಅವನು ಆ ಸೌಂದರ್ಯ ರಸಗಳನ್ನು ಆಸ್ವಾದಿಸಿ ಸುಖಿಸಬಹುದೆಂದೂ ಹೇಳಿದಳು. ಆ ಲೌಕಿಕ ವ್ಯಕ್ತಿಯು ಆ ಸೌಂದರ್ಯ ರಸಗಳನ್ನು ನೋಡಬಯಸಿದಾಗ, ಅವನನ್ನೂ ಆ ಹೊಲಸು ವಾಸನೆ ಬೀರು ತ್ತಿದ್ದ ಭೇದಿ ಮತ್ತು ವಮನ ಸಂಗ್ರಹಣೆಯನ್ನು ನೋಡಲು ಹೇಳಿದಳು. ಹೀಗೆ ಸೌಂದರ್ಯ ರಸದ ಇಡೀ ಕಥೆಯನ್ನು ಅವನಿಗೆ ವಿವರಿಸಲಾಯಿತು. ಕೊನೆಗೆ, ಆ ಸಾಧು ಸ್ವಭಾವದ ಹುಡುಗಿಯ ಕೃಪೆಯಿಂದ, ಆ ದುಶ್ಶೀಲ ವ್ಯಕ್ತಿಯು ಸತ್ಯಾಸತ್ಯಗಳ ವ್ಯತ್ಯಾಸವನ್ನು ಅರಿತುಕೊಂಡು ಬುದ್ಧಿ ಕಲಿಯುವಂತಾಯಿತು.

ಈ ಮನುಷ್ಯನ ಸ್ಥಿತಿಯೂ ಭೌತಿಕ ಮಿಥ್ಯಾ ಸೌಂದರ್ಯದಿಂದ ಆಕರ್ಷಿತರಾದ ನಮ್ಮಲ್ಲಿಯ ಪ್ರತಿಯೊಬ್ಬರ ಸ್ಥಿತಿಯೂ ಒಂದೇ ಆಗಿದೆ. ಈ ಹುಡುಗಿಯು ತನ್ನ ಇಚ್ಛಾನುಸಾರ ಬೆಳೆಸಿದ ಸುಂದರ ಭೌತಿಕ ಶರೀರವನ್ನು ಹೊಂದಿದ್ದಳು, ಆದರೆ ನಿಜವಾಗಿ ಅವಳು ಅನಿತ್ಯವಾದ ಆ ದೇಹ ಮತ್ತು ಮನಸ್ಸಿನಿಂದ ಭಿನ್ನಳಾದವಳಾಗಿದ್ದಳು. ಅವಳು ನಿಜವಾಗಿ ಚೇತನ ಕಣ ವಾಗಿದ್ದಳು, ಅವಳ ಚರ್ಮದ ಸುಳ್ಳು ಸೌಂದರ್ಯದಿಂದ ಆಕರ್ಷಿತವಾದ ಆ ಪ್ರಿಯತಮನೂ ಚೇತನ ಸ್ವರೂಪಿಯಾಗಿದ್ದನು.

ಭೌತಿಕ ಬುದ್ಧಿಜೀವಿಗಳೂ ಸೌಂದರ್ಯೋಪಾಸಕರೂ ಸಾಪೇಕ್ಷ ಸತ್ಯದ ಹೊರ ಸೌಂದರ್ಯ ಮತ್ತು ಆಕರ್ಷಣೆಯಿಂದ ಭ್ರಮಿಸುತ್ತಾರೆ ಮತ್ತು ಏಕಕಾಲದಲ್ಲಿ ಸತ್ಯ ಮತ್ತು ಸೌಂದರ್ಯ ಎರಡೂ ಆಗಿರುದ ದಿವ್ಯ ಚೇತನ ಸ್ವರೂಪವನ್ನು ಅರಿತುಕೊಳ್ಳುವುದಿಲ್ಲ. ಚೇತನ ಸ್ವರೂಪವು ಎಷ್ಟು ಸುಂದರವಾಗಿದೆಯೆಂದರೆ ಅದು ಸುಂದರವೆನಿಸುವ ದೇಹವನ್ನು ಬಿಟ್ಟಾಗ, ಆ ದೇಹವು ನಿಜವಾಗಿಯೂ ಮಲ ವಮನಗಳಿಂದ ತುಂಬಿದ್ದಾಗಿದ್ದು, ಅದನ್ನು ಎಷ್ಟೇ ಸಿಂಗ ರಿಸಿದರೂ ಯಾರೂ ಅದನ್ನು ಮುಟ್ಟಬಯಸುವುದಿಲ್ಲ.

ನಾವೆಲ್ಲರೂ ಸುಳ್ಳು ಸಾಪೇಕ್ಷ ಸತ್ಯದ ಬೆನ್ನುಹತ್ತಿದ್ದೇವೆ, ಅದು ನಿಜ ಸತ್ಯಕ್ಕೆ ಸಾಟಿಯಾಗ ಲಾರದು. ವಾಸ್ತವಿಕ ಸತ್ಯವಾದರೋ ಚಿರಸುಂದರವಾಗಿದೆ. ಅದು ತನ್ನ ಸೌಂದರ್ಯ ಮಟ್ಟವನ್ನು ಅನಂತಾನಂತ ಕಾಲದಿಂದಲೂ ಉಳಿಸಿಕೊಂಡೇ ಬಂದಿದೆ. ಆ ಚೇತನ ಸ್ವರೂಪವು ಅವಿನಾಶಿಯಾಗಿದೆ. ಹೊರ ಚರ್ಮದ ಸೌಂದರ್ಯವನ್ನು ಮಾತ್ರ ಭೇದಿ ಔಷಧ ಸೇವಿಸಿ ಕೆಲವೇ ಗಂಟೆಗಳಲ್ಲಿ ನಾಶ ಮಾಡಬಹುದು. ಆದರೆ ಸತ್ಯದ ಸೌಂದರ್ಯವು ಅವಿನಾಶಿ ಮತ್ತು ನಿತ್ಯನೂತನ. ದುರ್ದೈವದಿಂದ ಲೌಕಿಕ ಕಲಾವಿದರೂ ಬುದ್ಧಿ ಜೀವಿಗಳೂ ಈ ದಿವ್ಯ ಚೇತನದ ಸೌಂದರ್ಯವನ್ನು ಅರಿತವರಾಗಿಲ್ಲ. ಈ ಸೌಂದರ್ಯ ಕಣಗಳ ಮೂಲ ಸ್ರೋತವಾದ ಪೂರ್ಣಾಗ್ನಿ ಸ್ವರೂಪವನ್ನೂ ಅವರು ಅರಿತಿಲ್ಲ. ಅವರು ಈ ಕಣಗಳ ಮತ್ತು ಅಗ್ನಿಯ ಪರಸ್ಪರ ಸಂಬಂಧವನ್ನೂ ಅರಿತಿಲ್ಲ ; ಅದೇ ಈ ದಿವ್ಯ ಲೀಲೆಗಳ ರೂಪವನ್ನು ಧರಿಸುತ್ತದೆ. ಭಗವಂತನ ಕೃಪೆಯಿಂದ ಆ ಲೀಲೆಗಳನ್ನು ಇಲ್ಲಿ ತೋರಿದಾಗ, ತಮ್ಮ ಇಂದ್ರಿಯಾತೀತವಾದುದನ್ನು ಅರಿಯಲಾಗದ ಮೂಢ ಮಾನವರು ಸತ್ಯ ಸೌಂದರ್ಯಗಳ ಆ ಲೀಲೆಗಳನ್ನು ಮೇಲೆ ವಿವರಿಸಿದ ಮಲ ವಮನಗಳ ತೋರಿಕೆಗಳೆಂದು ಭ್ರಮಿಸುತ್ತಾರೆ. ಹೀಗೆ ಹತಾಶರಾದ ಅವರು ಸತ್ಯ ಮತ್ತು ಸೌಂದರ್ಯ ಎರಡೂ ಏಕಕಾಲದಲ್ಲಿ ಒಂದೆಡೆ ಇರುವುದು ಹೇಗೆ ಸಾಧ್ಯ ಎಂದು ಕೇಳುತ್ತಾರೆ.

ಪೂರ್ಣ ಆತ್ಮ ಸ್ವರೂಪವು ಎಲ್ಲವನ್ನೂ ಆಕರ್ಷಿಸುವ ಒಬ್ಬ ಸುಂದರ ವ್ಯಕ್ತಿ ಎಂಬುದನ್ನು ಪ್ರಾಪಂಚಿಕರು ಅರಿಯುವುದಿಲ್ಲ. ಅವನೇ ಪರಮ ಮೂಲವಸ್ತು, ಸರ್ವವಸ್ತುಗಳ ಪರಮ ಸ್ರೋತ ಎಂಬುದನ್ನು ಅವರು ಅರಿತಿಲ್ಲ. ಆ ಪರಮಾತ್ಮನ ವಿಭಿನ್ನಾಂಶರಾದ ಅನಂತಾನಂತ ಚೇತನ ಕಣಗಳು ಸತ್ಯ ಮತ್ತು ಸೌಂದರ್ಯದಲ್ಲಿ ಗುಣೈಕತ್ವವನ್ನು ಹೊಂದಿವೆ. ವ್ಯತ್ಯಾಸ ಇಷ್ಟೆ: ಪೂರ್ಣವು ಸದಾ ಪೂರ್ಣವೇ. ವಿಭಿನ್ನಾಂಶಗಳು ಸದಾ ವಿಭಿನ್ನಾಂಶಗಳೇ. ಆದರೆ ಅವೆರಡೂ ಆತ್ಯಂತಿಕ ಸತ್ಯಗಳು, ಆತ್ಯಂತಿಕ ಸೌಂದರ್ಯಗಳು, ಆತ್ಯಂತಿಕ ಜ್ಞಾನ, ಆತ್ಯಂತಿಕ ಶಕ್ತಿ, ಆತ್ಯಂತಿಕ ವೈರಾಗ್ಯ ಮತ್ತು ಆತ್ಯಂತಿಕ ಐಶ್ವರ್ಯ ಸ್ವರೂಪಗಳಾಗಿವೆ. ಎಷ್ಟೇ ದೊಡ್ಡ ಪ್ರಾಪಂಚಿಕ ಕವಿಯಾಗಲೀ ಬುದ್ಧಿ ಜೀವಿಯಾಗಲೀ ಬರೆದ ಯಾವುದೇ ಸಾಹಿತ್ಯವು ಆತ್ಯಂತಿಕ ಸತ್ಯ ಸೌಂದರ್ಯಗಳನ್ನು ವರ್ಣಿಸದೆ ಹೋದರೆ, ಆ ಸಾಹಿತ್ಯವು ಮಲ ವಮನಗಳ ಸಾಪೇಕ್ಷ ಸತ್ಯ ಸೌಂದರ್ಯಗಳ ರಾಶಿಯಾಗುತ್ತದೆ. ಪರಮ ಚೇತನದ ಸತ್ಯ ಸೌಂದರ್ಯಗಳನ್ನು ವರ್ಣಿಸುವುದೇ ನಿಜವಾದ ಸಾಹಿತ್ಯವೆನಿಸುವುದು.



# ಮರಣ ಕಲೆ

**ಜನಸಾಮಾನ್ಯರು ಸಾಮಾನ್ಯವಾಗಿ ಹಿಂಸೆ ಮತ್ತು ಮರಣ ಭಯಗಳಿಗೆ ಒಳಗಾಗಿದ್ದರು ಕೂಡ, ಮರಣ ಮತ್ತು ಸಾಯುವ ಬಗ್ಗೆ ನಮ್ಮ ಕಲ್ಪನೆ ತೋರಿಕೆಯದಾಗಿದೆ. "ಮನುಷ್ಯನು ಜೀವನದ ಪೂರ್ಣ ಚೈತನ್ಯದಲ್ಲಿರುವಾಗ ಅವನು ಒಂದು ದಿನ ಕಾಣಲೇಬೇಕಾದ ಮರಣದ ನಗ್ನ ಸತ್ಯವನ್ನು ಮರತೇ ಬಿಡುತ್ತಾನೆ" ಎಂದು ಶ್ರೀಲಾ ಪ್ರಭುಪಾದರು ಹೇಳುತ್ತಾರೆ. ನಮ್ಮ ಮರಣವನ್ನು ನಾವು ಪರಿಣಾಮಕಾರಿಯಾಗಿ ಎದುರಿಸುವುದು ಹೇಗೆ ? ಈ ಪ್ರಬಂಧದಲ್ಲಿ (ಇದು ಹಳೆಯ ಮಾದರಿಯ ಮರಳಿ ದೇವತ್ವದೆಡೆಗೆ ಎಂಬ ಪತ್ರಿಕೆಯಲ್ಲಿ ಏಪ್ರಿಲ್ 20, 1960ರಂದು ಮೊದಲು ಪ್ರಕಟವಾಯಿತು). ಶ್ರೀಲ ಪ್ರಭುಪಾದರು ಶ್ರೀಮದ್ಭಾಗವತದ ಪ್ರಾಚೀನ ಉಪದೇಶಗಳು ಈ ಪ್ರಶ್ನೆಗೆ ಹೇಗೆ ವಾಸ್ತವಿಕ ಉತ್ತರವನ್ನು ಒದಗಿಸುತ್ತವೆ ಎಂಬುದನ್ನು ವಿವರಿಸುತ್ತಾರೆ.**

ತನ್ನ ತಂದೆಯೊಡನೆ ನಡೆಯುತ್ತಿರುವ ಚಿಕ್ಕ ಮಗು ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತದೆ. ಅದು ತಂದೆಗೆ ಚಿತ್ರ ವಿಚಿತ್ರ ಪ್ರಶ್ನೆಗಳನ್ನು ಮಾಡುತ್ತದೆ, ಮತ್ತು ತಂದೆಯು ತಕ್ಕ ಉತ್ತರಗಳನ್ನು ನೀಡಿ ಮಗುವನ್ನು ಸಮಾಧಾನ ಪಡಿಸಬೇಕಾಗುತ್ತದೆ. ನಾನು ನನ್ನ ಸಾಂಸಾರಿಕ ಜೀವನದಲ್ಲಿ ಒಬ್ಬ ಯುವ ತಂದೆಯಾಗಿದ್ದಾಗ ಯಾವಾಗಲೂ ನನ್ನ ಜೊತೆಗೆಯೆ ಇರುತ್ತಿದ್ದ ನನ್ನ ಎರಡನೆಯ ಮಗನು ಪ್ರಶ್ನೆಗಳ ಸುರಿಮಳೆಯನ್ನೇ ಮಾಡುತ್ತಿದ್ದನು. ಒಂದು ದಿನ ನಾವು ಪ್ರವಾಸ ಮಾಡುತ್ತಿದ್ದ ಟ್ರಾಮ್ ಕಾರಿನ ಪಕ್ಕದಿಂದ ಮದುವೆ ಗಂಡಿನ ಮೆರವಣಿಗೆ ಹೋಯಿತು. ಈ ನನ್ನ ನಾಲ್ಕು ವರ್ಷದ ಮಗ ಯಥಾಪ್ರಕಾರ ಈ ದೊಡ್ಡ ಮೆರವಣಿಗೆ ಏನು ಎಂದು ಕೇಳಿದ. ಅವನ ಸಾವಿರಾರು ಪ್ರಶ್ನೆಗಳಿಗೆ ಮದುವೆಯ ಮೆರವಣಿಗೆಯನ್ನು ಕುರಿತು ಸಾಧ್ಯವಿದ್ದ ಎಲ್ಲ ಉತ್ತರಗಳನ್ನು ಕೊಟ್ಟಾಯಿತು. ಕೊನೆಗೆ ಅವನು ತನ್ನ ತಂದೆಯನ್ನೇ ಕುರಿತು ನೀನು ಮದುವೆಯಾಗಿದ್ದೀಯಾ ಎಂದು ಕೇಳಿದ ! ಅಲ್ಲಿದ್ದ ವಯಸ್ಸಾದ ಜನಗಳೆಲ್ಲ ಅವನ ಈ ಪ್ರಶ್ನೆಯನ್ನು ಕೇಳಿ ಜೋರಾಗಿ ನಕ್ಕರು. ನನ್ನ ಮಗನು ಅವರೇಕೆ ಹೀಗೆ ನಗುತ್ತಿದ್ದಾರೆ ಎಂದು ಆಶ್ಚರ್ಯದಿಂದ ನೋಡುತ್ತಿದ್ದ. ಅಂತೂ ಮದುವೆಯಾಗಿದ್ದ ತಂದೆಯು ಅವನನ್ನು ಹೇಗೊ ಸಮಾಧಾನ ಪಡಿಸಬೇಕಾಯಿತು.

ಈ ಪ್ರಸಂಗದಿಂದ ದೊರೆತ ಪಾಠವೆಂದರೆ ಮನುಷ್ಯನು ಬುದ್ಧಿ ಜೀವಿ. ಪ್ರಶ್ನೆ ಮಾಡಿ

ತಿಳಿದುಕೊಳ್ಳುವುದು ಅವನ ಸ್ವಭಾವ. ಪ್ರಶ್ನೆಗಳು ಹೆಚ್ಚಾದಂತೆ ಜ್ಞಾನವಿಜ್ಞಾನದ ಮುನ್ನಡೆಯೂ ಹೆಚ್ಚಾಗುತ್ತದೆ. ಈ ಭೌತಿಕ ನಾಗರಿಕತೆಯೆಲ್ಲ ಎಳೆಯ ಮಕ್ಕಳು ತಮ್ಮ ಹಿರಿಯರನ್ನು ಕೇಳಿದ ಅಪಾರ ಮೂಲ ಪ್ರಶ್ನೆಗಳನ್ನೇ ಅವಲಂಬಿಸಿದೆ. ಹಿರಿಯರು ತಮ್ಮ ಕಿರಿಯರ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನು ನೀಡಿದಾಗ ಒಂದೊಂದೇ ಹೆಜ್ಜೆ ಮುಂದೆ ಮುಂದೆ ಪ್ರಗತಿ ಹೊಂದುತ್ತದೆ. ಅತಿ ಬುದ್ಧಿವಂತನಾದ ಮನುಷ್ಯನು ಮರಣಾನಂತರ ಏನು ಎಂದು ಪ್ರಶ್ನೆ ಮಾಡುತ್ತಾನೆ, ಮಂದ ಮತಿಗಳು ಕಡಮೆ ಪ್ರಶ್ನೆ ಮಾಡುತ್ತಾರೆ. ಆದರೆ ಬುದ್ಧಿವಂತರು ಮತ್ತಷ್ಟು ಚುರುಕಾದ ಪ್ರಶ್ನೆಗಳನ್ನೇ ಮಾಡುತ್ತ ಹೋಗುತ್ತಾರೆ. ಇಡೀ ವಿಶ್ವದ ಅತಿ ದೊಡ್ಡ ರಾಜನಾದ ಪರೀಕ್ಷಿತ ಮಹಾರಾಜನು ಅತ್ಯಂತ ಬುದ್ಧಿವಂತ ಮನುಷ್ಯರಲ್ಲಿ ಒಬ್ಬನಾಗಿದ್ದ. ಅವನು ಅಕಸ್ಮಾತ್ತಾಗಿ ಸರ್ಪವು ಕಚ್ಚಿ ಏಳು ದಿನಗಳಲ್ಲಿ ಸಾಯಬೇಕೆಂಬ ಬ್ರಾಹ್ಮಣನ ಶಾಪಕ್ಕೆ ಗುರಿಯಾದ. ಅವನಿಗೆ ಶಾಪ ಕೊಟ್ಟ ಬ್ರಾಹ್ಮಣನು ಇನ್ನೂ ಎಳೆಯ ಹುಡುಗನಾಗಿದ್ದ. ಆದರೂ ಅವನು ಬಲು ಪ್ರಭಾವ ಶಾಲಿಯಾಗಿದ್ದ. ಅವನು ಆ ದೊಡ್ಡರಾಜನ ಮಹತ್ವವನ್ನು ಅರಿತಿರಲಿಲ್ಲ. ಅಂತೆಯೇ ಅವನು ದಡ್ಡತನದಿಂದ ಆ ರಾಜನು ಸರ್ಪಕಚ್ಚಿ ಏಳು ದಿನಗಳಲ್ಲಿ ಸಾಯಬೇಕೆಂದು ಶಪಿಸಿದ. ಆ ಬಳಿಕ ಆ ರಾಜನಿಂದ ಅವಮಾನಿತನಾದ ಆ ಹುಡುಗನ ತಂದೆಯು ಬಹಳಷ್ಟು ಶೋಕಿಸಿದ. ರಾಜನಿಗೆ ಆ ದುರ್ದೈವದ ಶಾಪವು ತಿಳಿದೊಡನೆಯೆ ಅವನು ತನ್ನ ಅರಮನೆಯನ್ನು ತ್ಯಜಿಸಿ, ರಾಜಧಾನಿಗೆ ಹತ್ತಿರದಲ್ಲಿಯೇ ಇದ್ದ ಗಂಗಾ ತಟಾಕಕ್ಕೆ ತನ್ನ ಆಸನ್ನ ಮರಣದ ಸಿದ್ಧತೆಗಾಗಿ ತೆರಳಿದ. ಅವನು ಬಲುದೊಡ್ಡ ರಾಜನಾಗಿದ್ದುದರಿಂದ, ಆ ರಾಜನು ತನ್ನ ಭೌತಿಕ ದೇಹ ವಿಸರ್ಜನೆಗೆ ಪೂರ್ವಭಾವಿಯಾಗಿ ಪ್ರಾಯೋಪವೇಶನಕ್ಕೆ ಕುಳಿತ ಸ್ಥಳಕ್ಕೆ ಸರಿಸುಮಾರು ಎಲ್ಲ ದೊಡ್ಡ ಋಷಿಗಳು, ಮಹಾ ವಿದ್ವಾಂಸರು ಬಂದು ಸೇರಿದರು. ಕೊನೆಯಲ್ಲಿ ಆ ಕಾಲದ ಅತ್ಯಂತ ಕಿರಿಯ ಯೋಗಿಯಾದ ಶುಕ ಮುನಿಯೂ ಅಲ್ಲಿಗೆ ಬಂದರು. ಅವರ ಮಹಾತಂದೆಯವರು ಅಲ್ಲಿಯೇ ಇದ್ದರೂ ಕೂಡ, ಶುಕ ಮುನಿಯವರೇ ಸಭಾಧ್ಯಕ್ಷತೆಯನ್ನು ವಹಿಸುವಂತೆ ಸರ್ವಾನುಮತದಿಂದ ನಿರ್ಣಯಿಸಲಾಯಿತು. ರಾಜನು ವಿನಯಪೂರ್ವಕವಾಗಿ ಶುಕ ಮುನಿಯವರಿಗೆ ಗೌರವದ ಮುಖ್ಯ ಸ್ಥಾನವನ್ನು ನೀಡಿ, ಅಂದಿನಿಂದ ಏಳನೆಯ ದಿನ ತಾನು ಇಹಲೋಕವನ್ನು ಬಿಡುವ ಕುರಿತು ಸುಸಂಗತವಾದ ಪ್ರಶ್ನೆಯನ್ನು ಮಾಡಿದ. ಮಹಾಭಕ್ತರಾದ ಪಾಂಡವರ ವಂಶಜನಾದ ಈ ಮಹಾರಾಜನು ಆ ಮಹಾ ಯೋಗಿಗಳಾದ ಶುಕ ಮುನಿಗಳ ಮುಂದೆ ಕೆಲವು ಪ್ರಶ್ನೆಗಳನ್ನು ಇಟ್ಟನು. "ಮಹಾಸ್ವಾಮಿ, ತಾವು ಮಹಾ ಜ್ಞಾನಿಗಳಲ್ಲಿ ಶ್ರೇಷ್ಠರಾದವರು, ಆದುದರಿಂದ ಈ ಸಮಯದಲ್ಲಿ ನನ್ನ ಕರ್ತವ್ಯಗಳೇನು ಎಂಬುದನ್ನು ವಿನಯಪೂರ್ವಕವಾಗಿ ತಮ್ಮಲ್ಲಿ ವಿಜ್ಞಾಪಿಸಿಕೊಳ್ಳಬಯಸುತ್ತೇನೆ. ನಾನು ಮರಣೋನ್ಮುಖನಾಗಿದ್ದೇನೆ. ಈ ಸಂದಿಗ್ಧ ಸಮಯದಲ್ಲಿ ನಾನೇನು ಮಾಡುಬೇಕು ? ಭಗವನ್ ದಯವಿಟ್ಟು ನನಗೆ ಉಪದೇಶ ಮಾಡಿ. ನಾನು ಏನು ಕೇಳಬೇಕು, ನಾನು ಯಾರನ್ನು ಅರ್ಚಿಸಬೇಕು ಅಥವಾ ನಾನು ಈಗ ಯಾರ ಸ್ಮರಣೆ ಮಾಡಬೇಕು ? ನಿಮ್ಮಂಥ ಮಹಾಯೋಗಿಗಳು ಗೃಹಸ್ಥರ ಮನೆಯಲ್ಲಿ ಅನವಶ್ಯಕವಾಗಿ ಉಳಿದುಕೊಳ್ಳುವವರಲ್ಲ. ನನ್ನ ಪೂರ್ವಾರ್ಜಿತ ಪುಣ್ಯದಿಂದ ನನ್ನ ಮರಣ ಕಾಲದಲ್ಲಿ ತಾವಿಲ್ಲಿಗೆ ದಯಮಾಡಿಸಿದ್ದೀರಿ. ಆದುದರಿಂದ ದಯವಿಟ್ಟು ನನಗೆ ಈ ಸಂದಿಗ್ಧ ಕಾಲದಲ್ಲಿ ಉಪದೇಶ ನೀಡಬೇಕು."

ಶುಕಮುನಿಗಳು ರಾಜನಿಂದ ಹೀಗೆ ಪ್ರಶ್ನಿತರಾಗಿ ಅಧಿಕಾರವಾಣಿಯಿಂದ ಅವನ ಪ್ರಶ್ನೆಗಳಿಗೆ ಉತ್ತರಿಸಿದರು. ಶುಕಮುನಿಗಳು ಮಹಾ ಜ್ಞಾನಿಗಳಾಗಿದ್ದರು. ಅವರು ವೇದಗಳ

ಮೂಲ ಕರ್ತೃವಾದ ಬಾದರಾಯಣರ ಎಂದರೆ ವೇದವ್ಯಾಸರ ಪುಣ್ಯಪುತ್ರರಾಗಿ ದೈವಾಂಶ ಸಂಭೂತರಾದ ಘನವಿದ್ವಾಂಸರಾಗಿದ್ದರು. ಶುಕ ಮುನಿಗಳು, "ಪ್ರಿಯ ರಾಜನೆ ನಿನ್ನ ಪ್ರಶ್ನೆಯು ಅತ್ಯಂತ ಸುಸಂಬದ್ಧವಾಗಿದೆ. ಅದು ಎಲ್ಲರಿಗೂ ಎಲ್ಲ ಕಾಲಕ್ಕೂ ಪ್ರಯೋಜನಕಾರಿಯಾಗಿದೆ. ಇಂಥ ಪ್ರಶ್ನೆಗಳು ಅತ್ಯಂತ ಶ್ರೇಷ್ಠ ಪ್ರಶ್ನೆಗಳಾಗಿದ್ದು ಅವು ವೇದಾಂತ ದರ್ಶನದ ಉಪದೇಶಗಳಿಂದ ದೃಢೀಕೃತವಾಗಿರುವುದರಿಂದ, ಸುಸಂಗತವಾದುವೇ ಆಗಿವೆ ಮತ್ತು **ಆತ್ಮವಿತ್-ಸಮ್ಮತಃ** ಕೂಡಾ ಆಗಿವೆ. ಎಂದರೆ ಮುಕ್ತ ಜೀವರು ತಮ್ಮ ಪೂರ್ಣ ಸ್ವರೂಪ ಜ್ಞಾನವನ್ನು ಹೊಂದಿದವರಾಗಿದ್ದು ಜನ್ಮಾಂತರವನ್ನು ಕುರಿತು ಇನ್ನೂ ಹೆಚ್ಚಿನ ವಿಷಯಗಳನ್ನು ತಿಳಿದುಕೊಳ್ಳಲು ಇಂಥ ಸುಸಂಬದ್ಧ ಪ್ರಶ್ನೆಗಳನ್ನು ಮಾಡುತ್ತಾರೆ" ಎಂದು ಹೇಳಿದರು.

ಶ್ರೀಮದ್ಭಾಗವತವು ವೇದವ್ಯಾಸ ರಚಿಸಿದ ಮಹಾ ವೇದಾಂತ ಸೂತ್ರಗಳ ಮೇಲಿನ (ಅಥವಾ ಶಾರೀರಕ ಸೂತ್ರಗಳ ಮೇಲಿನ) ಯಥಾರ್ಥವಾದ ವ್ಯಾಖ್ಯಾನವಾಗಿದೆ. ವೇದಾಂತ ಸೂತ್ರಗಳು ವೈದಿಕ ಸಾಹಿತ್ಯದ ಅಗ್ರಸ್ಥಾನದಲ್ಲಿವೆ. ಮತ್ತು ಅವು ದಿವ್ಯ ಆಧ್ಯಾತ್ಮ ಜ್ಞಾನದ ವಿಷಯದಲ್ಲಿ ಆಧಾರ ಭೂತವಾದ ಪ್ರಶ್ನೆಗಳನ್ನು ಒಳಗೊಂಡಿವೆ. ವೇದವ್ಯಾಸರು ಈ ಸೂತ್ರ ಗ್ರಂಥವನ್ನು ರಚಿಸಿದ ಮೇಲೂ ಅವರಿಗೆ ತೃಪ್ತಿಯಾಗಲಿಲ್ಲ. ಒಂದು ಸಲ ಅವರು ತಮ್ಮ ಗುರುಗಳಾದ- ನಾರದರನ್ನು ಕಂಡಾಗ ವೇದವ್ಯಾಸ ಪರಮ ದೇವೋತ್ತಮ ಪುರುಷನನ್ನು ಕುರಿತು ವಿವರಿಸುವಂತೆ ನಾರದರು ಅವರಿಗೆ ಸೂಚನೆ ನೀಡಿದರು. ಈ ಸೂಚನೆ ಬಂದ ತರುವಾಯ ವೇದವ್ಯಾಸರು ಭಕ್ತಿಯೋಗ ತತ್ವಾನುಸಾರವಾಗಿ ಧ್ಯಾನ ಮಾಡಿದರು. ಅದರಿಂದ ಅವರಿಗೆ ಪರಮಾತ್ಮ ತತ್ವ ಮತ್ತು ಮಾಯೆ ಇವುಗಳ ಸ್ಪಷ್ಟಜ್ಞಾನವು ಲಭಿಸಿತು. ಈ ತತ್ವಗಳ ಪರಿಪೂರ್ಣ ಜ್ಞಾನ ಸಂಪಾದನೆ ಮಾಡಿ ಅವರು ಶ್ರೀಮದ್ಭಾಗವತವನ್ನು ರಚಿಸಿದರು. ಶ್ರೀಮದ್ಭಾಗವತವು ಪರೀಕ್ಷಿತ ಮಹಾರಾಜನ ಜೀವನವನ್ನು ಕುರಿತ ವಾಸ್ತವಿಕ ಐತಿಹಾಸಿಕ ಸಂಗತಿಗಳಿಂದ ಪ್ರಾರಂಭವಾಗುತ್ತದೆ.

ವೇದಾಂತ ಸೂತ್ರವು ಬ್ರಹ್ಮನನ್ನು ಕುರಿತ ಮೂಲ ಜಿಜ್ಞಾಸೆಯಿಂದಲೇ ಪ್ರಾರಂಭವಾಗುತ್ತದೆ (**ಅಥಾತೋ ಬ್ರಹ್ಮಜಿಜ್ಞಾಸಾ**). "ಮನುಷ್ಯನು ಬ್ರಹ್ಮನನ್ನು ಕುರಿತು ಜಿಜ್ಞಾಸೆ ಮಾಡಬೇಕು."

ಮನುಷ್ಯನು ಜೀವನದ ಪೂರ್ಣ ಚೈತನ್ಯ ಹೊಂದಿರುವಾಗ, ಅವನು ಮುಂದೆ ಎದುರಿಸಬೇಕಾದ ಮರಣದ ನಗ್ನ ಸತ್ಯವನ್ನು ಮರೆತಿರುತ್ತಾನೆ. ಹೀಗೆ ಮೂರ್ಖ ಮಾನವನು ಜೀವನದ ನಿಜವಾದ ಸಮಸ್ಯೆಗಳ ಬಗ್ಗೆ ಸುಸಂಗತ ಜಿಜ್ಞಾಸೆಯನ್ನೇ ಮಾಡುವುದಿಲ್ಲ. ಪ್ರತಿಯೊಬ್ಬನೂ ತನ್ನ ಕಣ್ಣೆದುರಿಗೆ ಪ್ರತಿಕ್ಷಣವೂ ಸಾವನ್ನು ಕಾಣುತ್ತಿದ್ದರೂ ತಾನು ಸಾಯುವುದಿಲ್ಲವೆಂದೇ ಭಾವಿಸುತ್ತಾನೆ. ಪಾಶವೀಯತೆ ಮತ್ತು ಮಾನವೀಯತೆಯ ವ್ಯತ್ಯಾಸವಿರುವುದೇ ಇಲ್ಲಿ. ಆಡಿನಂಥಹ ಪಶುವಿಗೆ ತನ್ನ ಮರಣದ ಜ್ಞಾನವಿರುವುದಿಲ್ಲ. ಅದರ ಸೋದರ ಆಡನ್ನು ವಧೆ ಮಾಡುತ್ತಿದ್ದರೂ ತನ್ನ ಮುಂದೆ ಹಾಕಿದ ಹಸಿರು ಹುಲ್ಲಿನಿಂದ ಆಕರ್ಷಿತವಾಗಿ, ಅನಂತರದ ತನ್ನ ವಧೆಗಾಗಿ ಅಮಾಯಕವಾಗಿ ಕಾದುನಿಂತಿರುತ್ತದೆ. ಇದಕ್ಕೆ ಬದಲಾಗಿ ಒಬ್ಬ ಮನುಷ್ಯನು, ವೈರಿಯು ತನ್ನ ಸಂಗಡಿಗನನ್ನು ಕೊಲೆ ಮಾಡುವುದನ್ನು ಕಂಡರೆ, ಆ ತನ್ನ ಸೋದರನ ಜೀವ ಉಳಿಸಲು ಕಾದುತ್ತಾನೆ, ಅಥವಾ ತನ್ನ ಪ್ರಾಣ ಉಳಿಸಿಕೊಳ್ಳಲು ಅಲ್ಲಿಂದ ಓಡುತ್ತಾನೆ. ಮನುಷ್ಯನಿಗೂ ಆಡಿಗೂ ಇರುವುದು ಇದೇ ವ್ಯತ್ಯಾಸ.

ಬುದ್ಧಿವಂತನಾದವನು ತನ್ನ ಜನ್ಮದೊಂದಿಗೆ ಮರಣವೂ ಹುಟ್ಟಿಕೊಂಡಿದೆಯೆಂಬುದನ್ನು ಅರಿತಿರುತ್ತಾನೆ. ತಾನು ಪ್ರತಿಕ್ಷಣವೂ ಸಾಯುತ್ತಿರುವೆನೆಂಬುದು ಅವನಿಗೆ ತಿಳಿದಿರುತ್ತದೆ. ಅವನ ಆಯುಷ್ಯ ಪ್ರಮಾಣವು ಮುಗಿದಾಗ ಕೊನೆಯ ಹಂತವು ತಲುಪುತ್ತದೆ. ಆದುದರಿಂದ ಅವನು ಮುಂದಿನ ಜನ್ಮದ ಸಿದ್ಧತೆಯನ್ನಾಗಲಿ ಅಥವಾ ಜನನ ಮರಣಗಳ ಪುನರಾವೃತ್ತಿಯ ಜಾಡ್ಯದಿಂದ ಮುಕ್ತನಾಗುವ ಪ್ರಯತ್ನವನ್ನಾಗಲಿ ಮಾಡಿಕೊಳ್ಳುತ್ತಾನೆ.

ಮೂಢ ಮಾನವನು, ಈ ಮಾನವ ದೇಹವು ಪ್ರಕೃತಿನಿಯಮಾನುಸಾರ ಹಿಂದೆ ಒದಗಿದ ಅನೇಕ ಜನನ ಮರಣಗಳ ತರುವಾಯ ಲಭಿಸಿದೆ ಎಂಬುದನ್ನು ಅರಿಯುವುದಿಲ್ಲ. ಜೀವ ಸ್ವರೂಪವು ಅನಾದಿನಿತ್ಯವಾದುದು, ಅದಕ್ಕೆ ಜನನ ಮರಣವೆಂಬುದಿಲ್ಲವೆಂಬುದನ್ನೂ ಅವನು ಅರಿತಿರುವುದಿಲ್ಲ. ಜನನ, ಮರಣ, ವೃದ್ಧಾಪ್ಯ ಮತ್ತು ರೋಗಗಳು ಜೀವನಿಗೆ ಹೊರಗಿನಿಂದ ಬಂದವುಗಳು, ಅವು ಅವನ ಭೌತಿಕ ಪ್ರಕೃತಿಯ ಸಂಬಂಧದಿಂದ ಮತ್ತು ಅವನು ತನ್ನ ಅನಾದಿನಿತ್ಯವಾದ ದೈವೀ ಅಸ್ತಿತ್ವವನ್ನೂ ಮತ್ತು ಪರಮಾತ್ಮನೊಂದಿಗೆ ಗುಣಾತ್ಮಕ ಏಕತೆಯನ್ನೂ ಮರೆತುದರಿಂದ ಬಂದಿರುತ್ತವೆ.

ಮಾನವ ಜೀವನ ಬರುವುದೇ ಜೀವನು ತನ್ನ ಅನಾದಿನಿತ್ಯವಾದ ಸ್ವರೂಪದ ಸಂಗತಿಯನ್ನು ಅಥವಾ ಸತ್ಯವನ್ನು ಅರಿತುಕೊಳ್ಳುವುದಕ್ಕಾಗಿ. ಅಂತೆಯೇ ವೇದಾಂತ ಸೂತ್ರವು ಪ್ರಾರಂಭದಿಂದಲೇ ನಾವು ಅಮೂಲ್ಯವಾದ ಮಾನವ ಜನ್ಮ ಪಡೆದಿರುವುದರಿಂದ ಪರಮ ಸತ್ಯ ಸ್ವರೂಪನಾದ ಬ್ರಹ್ಮನು ಏನೆಂಬುದನ್ನು ಕುರಿತು ವಿಚಾರಿಸುವುದು ನಮ್ಮ ಕರ್ತವ್ಯವಾಗಿದೆ— ಎಂದು ಸೂಚಿಸುತ್ತದೆ.

ಸಾಕಷ್ಟು ಬುದ್ಧಿವಂತನಲ್ಲದ ಮನುಷ್ಯನು ಈ ದಿವ್ಯ ಜೀವನವನ್ನು ಕುರಿತು ಜಿಜ್ಞಾಸೆಯನ್ನೇ ಮಾಡುವುದಿಲ್ಲ; ಅದಕ್ಕೆ ಪ್ರತಿಯಾಗಿ ಅವನ ಹೊರ ಅಸ್ತಿತ್ವಕ್ಕೆ ಸಂಬಂಧಿಸಿರದ ಅನೇಕ ಅಸಂಗತ ವಿಷಯಗಳನ್ನು ಕುರಿತು ವಿಚಾರ ಮಾಡುತ್ತಾನೆ. ತನ್ನ ಜೀವನದ ಪ್ರಾರಂಭದಿಂದಲೇ ತನ್ನ ತಾಯಿ, ತಂದೆ, ಗುರುಗಳು, ಪ್ರಾಧ್ಯಾಪಕರು, ಗ್ರಂಥಗಳು ಮತ್ತು ಇನ್ನಿತರ ಅನೇಕ ಮೂಲಗಳಿಂದ ತಿಳಿದುಕೊಳ್ಳಲು ಯತ್ನಿಸುತ್ತಾನೆ. ಆದರೆ ಅವನ ನಿಜವಾದ ಜೀವನದ ಬಗ್ಗೆ ಅವನಿಗೆ ಸರಿಯಾದ ತಿಳಿವಳಿಕೆ ದೊರೆಯುವುದಿಲ್ಲ.

ಮೇಲೆ ಹೇಳಿದಂತೆ ಪರೀಕ್ಷಿತ ಮಹಾರಾಜನಿಗೆ ಏಳು ದಿನಗಳೊಳಗಾಗಿ ಮರಣ ಸಂಭವಿಸುವುದೆಂದು ಎಚ್ಚರಿಕೆ ನೀಡಲಾಗಿತ್ತು. ಅವನು ಕೂಡಲೇ ತನ್ನ ಮುಂದಿನ ಸಾಧನಕ್ಕಾಗಿ ಸಿದ್ಧತೆ ಮಾಡಲು ಅರಮನೆಯನ್ನು ಬಿಟ್ಟು ಹೊರಟನು. ರಾಜನಿಗೆ ಮರಣಕ್ಕೆ ಸಿದ್ಧನಾಗಲು ಕನಿಷ್ಠ ಏಳು ದಿನಗಳ ಅವಕಾಶವಾದರೂ ಸಿಕ್ಕಿತ್ತು. ನಮಗಾದರೋ, ಮರಣ ಬರುವುದು ಖಂಡಿತ ಎಂದು ಗೊತ್ತಿದ್ದರೂ, ಆ ದಿನದ ಬಗ್ಗೆ ನಮಗೆ ಯಾವ ಸೂಚನೆಯೂ ಇಲ್ಲ. ಮರುಕ್ಷಣವೇ ನಾನು ಸಾಯುಬಹುದೆಂಬುದು ನನಗೆ ತಿಳಿದಿಲ್ಲ. ಮಹಾತ್ಮಾಗಾಂಧಿಯಂಥ ದೊಡ್ಡ ಮನುಷ್ಯನಿಗೂ ಕೂಡ ತಾನು ಮುಂದೆ ಐದು ನಿಮಿಷಗಳಲ್ಲಿ ಸಾಯುವೆನೆಂಬುದು ತಿಳಿದಿರಲಿಲ್ಲ, ಅವರ ಸಂಗಡಿಗರಿಗೂ ಅದು ತಿಳಿಯಲಿಲ್ಲ. ಹೀಗಿದ್ದೂ ಈ ದೊಡ್ಡವರೆಲ್ಲ ತಾವು ಮಹಾ ಜನನಾಯಕರೆಂದು ತಿಳಿದುಕೊಂಡಿರುತ್ತಾರೆ.

ಜೀವನ ಮತ್ತು ಮರಣಗಳ ಬಗ್ಗೆ ಇರುವ ಅಜ್ಞಾನವೇ ಪ್ರಾಣಿಗೂ ಮನುಷ್ಯನಿಗೂ ಇರುವ ವ್ಯತ್ಯಾಸ. ನಿಜವಾದ ಮನುಷ್ಯನು ತಾನು ಏನು, ತಾನು ಎಲ್ಲಿಂದ ಬಂದ, ಮರಣಾನಂತರ ಎಲ್ಲಿಗೆ ಹೋಗುತ್ತಾನೆ ? ತನಗೆ ಇಷ್ಟವಿಲ್ಲದಿದ್ದರೂ ತನ್ನನ್ನು ಏಕೆ ತಾಪತ್ರಯಗಳಿಗೆ ಗುರಿಪಡಿಸಲಾಗಿದೆ ? ಎಂಬ ಬಗ್ಗೆ ಜಿಜ್ಞಾಸೆ ಮಾಡುತ್ತಾನೆ. ಮನುಷ್ಯನು ಬಾಲ್ಯದಿಂದಲೇ ಅನೇಕಾನೇಕ ವಿಷಯಗಳ ಬಗ್ಗೆ ವಿಚಾರ ಮಾಡುತ್ತಾನೆ. ಆದರೆ ಅವನು ಜೀವನದ ನಿಜವಾದ ಸಾರವೇನೆಂಬುದರ ಬಗ್ಗೆ ವಿಚಾರ ಮಾಡುವುದಿಲ್ಲ. ಇದೇ ಪಶುತ್ವ. ಪ್ರತಿಯೊಂದು ಜೀವಂತ ಪ್ರಾಣಿಯೂ ತಿನ್ನುತ್ತದೆ, ನಿದ್ರಿಸುತ್ತದೆ, ಭಯಪಡುತ್ತದೆ, ಸಂಭೋಗಿಸುತ್ತದೆ. ಈ ನಾಲ್ಕು ಪಶುಸಹಜ ಆವಶ್ಯಕತೆಗಳ ಮಟ್ಟಿಗೆ ಮನುಷ್ಯನಿಗೂ ಪಶುವಿಗೂ ಯಾವ ವ್ಯತ್ಯಾಸವಿಲ್ಲ. ಆದರೆ ಅನಾದಿ ನಿತ್ಯವಾದ ಜೀವನದ ಬಗ್ಗೆ ಮತ್ತು ಬ್ರಹ್ಮನ ಬಗ್ಗೆ ಜಿಜ್ಞಾಸೆ ಮಾಡಲು ಮಾನವ ಜನ್ಮದಲ್ಲಿ ಮಾತ್ರ ಸಾಧ್ಯ. ಅನಾದಿ ನಿತ್ಯವಾದ ಜೀವನವನ್ನು ಕುರಿತು ಸಂಶೋಧನೆ ಮಾಡಲೋಸುಗುವೇ ಮಾನವ ಜನ್ಮ ದೊರೆತಿದೆ ಮತ್ತು ಈ ಸಂಶೋಧನೆ ಈ ಜನ್ಮದಲ್ಲಿಯೇ ನಡೆಯಬೇಕು ಇಲ್ಲವಾದರೆ ಅದು ಸಾಧ್ಯವೇ ಇಲ್ಲ ಎಂದು ವೇದಾಂತ ಸೂತ್ರ ತಿಳಿಸುತ್ತದೆ. ಜೀವನದ ಈ ಸುಸಂಗತ ವಿಷಯಗಳ ಬಗ್ಗೆ ಮನುಷ್ಯನೇ ಜಿಜ್ಞಾಸೆ ಮಾಡದೆ ಹೋದರೆ, ಅಂಥ ಮನುಷ್ಯನು ಪ್ರಕೃತಿ ನಿಯಮಗಳಿಗೆ ಬದ್ಧನಾಗಿ ಮತ್ತೆ ಪಶುಯೋನಿಗಳಿಗೆ ಹೋಗುವುದು ಶತಸಿದ್ಧ. ಭೌತಿಕ ವಿಜ್ಞಾನದಲ್ಲಿ ಎಂದರೆ ತಿನ್ನುವುದರಲ್ಲಿ, ನಿದ್ರಿಸುವುದರಲ್ಲಿ, ಭಯಪಡುವುದರಲ್ಲಿ ಮತ್ತು ಸಂಭೋಗದಲ್ಲಿ–ಮುಂದುವರಿದಿರುವ ಮೂಢ ಮಾನವನು ಕೂಡ ಪ್ರಕೃತಿ ನಿಯಮಾನುಸಾರ ಒದಗುವ ಕರಾಳ ಮೃತ್ಯುವಿನ ಕೈಗಳಿಂದ ತಪ್ಪಿಸಿಕೊಳ್ಳಲಾರ. ಪ್ರಕೃತಿ ನಿಯಮಗಳು ಸತ್ವ, ರಾಜಸ ಮತ್ತು ತಾಮಸ ಈ ತ್ರಿಗುಣಗಳಿಂದ ಕಾರ್ಯ ಪ್ರವೃತ್ತವಾಗುತ್ತವೆ. ಸತ್ವಭಾವದಲ್ಲಿರುವವರಿಗೆ ಜೀವನದಲ್ಲಿ ಉತ್ತಮ ಸ್ಥಿತಿ, ಆಧ್ಯಾತ್ಮಿಕ ಉನ್ನತಿ ದೊರೆಯುತ್ತದೆ. ರಾಜಸಸ್ವಭಾವದಲ್ಲಿರುವವರು ಭೌತಿಕ ಜಗತ್ತಿನಲ್ಲಿ ಇದ್ದಲ್ಲಿಯೇ ಉಳಿದುಕೊಂಡಿರುತ್ತಾರೆ ಮತ್ತು ತಾಮಸರು ಕೆಳಯೋನಿಗಳಿಗೆ ಹೋಗುವುದರಲ್ಲಿ ಸಂದೇಹವೇಇಲ್ಲ.

ಆಧುನಿಕ ಶಿಕ್ಷಣವು ಜೀವನದ ಅತ್ಯವಶ್ಯವಾದ ತತ್ವಗಳ ಜಿಜ್ಞಾಸೆಯ ವಿಷಯದಲ್ಲಿ ಯಾವ ತರಬೇತಿಯನ್ನೂ ನೀಡುವುದಿಲ್ಲ. ಆದುದರಿಂದ, ಇಂದಿನ ಮಾನವ ನಾಗರಿಕತೆಯ ವ್ಯವಸ್ಥೆಯು ಅಪಾಯಕಾರಿಯಾಗಿದೆ. ಪಶುಗಳಂತೆ ತಾವೂ ಪ್ರಕೃತಿ ನಿಯಮಾನುಸಾರ ಕೊಲ್ಲಲ್ಪಡುತ್ತಾರೆ ಎಂಬುದನ್ನು ಜನ ತಿಳಿದಿಲ್ಲ. ಕೊಲೆಮನೆಯಲ್ಲಿ ಕಾಯುತ್ತಿರುವ ಆಡಿನ ಹಾಗೆ ಇವರೂ ಹಿಡಿ ಹಸಿರು ಹುಲ್ಲಿನಿಂದಲೋ ಅಥವಾ ಕ್ಷಣ ಭಂಗುರವಾದ ಭೋಗದಿಂದಲೋ ತೃಪ್ತರಾಗುತ್ತಾರೆ. ಮಾನವ ಜೀವಿತದ ಈ ಸ್ಥಿತಿಯನ್ನು ಗಮನಿಸಿ, ಮರಳಿ ದೇವತ್ವದೆಡೆಗೆ ಎಂಬ ಸಂದೇಶದ ಮೂಲಕ ಮಾನವರನ್ನು ವಿನಾಶದಿಂದ ರಕ್ಷಿಸಲು ನಾವು ನಮ್ಮಿಂದಾದ ಕಿಂಚಿತ್ ಪ್ರಯತ್ನ ಮಾಡುತ್ತಿದ್ದೇವೆ. ಈ ಪದ್ಧತಿಯು ತೋರಿಕೆಯದಲ್ಲ. ಸತ್ಯಯುಗವೆಂಬುದೇನಾದರೂ ಇರುವುದಾದರೆ, ಮರಳಿ ದೇವತ್ವಡೆಗೆ ಎಂಬ ಈ ಸಂದೇಶವೇ ಆ ಯುಗದ ನಾಂದಿ ಎಂದು ಹೇಳಬಹುದು.

ಶುಕ ಮುನಿಯ ಪ್ರಕಾರ, ಕೊಲೆಮನೆಯ ಆಡಿನ ಹಾಗೆ ಬದ್ಧನಾದ ಜೀವಿಯ **ಗ್ರಹಮೇಧಿಯು** ಪಶು ಜೀವನದ ಸಮಸ್ಯೆಯ ವಿಷಯಗಳಲ್ಲಿ –ಎಂದರೆ ಆಹಾರ ನಿದ್ರಾಭಯ

ಮೈಥುನಾದಿ ವಿಷಯಗಳಲ್ಲಿ, ಕುಟುಂಬ, ಸಮಾಜ, ಸಮುದಾಯ, ರಾಷ್ಟ್ರ ಅಥವಾ ಇಡೀ ಮಾನವ ಕುಲದ ಜಂಜಾಟವನ್ನು ಕಟ್ಟಿಕೊಂಡು ಹೆಣಗುತ್ತಿದ್ದಾನೆ. ಬ್ರಹ್ಮಜ್ಞಾನವಿಲ್ಲದ ಜೀವನವು ಪಶು ಜೀವನಕ್ಕಿಂತ ಉತ್ತಮವಾದುದಲ್ಲ ಎಂಬುದು ಅವನಿಗೆ ತಿಳಿದೇ ಇಲ್ಲ. ಅವನು ಭೌತಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಇದೇ ಬಗೆಯ ಇನ್ನಿತರ ಅನೇಕ ತಾತ್ಕಾಲಿಕ ಪ್ರಾಪಂಚಿಕ ವಿಷಯಗಳನ್ನು ಕುರಿತು ವಿಚಾರ ಮಾಡಿರಬಹುದು. ಆದರೆ ದಿವ್ಯ ಜೀವನ ತತ್ವಗಳ ಬಗ್ಗೆ ಅವನು ವಿಚಾರಪರನಾಗಿಲ್ಲವಾದರೆ, ಅವನು ನಿಯಂತ್ರಣವರಿಯದ ಇಂದ್ರಿಯಾರ್ಥಗಳಿಂದ ಸೆಳೆಯಲ್ಪಟ್ಟ ಕುರುಡನೆಂದೇ ಪರಿಗಣಿಸಬೇಕಾಗುವುದು. ಅಂಥ ಮನುಷ್ಯನು ಗುಂಡಿಗೆ ಬೀಳುವುದು ಖಂಡಿತ. ಇದೇ **ಗೃಹಮೇಧಿಯ** ಚಿತ್ರ.

**ಗೃಹಮೇಧಿ** ಅಲ್ಲದವನೇ ಗೃಹಸ್ಥ. 'ಗೃಹಸ್ಥಾಶ್ರಮವು' ಆಧ್ಯಾತ್ಮ ಪರವಾದ ಕುಟುಂಬ ಜೀವನವು, ವೈರಾಗ್ಯತಾಳಿದ ಸನ್ಯಾಸಿಯ ಜೀವನವಿದ್ದಂತೆಯೇ ಸರಿ. ಒಬ್ಬನು ಗೃಹಸ್ಥನಾಗಿರಲಿ ಅಥವಾ ಸನ್ಯಾಸಿಯಾಗಿರಲಿ, ಅದು ಮಹತ್ವದ್ದಲ್ಲ. ಅವನು ಮಾಡಬೇಕಾದ ಜಿಜ್ಞಾಸೆ ಮಾಡುತ್ತಿದ್ದಾನೆಯೇ ಎಂಬುದು ಮುಖ್ಯಾಂಶ. ಜಿಜ್ಞಾಸಾಪರನಲ್ಲದ ಸನ್ಯಾಸಿ ಸುಳ್ಳು ಸನ್ಯಾಸಿ. ಇಂಥ ಜಿಜ್ಞಾಸೆ ಮಾಡುವ ಗೃಹಸ್ಥಾಶ್ರಮಿಯೇ ಸಾತ್ವಿಕನು. ಗೃಹಮೇಧಿಯು ಕೇವಲ ಆಹಾರ ನಿದ್ರಾ ಭಯ ಮೈಥುನಾದಿ ಭೌತಿಕ ಜೀವನಾವಶ್ಯಕತೆಗಳಲ್ಲಿಯೇ ಆಸಕ್ತನಾಗಿರುತ್ತಾನೆ. ಪ್ರಕೃತಿ ನಿಯಮಾನುಸಾರ ಅವನ ಜೀವನ ದುಃಖದುಮ್ಮಾನಗಳಿಂದ ತುಂಬಿರುತ್ತದೆ. ಗೃಹಸ್ಥನ ಜೀವನವು ಸುಖಮಯವಾಗಿರುತ್ತದೆ. ಆದರೆ ಇಂದಿನ ಆಧುನಿಕ ಮಾನವ ನಾಗರಿಕತೆಯಲ್ಲಿ ಗೃಹಮೇಧಿಗಳೇ ಗೃಹಸ್ಥರೆಂದು ತೋರಿಸಿಕೊಳ್ಳುತ್ತಿದ್ದಾರೆ. ಅಂತೆಯೇ ಯಾರು ಯಾರೆಂಬುದನ್ನು ನಾವು ತಿಳಿದುಕೊಳ್ಳಬೇಕು. ಗೃಹಮೇಧಿಗೆ ಕುಟುಂಬ ಜೀವನವೇ ಗೊತ್ತಿರುವುದಿಲ್ಲ. ಆದುದರಿಂದ ಅವನ ಜೀವನ ದುರ್ವ್ಯಸನಗಳಿಂದ ತುಂಬಿರುತ್ತದೆ. ಅವನನ್ನು ಮೀರಿದ ಶಕ್ತಿಯೊಂದು ಅವನ ಚಟುವಟಿಕೆಗಳನ್ನೆಲ್ಲ ನೋಡುತ್ತಿದೆ ಮತ್ತು ನಿಯಂತ್ರಿಸುತ್ತಿದೆ ಎಂಬ ಜ್ಞಾನ ಅವನಿಗಿರುವುದಿಲ್ಲ. ಅವನಿಗೆ ಅವನ ಭವಿಷ್ಯದ ಅರಿವೂ ಇರುವುದಿಲ್ಲ. ಗೃಹಮೇಧಿಯು ತನ್ನ ಭವಿಷ್ಯದ ಬಗ್ಗೆಯೂ ಕುರುಡನಾಗಿರುತ್ತಾನೆ. ಅವನಲ್ಲಿ ಜಿಜ್ಞಾಸಾ ಪ್ರವೃತ್ತಿಯೂ ಇರುವುದಿಲ್ಲ. ಅವನಿಗಿರುವ ಒಂದೇ ಒಂದು ಅರ್ಹತೆಯೆಂದರೆ ತನ್ನ ಈ ಕ್ಷಣಭಂಗುರ ಅಸ್ತಿತ್ವದಲ್ಲಿ ಸಂಪರ್ಕ ಹೊಂದಿದ ಮಿಥ್ಯಾವಸ್ತುಗಳ ವ್ಯಾಮೋಹ ಬಂಧನದಲ್ಲಿ ಅವನು ಸಿಲುಕಿಕೊಂಡಿರುತ್ತಾನೆ.

ಈ ಗೃಹಮೇಧಿಗಳು ರಾತ್ರಿಯಲ್ಲಿ ತಮ್ಮ ಅಮೂಲ್ಯ ಕಾಲವನ್ನು ನಿದ್ರೆಯಲ್ಲಿಯೋ ಅಥವಾ ಸಿನಿಮಾಗಳಿಗೋ ಹೇರಳವಾಗಿ ಹೆಂಗಸರಿರುವ ಅಥವಾ ಮದ್ಯದ ಹೊಳೆಹರಿಯುವ ಕ್ಲಬ್ಬುಗಳಿಗೋ ಅಥವಾ ಜೂಜಾಟದ ಮನೆಗಳಿಗೋ ಹೋಗಿ ಅಲ್ಲಿ ತಮ್ಮ ಲೈಂಗಿಕ ತೃಷೆಯ ವಿವಿಧ ಚಟಗಳನ್ನು ತೀರಿಸಿಕೊಳ್ಳುತ್ತಾರೆ. ಹಗಲಿನಲ್ಲಿ ಅವರು ತಮ್ಮ ಅಮೂಲ್ಯ ಸಮಯವನ್ನು ಧನಸಂಚಯದಲ್ಲಿ, ಅವರಿಗೆ ಸಾಕಷ್ಟು ಹಣವಿರುವುದಾದರೆ, ತಮ್ಮ ಕೌಟುಂಬಿಕ ಸುಖ ಸಾಮಾಗ್ರಿಗಳನ್ನು ಸರಿಹೊಂದಿಸಿಕೊಳ್ಳುವಲ್ಲಿ ಕಳೆಯುತ್ತಾರೆ. ಅವರ ಸಂಪಾದನೆ ಹೆಚ್ಚಿದಂತೆಲ್ಲ ಅವರ ಜೀವನ ಮಟ್ಟವೂ ಸ್ವಂತದ ಆವಶ್ಯಕತೆಗಳೂ ಹೆಚ್ಚುತ್ತ ಹೋಗುತ್ತವೆ. ಹೀಗಾಗಿ ಅವರ ವೆಚ್ಚಗಳಿಗೆ ಮಿತಿಯೇ ಇರುವುದಿಲ್ಲ. ಅವರ ತೃಪ್ತಿಗೂ ಮಿತಿಯಿರುವುದಿಲ್ಲ. ಇದರಿಂದಾಗಿ

ಆರ್ಥಿಕಾಭಿವೃದ್ಧಿಯ ಕ್ಷೇತ್ರದಲ್ಲಿ ಅಪರಿಮಿತವಾದ ಪೈಪೋಟಿ ಉಂಟಾಗುತ್ತದೆ ಮತ್ತು ಪ್ರಪಂಚದ ಯಾವ ಸಮಾಜದಲ್ಲಿಯೂ ಶಾಂತಿ ನೆಲೆಗೊಳ್ಳುವುದಿಲ್ಲ.

ಪ್ರತಿಯೊಬ್ಬನೂ ಗಳಿಸುವ ಮತ್ತು ಖರ್ಚುಮಾಡುವ ಸಮಸ್ಯೆಗಳಿಂದ ವಿಹ್ವಲನಾಗಿದ್ದಾನೆ. ಕೊನೆಗೆ ಅವನು ಪ್ರಕೃತಿ ಮಾತೆಯ ಕರುಣೆಯನ್ನೇ ಅವಲಂಬಿಸ ಬೇಕಾಗುತ್ತದೆ. ಉತ್ಪಾದನೆಯಲ್ಲಿ ಕೊರತೆಯುಂಟಾದಾಗ ಅಥವಾ ದೈವೀವಿಪತ್ತುಗಳು ಒದಗಿದಾಗ, ಯೋಜಕವಾದ ಬಡ ರಾಜಕಾರಣಿಯು ಕ್ರೂರ ನಿಸರ್ಗವೆಂದು ನಿಂದಿಸುತ್ತಾನೆ. ಅವನು ಈ ನಿಸರ್ಗ ನಿಯಮಗಳ ನಿಯಂತ್ರಕನಾರು ಎಂಬುದನ್ನು ಯೋಚಿಸುವ ಗೊಡವೆಗೇ ಹೋಗುವುದಿಲ್ಲ, ಚಾಣಾಕ್ಷತನದಿಂದ ತಪ್ಪಿಸಿಕೊಂಡು ಬಿಡುತ್ತಾನೆ. ನಿಸರ್ಗ ನಿಯಮಗಳು ಪರಮ ದೇವೋತ್ತಮ ಪುರುಷನ ನಿಯಂತ್ರಣಕ್ಕೆ ಒಳಪಟ್ಟಿವೆಯೆಂಬುದನ್ನು ಭಗವದ್ಗೀತೆಯು ವಿವರಿಸಿದೆ. ಭಗವಂತನೊಬ್ಬನೇ ಪ್ರಕೃತಿ ನಿಯಮಗಳ ನಿಯಾಮಕನು. ಮಹಾಧ್ಯೇಯ ವಾದಿಗಳಾದ ಭೌತಜ್ಞರು ಕೆಲವು ಸಲ ನಿಸರ್ಗ ನಿಯಮದ ಏಕ ದೇಶವನ್ನು ಕುರಿತು ಪರಾಮರ್ಶನವನ್ನೇನೋ ನಡೆಸುತ್ತಾರೆ, ಆದರೆ ಆ ನಿಯಮಗಳ ಮೂಲ ಕರ್ತೃಯಾರೆಂಬುದನ್ನು ಕುರಿತು ಯೋಚಿಸುವುದಿಲ್ಲ. ಅವರಲ್ಲನೇಕರು ದೇವರನ್ನು ಅಥವಾ ನಿಸರ್ಗ ನಿಯಮಗಳ ಪರಮನಿಯಾಮಕನನ್ನು ನಂಬುವುದಿಲ್ಲ. ಅದಕ್ಕೆ ಬದಲಾಗಿ, ಭೌತಿಕ ವಸ್ತುಗಳು ಯಾವ ತತ್ವಗಳ ಪ್ರಕಾರ ಪರಸ್ಪರ ಕ್ರಿಯೆಮಾಡುತ್ತವೆ ಎಂಬುದನ್ನು ವಿಚಾರಿಸುವಲ್ಲಿಯೇ ಮಗ್ನ ರಾಗಿರುತ್ತಾರೆ. ಇಂಥ ಕ್ರಿಯೆಪ್ರತಿಕ್ರಿಯೆಗಳಿಗೆ ಆದೇಶ ನೀಡುವ ಆತ್ಯಂತಿಕಶಕ್ತಿಯ ವಿಚಾರವನ್ನೇ ಮಾಡುವುದಿಲ್ಲ. ಈ ವಿಷಯದಲ್ಲಿ ಅವರು ಜಿಜ್ಞಾಸೆಯನ್ನು ಮಾಡುವುದಿಲ್ಲ. ಅವರಿಗೆ ಸಮರ್ಪಕ ಉತ್ತರಗಳು ದೊರೆಯುವುದಿಲ್ಲ. ವೇದಾಂತಸೂತ್ರದ ಎರಡನೆಯ ಸೂತ್ರವು ಯಾವನಿಂದ ಈ ಎಲ್ಲವೂ ಹುಟ್ಟಿಬಂದಿವೆಯೋ ಅವನೇ ಬ್ರಹ್ಮನು ಎಂದು ದೃಢಪಡಿಸುತ್ತ ಬ್ರಹ್ಮನ ವಿಚಾರವಾದ ಮೂಲಪ್ರಶ್ನೆಗೆ ಉತ್ತರ ನೀಡುತ್ತದೆ. ಅವನೇ ಪರಮಪುರುಷ ಎಂದೂ ಹೇಳುತ ದೆ.

ಮೂಢನಾದ ಗೃಹಮೇಧಿಯು ತನಗೆ ದೊರೆತಿರುವ ವಿಶಿಷ್ಟ ಮಾದರಿಯ ನಶ್ವರ ದೇಹದ ಬಗ್ಗೆ ಅಷ್ಟೇ ಅಜ್ಞಾನಿಯಾಗಿರುವುದಿಲ್ಲ, ನಿತ್ಯ ತನ್ನ ಜೀವನದಲ್ಲಿ ತನ್ನ ಕಣ್ಣೆದುರಿಗೆಯೇ ವಾಸ್ತವಿಕವಾಗಿ ಏನೇನು ನಡೆಯುತ್ತಿದೆ ಎಂಬ ಬಗ್ಗೆಯೂ ಅವನು ಕುರುಡನಾಗಿರುತ್ತಾನೆ. ಅವನು ತನ್ನ ತಂದೆ, ತಾಯಿ ಅಥವಾ ಸಂಬಂಧಿ ಅಥವಾ ನೆರೆಹೊರೆಯವನು ಸಾಯುವುದನ್ನು ನೋಡುತ್ತಾನೆ, ಆದರೂ ತನ್ನ ಕುಟುಂಬದ ಇತರ ಜೀವಿಗಳೂ ಸಾಯುವರೇ ಎಂಬ ಬಗ್ಗೆ ಅವನು ವಿಚಾರ ಮಾಡುವುದಿಲ್ಲ. ಕೆಲವು ಸಲ ಮಾತ್ರ ತನ್ನ ಕುಟುಂಬದ ಸದಸ್ಯರಾಗಲಿ ತಾನಾ ಗಲಿ ಇಂದಿಲ್ಲ ನಾಳೆ ಸಾಯುವವರೇ ಎಂದು ಯೋಚಿಸುತ್ತಾನೆ ನಿಜ. ಅವನ ಈ ಪ್ರಾಪಂಚಿಕ ಕುಟುಂಬ ಅಥವಾ ಅದೇ ಬಗೆಯ ಇಡೀ ತೋರಿಕೆಯ ಸಮುದಾಯ, ಸಮಾಜ, ರಾಷ್ಟ್ರ ಮತ್ತು ಇತರ ಎಲ್ಲ ಅಂಥ ವಸ್ತುಗಳು ಕ್ಷಣಭಂಗುರವಾದ ಗಾಳಿ ಗುಳ್ಳೆಗಳೆಂಬುದೂ ಅವನಿಗೆ ಹೊಳೆದಿರುತ್ತದೆ. ಆದರೂ ಅವನು ಅವುಗಳ ಕ್ಷಣಿಕ ವ್ಯವಸ್ಥೆಯ ಬೆನ್ನುಹತ್ತಿ ಹೋಗುತ್ತಾನೆ ಮತ್ತು ನಿಜ ವಸ್ತುಗಳ ಜಿಜ್ಞಾಸೆಗೆ ತೊಡಗುವುದಿಲ್ಲ. ಮರಣಾನಂತರ ತಾನು ಎಲ್ಲಿಗೆ ಹೋಗ ಬೇಕೆಂಬುದೂ ಅವನಿಗೆ ತಿಳಿಯುವುದಿಲ್ಲ. ಅವನು ತನ್ನ ಕುಟುಂಬ, ಸಮಾಜ ಅಥವಾ ರಾಷ್ಟ್ರ ಕ್ಕಾಗಿ ಬಹಳಷ್ಟು ದುಡಿಯುತ್ತಾನೆ. ಆದರೆ ಈ ಜೀವನವನ್ನು ಮುಗಿಸುವ ತನ್ನ ಬಗ್ಗೆಯಾಗಲಿ

ಇತರರ ಬಗ್ಗೆಯಾಗಲಿ ಆ ಮುಂದಿನ ಸ್ಥಿತಿಗತಿಗಳ ಬಗ್ಗೆ ಮಾತ್ರ ಯಾವ ಏರ್ಪಾಡನ್ನು ಮಾಡಿಕೊಳ್ಳುವುದಿಲ್ಲ.

ಒಂದು ರೈಲು ಬೋಗಿಯಂಥ ಸಾರ್ವಜನಿಕ ವಾಹನದಲ್ಲಿ ನಾವೆಲ್ಲ ಕೆಲವು ಅಪರಿಚಿತ ಗೆಳೆಯರೊಂದಿಗೆ ಒಟ್ಟು ಸೇರುತ್ತೇವೆ ಮತ್ತು ಕೆಲಕಾಲದ ಮಟ್ಟಿಗೆ ನಾವೆಲ್ಲ ಆ ವಾಹನದಲ್ಲಿ ಬಂಧುಗಳಾಗುತ್ತೇವೆ. ಆಮೇಲೆ ನಾವು ಬೇರ್ಪಡುತ್ತೇವೆ. ಮಧ್ಯೆ ಒಬ್ಬರನ್ನೊಬ್ಬರು ಕಾಣುವ ಅವಕಾಶವೇ ಇರುವುದಿಲ್ಲ. ಹಾಗೆಯೇ ನಮ್ಮ ಅನಾದಿನಿತ್ಯವಾದ ಜೀವನಯಾತ್ರೆಯಲ್ಲಿ ನಮಗೆ ಈ ಕುಟುಂಬ, ದೇಶ ಅಥವಾ ಸಮಾಜದಲ್ಲಿ ನಮಗೆ ಕುಳಿತುಕೊಳ್ಳಲು ತಾತ್ಕಾಲಿಕವಾಗಿ ಸ್ಥಳ ದೊರೆಯುತ್ತದೆ. ಆದರೆ ಕಾಲ ತೀರಿದೊಡನೆಯೇ ನಾವು ಇಚ್ಛೆಪಡದಿದ್ದರೂ ಒಬ್ಬರನ್ನೊಬ್ಬರು ಅಗಲುತ್ತೇವೆ. ಮತ್ತೆ ಕಾಣುವ ಸಂಭವವೇ ಇಲ್ಲ. ನಮ್ಮ ಈ ಅನಿತ್ಯ ಜೀವನಕ್ಕೆ ಮತ್ತು ಈ ಅನಿತ್ಯ ವ್ಯವಸ್ಥೆಯಲ್ಲಿಯ ನಮ್ಮ ಸಂಗಡಿಗರಿಗೆ ಸಂಬಂಧಿಸಿದಂತೆ ವಿಚಾರಿಸಬೇಕಾದ ಅನೇಕ ಪ್ರಶ್ನೆಗಳಿವೆ. ಆದರೆ ಗೃಹಮೇಧಿಯಾದವನು ಮಾತ್ರ ನಿತ್ಯವಸ್ತುಗಳನ್ನು ಕುರಿತು ಎಂದೂ ವಿಚಾರ ಮಾಡುವುದಿಲ್ಲ. ವಸ್ತುಗಳು ಇರುವಂತೆ ಅವುಗಳ ನೈಜ ಸ್ಥಿತಿಗತಿಗಳನ್ನರಿಯದೇ ನಾವೆಲ್ಲ ನಾನಾ ಬಗೆಯ ನಾಯಕರಾಗಿ ಖಾಯಂ ಯೋಜನೆಗಳನ್ನು ರೂಪಿಸುವಲ್ಲಿ ಮಗ್ನರಾಗಿದ್ದೇವೆ. ವಿಶೇಷವಾಗಿ ಸಮಾಜದ ಈ ಅಜ್ಞಾನವನ್ನು ನಿವಾರಿಸಲು ಪ್ರಯತ್ನಿಸಿದ ಮತ್ತು ಸರ್ವಾಂತರ್ಯಾಮಿಯಾದ ನಿರಾಕಾರ ಬ್ರಹ್ಮ ತತ್ವದ ಜ್ಞಾನವನ್ನು ಪ್ರತಿಪಾದಿಸಿದ ಶ್ರೀಪಾದ ಶಂಕರಾಚಾರ್ಯರು, “ಮಕ್ಕಳು ಆಟದಲ್ಲಿ ತೊಡಗಿದ್ದಾರೆ, ಯುವಕರು ಯುವತಿಯರ ಪ್ರೇಮ ಬಂಧನದಲ್ಲಿ ತೊಡಗಿದ್ದಾರೆ, ವೃದ್ಧರು ವಿಹ್ವಲಕಾರಿಯಾದ ಜೀವನದ ಹೊಂದಾಣಿಕೆಯ ಹೋರಾಟದಲ್ಲಿ ಗಂಭೀರ ಯೋಚನಾಪರರಾಗಿದ್ದಾರೆ. ಆದರೆ ಯಾರೂ ಪರಮ ಸತ್ಯ ಸ್ವರೂಪನಾದ ವಿಜ್ಞಾನ ಘನನಾದ ಭಗವಂತನನ್ನು ಕುರಿತು ಸರಿಯಾದ ವಿಚಾರವನ್ನೇ ಮಾಡದಿರುವುದು ವಿಷಾದದ ಸಂಗತಿಯಾಗಿದೆ” ಎಂದಿದ್ದಾರೆ.

ಪರೀಕ್ಷಿತ ಮಹಾರಾಜನು ತನಗೆ ಉಪದೇಶ ನೀಡಬೇಕೆಂದು ಕೇಳಿಕೊಂಡಾಗ, ಶುಕ ಮುನಿಗಳು ಕೆಳಕಂಡಂತೆ ಆತನಿಗೆ ಉಪದೇಶ ನೀಡಿ ರಾಜನ ಸುಸಂಗತ ಪ್ರಶ್ನೆಗಳಿಗೆ ಉತ್ತರ ನೀಡಿದರು.

ತಸ್ಮಾದ್ ಭಾರತ ಸರ್ವಾತ್ಮಾ ಭಗವಾನ್ ಈಶ್ವರೋ ಹರಿಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾ ಭಯಮ್॥

“ಹೇ ಭರತವಂಶಜನೇ, ಭಗವಂತನು ಷಡ್ಗುಣೈಶ್ವರ್ಯಸಂಪನ್ನನೂ ಸರ್ವಾಕರ್ಷೀಯನೂ ಆಗಿರುವುದರಿಂದ, ಅವನನ್ನು ಕುರಿತು ಜಿಜ್ಞಾಸೆಮಾಡುವುದು, ಅವನನ್ನು ಕುರಿತು ಶ್ರವಣ ಮಾಡುವುದು, ಅವನ ಧ್ಯಾನಮಾಡುವುದು ಮತ್ತು ಅವನ ಗುಣಗಾನ ಮಾಡುವುದು ಮನುಷ್ಯ ಮಾತ್ರರ ಕರ್ತವ್ಯವಾಗಿದೆ. ಅವನೊಬ್ಬನೇ ಬದ್ಧ ಜೀವರ ಬಂಧ ವಿಮೋಚನೆ ಮಾಡಲು ಸಮರ್ಥನಾಗಿರುವುದರಿಂದ ಅವನನ್ನು ಹರಿ ಎಂದೂ ಸಂಬೋಧಿಸಲಾಗಿದೆ. ನಾವು ಪ್ರಕೃತಿ ಬಂಧನದಿಂದ ನಿವೃತ್ತರಾಗಬೇಕೆಂದೇ ಬಯಸಿದರೆ, ನಾವು ಪರಮ ಸತ್ಯಸ್ವರೂಪನನ್ನು ಕುರಿತು ಜಿಜ್ಞಾಸೆಮಾಡಬೇಕು. ಅವನು ಅದರಿಂದ ಸುಪ್ರೀತನಾಗಿ ನಮ್ಮನ್ನು ಜೀವನದಲ್ಲಿ ಪೂರ್ಣ ಬಂಧಮುಕ್ತರನ್ನಾಗಿ ಮಾಡಬಹುದು.” (ಶ್ರೀಮದ್ಭಾಗವತಮ್ 2-1-5).

ಶುಕ ಮುನಿಗಳು ಪರಮದೇವೋತ್ತಮ ಪುರುಷನನ್ನು ಕುರಿತು ಕೇವಲ ನಾಲ್ಕೇ ಪದಗಳನ್ನು ಬಳಸಿದ್ದಾರೆ. ಈ ಪದಗಳು ಪರಮ ಪುರುಷನನ್ನು ಅಥವಾ ಪರಮಬ್ರಹ್ಮನನ್ನು ಗುಣಾತ್ಮಕವಾಗಿ ಬ್ರಹ್ಮನೊಂದಿಗೆ ಸದೃಶರಾದ ಇತರ ಜೀವರಿಂದ ಬೇರ್ಪಡಿಸುತ್ತವೆ. ಪರಮ ದೇವೋತ್ತಮ ಪುರುಷನಾದ ಭಗವಂತನನ್ನೂ **'ಸರ್ವಾತ್ಮಾ'** ಎಂದು ಸಂಬೋಧಿಸಲಾಗಿದೆ. ಕಾರಣವೆಂದರೆ, ಎಲ್ಲರಿಗೂ ಈ ಅರಿವು ಇಲ್ಲದಿದ್ದರೂ ಯಾರೂ ಅವನಿಂದ ದೂರವಿಲ್ಲ. ಪರಮ ದೇವೋತ್ತಮ ಪುರುಷನು ತನ್ನ ಪೂರ್ಣವಿಸ್ತರಣೆಯಿಂದ ಪರಮಾತ್ಮನಾಗಿ ಜೀವಾತ್ಮರೊಂದಿಗೆ ಎಲ್ಲರ ಹೃದಯಸ್ಥಿತನಾಗಿರುತ್ತಾನೆ. ಅಂತೆಯೇ ಪ್ರತಿಯೊಬ್ಬ ಜೀವಾತ್ಮನಿಗೂ ಪರಮಾತ್ಮನಿಗೂ ನಿಕಟ ಸಂಬಂಧವುಂಟು. ಅವನೊಂದಿಗಿರುವ ಈ ನಿಕಟ ಸಂಬಂಧದ ವಿಸ್ಮೃತಿಯೇ ಜೀವಿಯ ಅನಾದಿ ಪ್ರಕೃತಿ ಬಂಧನಕ್ಕೆ ಕಾರಣವಾಗಿದೆ. ಆದರೆ ಅವನು ಭಗವಂತನಾಗಿರುವುದರಿಂದ ಭಕ್ತನ ಆರ್ತ ಕರೆಗೆ ಕೂಡಲೇ ಓಗೊಡುತ್ತಾನೆ. ಭಗವಂತನು ಪರಿಪೂರ್ಣನೂ ಆಗಿರುವುದರಿಂದ ಅವನ ರೂಪ, ಐಶ್ವರ್ಯ, ಕೀರ್ತಿ, ಬಲ, ಜ್ಞಾನ ಮತ್ತು ವೈರಾಗ್ಯಾದಿ ಗುಣಗಳು ಜೀವಾತ್ಮನಿಗೆ ಅಪರಿಮಿತ ದಿವ್ಯಾನಂದದಾಯಕವಾದ ಮೂಲಸ್ರೋತಗಳಾಗಿವೆ. ಈ ಐಶ್ವರ್ಯಾದಿ ಗುಣಗಳು ಇತರ ಬದ್ಧಜೀವರಲ್ಲಿ ಅನಿತ್ಯ ಸ್ವರೂಪದಲ್ಲಿ ಕಂಡಾಗ, ಜೀವಾತ್ಮರು ಅವುಗಳಿಂದ ಆಕರ್ಷಿತರಾಗುತ್ತಾರೆ. ಆದರೆ ಆ ಅನಿತ್ಯ ವಸ್ತುಗಳಿಂದ ಜೀವಾತ್ಮನಿಗೆ ತೃಪ್ತಿ ದೊರೆಯುವುದಿಲ್ಲ. ಅಂತೆಯೇ ಅವನು ಅವುಗಳ ಪರಿಪೂರ್ಣವಾದ ನಿತ್ಯರೂಪವನ್ನು ಹೊಂದಲಿಚ್ಛಿಸುವನು. ಪರಮದೇವೋತ್ತಮ ಪುರುಷನ ಸೌಂದರ್ಯವಾಗಲೀ, ಅವನ ಜ್ಞಾನವೈರಾಗ್ಯಾದಿಗಳಾಗಲೀ ಅಸದೃಶವಾದುವು. ಇದೆಲ್ಲದಕ್ಕಿಂತ ಮಿಗಿಲಾಗಿ ಅವನು ಈಶ್ವರ, ಎಂದರೆ ಪರಮ ನಿಯಾಮಕನು. ನಾವು ಸದ್ಯ ಈ ಸಾರ್ವಭೌಮನ ಪೊಲೀಸ್ ಶಿಸ್ತಿನಿಂದ ನಿಯಂತ್ರಿತರಾಗಿದ್ದೇವೆ. ನಾವು ನಿಯಮಭಂಗ ಮಾಡುವುದರಿಂದಲೇ ನಮ್ಮ ಮೇಲೆ ಈ ಪೊಲೀಸ್ ನಿಯಂತ್ರಣವನ್ನು ಹೇರಲಾಗಿದೆ. ಆದರೆ ದೇವರು 'ಹರಿ' ಯಾಗಿರುವುದರಿಂದ, ಆಧ್ಯಾತ್ಮ ಪ್ರಪಂಚದಲ್ಲಿ ನಮಗೆ ಅನಿರ್ಬಂಧ ಸ್ವಾತಂತ್ರ್ಯ ನೀಡುವ ಮೂಲಕ ನಮ್ಮ ಬಂಧ ನಿವೃತ್ತಿ ಮಾಡಲು ಪರಮ ಸಮರ್ಥನಾಗಿದ್ದಾನೆ. ಆದುದರಿಂದ ಅವನ ಬಗ್ಗೆ ಜಿಜ್ಞಾಸೆ ಮಾಡುವುದು ಮತ್ತು ಮರಳಿ ದೇವತ್ವದೆಡೆಗೆ ಹೋಗುವುದು ಪ್ರತಿಯೊಬ್ಬ ಮಾನವನ ಕರ್ತವ್ಯವಾಗಿದೆ.



# ಆತ್ಮಶೋಧ

1972ರಲ್ಲಿ ವಿಖ್ಯಾತರ ಸಮಿತಿಯೊಂದು ಅಂಟಾರಿಯೋದ ವಿಂಡ್ಸರಿನಲ್ಲಿ ಸಭೆಸೇರಿ "ಮರಣದ ನಿಷ್ಕೃಷ್ಟವಾದ ಗಳಿಗೆಯನ್ನು ವ್ಯಾಖ್ಯಾಯಿಸುವ ಪ್ರಯತ್ನಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು" ಚರ್ಚಿಸಿತು. ಆ ಸಮಿತಿಯ ಸದಸ್ಯರಲ್ಲಿ ಜಗದ್ವಿಖ್ಯಾತ ಹೃದಯ ಶಸ್ತ್ರಚಿಕಿತ್ಸಾ ತಜ್ಞ ಡಾ. ವಿಲ್‌ಫ್ರೆಡ್ ಜಿ. ಬಿಗಿಲೋ, ಅಂಟಾರಿಯೋ ಉಚ್ಚತಮ ನ್ಯಾಯಾಲಯದ ನ್ಯಾಯಮೂರ್ತಿ ಎಲ್. ಹೇನ್ಸ್ ಮತ್ತು ವಿಂಡ್ಸರ್ ವಿಶ್ವವಿದ್ಯಾಲಯದ ಅಧ್ಯಕ್ಷ ಜೆ. ಫ್ರಾನ್ಸಿಸ್‌ಲೆಡ್ಡಿ ಅವರುಗಳು ಸೇರಿದ್ದರು. ಡಾ. ಬಿಗಿಲೋ ಅವರು ಆತ್ಮನ ಅಸ್ತಿತ್ವವನ್ನು ಎತ್ತಿ ಹಿಡಿದರು ಮತ್ತು ಜೀವವೆಂದರೇನು ಮತ್ತು ಅದು ಎಲ್ಲಿಂದ ಬರುತ್ತದೆ ಎಂಬುದನ್ನು ನಿರ್ಧರಿಸಲು ವ್ಯವಸ್ಥಿತ ಸಂಶೋಧನೆ ನಡೆಯಬೇಕು ಎಂದು ಒತ್ತಿಹೇಳಿದರು. ಡಾ. ಬಿಗಿಲೋ ಮತ್ತು ಅವರ ಸಮಿತಿಯ ಇತರ ಸದಸ್ಯರ ವ್ಯಾಖ್ಯಾನಗಳನ್ನು ಆ ಬಳಿಕ ಮಾಂಟ್ರಿಯಾಲ್ ಗೆಜೆಟನಲ್ಲಿ ಪ್ರಕಟಿಸಲಾಯಿತು. ಆ ಲೇಖನವು ಶ್ರೀಲ ಪ್ರಭುಪಾದರ ಕಣ್ಣಿಗೆ ಬಿದ್ದಾಗ, ಆತ್ಮವಿಜ್ಞಾನದ ಬಗ್ಗೆ ತಾವು ಸಾಕಷ್ಟು ವೈದಿಕ ಜ್ಞಾನವನ್ನು ನೀಡುವುದಾಗಿ ತಿಳಿಸುತ್ತ ಡಾ. ಬಿಗಿಲೋ ಅವರಿಗೆ ಪತ್ರಬರೆದರು ಮತ್ತು ಆತ್ಮವನ್ನು ವೈಜ್ಞಾನಿಕವಾಗಿ ಅರಿತುಕೊಳ್ಳಲು ಕಾರ್ಯಸಾಧ್ಯವಾದ ವಿಧಾನವನ್ನು ಸೂಚಿಸಿದರು. ಗೆಜೆಟನಲ್ಲಿ ಪ್ರಕಟವಾದ ಲೇಖನ ಮತ್ತು ಶ್ರೀಲ ಪ್ರಭುಪಾದರ ಪ್ರತಿಕ್ರಿಯೆಗಳನ್ನು ಇಲ್ಲಿ ಕೊಡಲಾಗಿದೆ.

ಗೆಜೆಟ್ ಶೀರ್ಷಿಕೆ : ಹೃದಯ ಚಿಕಿತ್ಸಕರು ಆತ್ಮವೆಂಬುದನ್ನು ಏನೆಂದು ತಿಳಿಯ ಬಯಸುತ್ತಾರೆ.

ವಿಂಡ್ಸರ್ : ದೇಹದಲ್ಲಿ ಆತ್ಮವಿರುತ್ತದೆ. ಅದಕ್ಕೆ ಮರಣ ಒದಗಿದಾಗ ದೇಹವನು ಬಿಡುತ್ತದೆ ಎಂದು ಕೆನಡಾದ ವಿಶ್ವವಿಖ್ಯಾತ ಹೃದಯ ಚಿಕಿತ್ಸಕರು ನಂಬುತ್ತಾರೆ. ದೈವ ಶಾಸ್ತ್ರಜ್ಞರು ಈ ಬಗ್ಗೆ ಹೆಚ್ಚು ಬೆಳಕು ಚೆಲ್ಲಬೇಕು ಎಂದು ಹೇಳುತ್ತಾರೆ.

ಟೊರಾಂಟೋ ಜನರಲ್ ಆಸ್ಪತ್ರೆಯ ಹೃನ್ನಾಳ (ಕಾರ್ಡಿಯೋ ವಾಸ್ಕುಲರ್) ಚಿಕಿತ್ಸಾ ಘಟಕದ ಮುಖ್ಯಸ್ಥರಾದ ಡಾ. ವಿಲ್‌ಫ್ರೆಡ್ ಜಿ. ಬಿಗಿಲೋ ಅವರು, "ಆತ್ಮವೆಂಬುದು ಇದೆಯೆಂದು ನಂಬುವವರಾಗಿ," "ಈ ರಹಸ್ಯವನ್ನು ಭೇದಿಸಿ ಅದರಲ್ಲಿ ಏನಿದೆ ಎಂಬುದನ್ನು ತಿಳಿಯುವ ಕಾಲ ಸನ್ನಿಹಿತವಾಗಿದೆ" ಎಂದು ಹೇಳುತ್ತಾರೆ.

ಬಿಗಿಲೋ ಅವರು, ಮರಣದ ನಿಷ್ಕೃಷ್ಟಗಳಿಗೆಯನ್ನು ವ್ಯಾಖ್ಯಾಯಿಸುವ ಪ್ರಯತ್ನಗ ಸಂಬಂಧಿಸಿದ ಸಮಸ್ಯೆಗಳನ್ನು ಚರ್ಚಿಸುವ ಎಸೆಕ್ಸ್ ಕೌಂಟೀ ಮೆಡಿಕೋಲೀಗಲ್ (ವೈದ್ಯ ಸೊಸೈಟಿಯ ಮುಂದೆ ಹಾಜರಾದ ಸಮಿತಿಯ ಸದಸ್ಯರಾಗಿದ್ದರು.

ದಾನಿಗಳು ಅನಿವಾರ್ಯವಾಗಿ ಮರಣಹೊಂದಿದಾಗ ಅವರ ಹೃದಯ ಮ ಇತರ ಅವಯವಗಳನ್ನು ಬೇರೆಯವರಿಗೆ ಜೋಡಿಸುತ್ತಿರುವ ಈ ಯುಗದಲ್ಲಿ ಈ ಪ್ರ ಇನ್ನಷ್ಟು ಮಹತ್ವ ಪಡೆದಿದೆ.

ರೋಗಿಯು ಸ್ಮೃತಿತಪ್ಪಿದ್ದು, ಯಾವ ಬಗೆಯ ಪ್ರತಿಕ್ರಿಯೆಯನ್ನು ತೋರಿಸುತ್ತಿಲ್ಲವಾಗಿ ಯಂತ್ರದಲ್ಲಿ ಅವನ ಮೆದುಳಿನ ತರಂಗಗಳು ಚಪ್ಪೆಯಾಗಿ ಕಾಣುತ್ತಿರುವಾಗ ಅದು ಮರಣವೆ ಬಹು ಸ್ವೀಕೃತವಾದ ವ್ಯಾಖ್ಯೆಯನ್ನು ಕೆನಡಾದ ವೈದ್ಯ ಸಂಘವು ನೀಡಿದೆ.

ಈ ಸಮಿತಿಯ ಇತರ ಸದಸ್ಯರೆಂದರೆ, ಅಂಟಾರಿಯೋ ಉಚ್ಚತಮ ನ್ಯಾಯಾಲಂ ನ್ಯಾಯಮೂರ್ತಿ ಎಡ್ಸನ್ ಎಲ್. ಹೇನ್ಸ್ ಮತ್ತು ವಿಂಡ್ಸರ್ ವಿಶ್ವವಿದ್ಯಾಲಯದ ಅ ಜೆ. ಫ್ರಾನ್ಸಿಸ್ ಲೆಡ್ಡಿ ಅವರುಗಳು.

ಬಿಗಿಲೋ ಅವರು ಚರ್ಚೆಯ ಕಾಲದಲ್ಲಿ ತಾವು ಎತ್ತಿದ್ದ ಅಂಶಗಳನ್ನು ಅನಂತ ಒಂದು ಸಂದರ್ಶನದಲ್ಲಿ ವಿಶದೀಕರಿಸುತ್ತ, ತಮ್ಮ ಮೂವತ್ತೆರಡು ವರ್ಷಗಳ ಚಿಕಿತ್ಸ ಅನುಭವವು ಆತ್ಮವೆಂಬುದೊಂದು ಇದೆಯೆಂಬುದರಲ್ಲಿ ಯಾವ ಸಂದೇಹಕ್ಕೂ ಅವಕಾಶವ ಎಂದು ತಿಳಿಸಿದರು.

"ಕೆಲವು ಸಂದರ್ಭಗಳಲ್ಲಿ ಜನರು ಜೀವಂತ ಸ್ಥಿತಿಯಿಂದ ಮರಣಾವಸ್ಥೆಗೆ ಸ್ಥಿತ್ಯಂ ಹೊಂದುವ ಗಳಿಗೆಯಲ್ಲಿ ನೀವು ಅಲ್ಲಿಯೇ ಇರುತ್ತೀರಿ, ಆಗ ಕೆಲವು ವಿಚಿತ್ರ ಬದಲಾವಣೆ ನಡೆಯುತ್ತವೆ.

"ಅತ್ಯಂತ ಗಮನಾರ್ಹವಾದ ಅಂಶಗಳೆಂದರೆ ಹಠಾತ್ ಚೇತನಾಭಾವ ಅಥವಾ ಕಣ್ಣುಗ ಪ್ರಕಾಶಹೀನತೆ ಮತ್ತು, ವಸ್ತುತಃ ನಿರ್ಜೀವವಾಗಿ ಕಾಣುವಂಥವು.

"ನೀವು ನೋಡಿದ್ದನ್ನು ಬರೆದಿಡುವುದು ಕಷ್ಟ ಸಾಧ್ಯ. ನಿಜವಾಗಿ, ಅದನ್ನು ಸರಿಯ ದಾಖಲೆಗೊಳಿಸುವುದು ಸಾಧ್ಯವಿಲ್ಲವೆಂದು ನನಗನಿಸುತ್ತದೆ."

ಬಿಗಿಲೋ ಅವರು ತಮ್ಮ ಮೂಲ ಶೋಧನೆಯಾದ "ಗಹನಘನೀಕರಣ"(Deep Free ಎಂಬ ಮತ್ತು ಹೈಪೋಥರ್ಮಿಯ ಎಂದು ಹೆಸರಾದ ಶಸ್ತ್ರಚಿಕಿತ್ಸಾತಂತ್ರದ ಮತ ಹೃದಯ ಕವಾಟದ ಶಸ್ತ್ರಚಿಕಿತ್ಸೆಯ ಕೌಶಲದಲ್ಲಿ ವಿಶ್ವ ವಿಖ್ಯಾತರಾಗಿದ್ದಾರೆ. ಅವರು "ಆ ಸಂಶೋಧನೆಯನ್ನು" ದೈವ ಶಾಸ್ತ್ರಜ್ಞರು ಮತ್ತು ತತ್ಸಂಬಂಧಿತ ಇತರ ಶಾಸ್ತ್ರಜ್ಞರು ವಿಶ್ವವಿ ಲಯದ ಪರಿಧಿಯಲ್ಲಿ ಕೈಕೊಳ್ಳಬೇಕು ಎಂದು ಹೇಳಿದ್ದಾರೆ.

ಈ ಚರ್ಚೆಯ ಕಾಲದಲ್ಲಿ, "ಆತ್ಮ ಎಂಬುದೊಂದಿದ್ದರೆ, ಅದನ್ನು ನೀವು ಕಾಣುವಂತಿ ಅದನ್ನು ನೀವು ಗುರುತಿಸುವಂತಿಲ್ಲ" ಎಂದು ಲೆಡ್ಡಿ ಅವರು ಹೇಳಿದರು.

"ಚೇತನ ಅಥವಾ ಜೀವ ಎಂಬ ತತ್ವವೊಂದಿದ್ದರೆ, ಅದು ಏನು ?" ಸಮಸ್ಯೆಯೊಂ

"ಆತ್ಮವೆಂಬುದು ನಿರ್ದಿಷ್ಟವಾಗಿ ಸ್ಥಳೀಯವಾಗಿ (ಭೌಗೋಲಿಕವಾಗಿ) ಅಸ್ತಿತ್ವದಲ್ಲಿರುವುದಿಲ್ಲ. ಅದು ಎಲ್ಲ ಕಡೆಯಲ್ಲೂ ಇದೆ. ಆದರೂ ಅದು ದೇಹದಲ್ಲಿ ಎಲ್ಲಿಯೂ ಇಲ್ಲ."

"ಪ್ರಯೋಗವನ್ನು ಪ್ರಾರಂಭಿಸುವುದೇನೊ ಒಳ್ಳೆಯದು. ಆದರೆ ಈ ವಸ್ತುಗಳೊಂದಿಗೆ ನೀವು ಹೇಗೆ ವ್ಯವಹರಿಸುವಿರಿ ಎಂಬುದು ನನಗೆ ಹೊಳೆಯುತ್ತಿಲ್ಲ" ಎಂದು ಲೆಡ್ಡಿ ಹೇಳಿದರು. ಈ ಚರ್ಚೆಯಿಂದ, ಅಂತರಿಕ್ಷಕ್ಕೆ ಹೋಗಿಬಂದ ಸೋವಿಯತ್ ಗಗನ ಯಾತ್ರಿಯು ತನಗೆ ಮೇಲೆ ಲ್ಲಿಯೂ ದೇವರು ಕಾಣಲಿಲ್ಲ. ಆದುದರಿಂದ ದೇವರು ಇಲ್ಲ ಎಂದು ಹೇಳಿದ್ದು ನನಗೆ ನೆನಪಾಗುತ್ತದೆ ಎಂದು ಹೇಳಿದರು.

ಇರಬಹುದು ಎಂದರು ಬಿಗಿಲೋ. ಆದರೆ ಆಧುನಿಕ ವೈದ್ಯಕೀಯ ಕ್ಷೇತ್ರದಲ್ಲಿ ವಿವರಿಸ ಲಾಗದ ಒಂದು ವಸ್ತುವಿನ ಶೋಧ ನಡೆದಾಗ, "ಇದಕ್ಕೆ ಉತ್ತರವನ್ನು ಕಂಡುಹಿಡಿಯಿರಿ. ಅದನು ಪ್ರಯೋಗಾಲಯಕ್ಕೆ ಕೊಂಡುಹೋಗಿ ಅಥವಾ ನಿಜಾಂಶವನ್ನು ಕಂಡುಹಿಡಿಯುವ ಬೇರಾವ ಸ್ಥಳಕ್ಕಾದರೂ ತೆಗೆದುಕೊಂಡು ಹೋಗಿ" ಎಂದು ಹೇಳುವುದು ರೂಢಿಯ ಮಾತು ಎಂದರು ಬಿಗಿಲೋ. "ಆತ್ಮ ಎಂಬುದು ಎಲ್ಲಿದೆ ಮತ್ತು ಅದು ಎಲ್ಲಿಂದ ಬರುತ್ತದೆ ? " ಎಂಬುದೇ ಮುಖ್ಯ ಪ್ರಶ್ನೆಯಾಗಿದೆ ಎಂದರು ಬಿಗಿಲೋ.

ಶ್ರೀಲ ಪ್ರಭುಪಾದರು ವೇದಾಧಾರಗಳನ್ನು ನೀಡುತ್ತಾರೆ:

ಡಾಕ್ಟರ್ ಬಿಗಿಲೋ ಅವರೆ, ನನ್ನ ಅಭಿನಂದನೆಗಳನ್ನು ದಯವಿಟ್ಟು ಸ್ವೀಕರಿಸಿ. ಇತ್ತೀಚಿಗೆ ರಾಯ್ ಕೊರೇಲಿ ಅವರು ಬರೆದ "ಹೃದಯ ಚಿಕಿತ್ಸಕರು ಆತ್ಮವೇಂಬುದು ಏನೆಂದು ತಿಳಿಯ ಬಯಸುತ್ತಾರೆ" ಎಂಬ ಲೇಖನವು ಗೆಜೆಟಿನಲ್ಲಿ ಪ್ರಕಟವಾದುದನ್ನು ಕಂಡೆ. ಅದು ಬಹಳ ಕುತೂ ಹಲ ಕೆರಳಿಸುವಂತಿತ್ತು. ಅದು ನಿಮ್ಮ ವಿಶೇಷ ಒಳದೃಷ್ಟಿಯನ್ನು ಸೂಚಿಸುತ್ತದೆ. ಅಂತೆಯೇ ಈ ವಿಷಯದಲ್ಲಿ ನಾನು ನಿಮಗೆ ಪತ್ರ ಬರೆಯಲಿಚ್ಛಿಸಿದೆ. ನಾನು ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾ ಸಂಘದ ಸ್ಥಾಪನಾಚಾರ್ಯನೆಂಬುದು ಪ್ರಾಯಃ ನಿಮಗೆ ತಿಳಿದಿರಬಹುದು. ಕೆನಡಾದ ಮಾಂಟ್ರಿ ಯಾಲ್, ಟೊರೆಂಟೋ ವ್ಯಾಂಕೊವರ್ ಮತ್ತು ಹ್ಯಾಮಿಲ್ಟನ್ ನಗರಗಳಲ್ಲಿ ನಮ್ಮ ಮಂದಿರ ಗಳಿವೆ ಪ್ರತಿಯೊಬ್ಬ ಜೀವನಿಗೂ ಅವನ ಮೂಲ ಆತ್ಮ ಸ್ವರೂಪವನ್ನು ಬೋಧಿಸು ವುದಕ್ಕಾಗಿಯೇ ವಿಶೇಷವಾಗಿ ಈ ಕೃಷ್ಣ ಪ್ರಜ್ಞಾ ಆಂದೋಲನವನ್ನು ನಡೆಸಲಾಗುತ್ತಿದೆ.

ಜೀವಂತ ಪ್ರಾಣಿಯ ಹೃದಯದಲ್ಲಿ ಆತ್ಮವೆಂಬುದು ಇದೆ ಎಂಬುದರಲ್ಲಿ ಸಂದೇಹವೇ ಇಲ್ಲ ಮತ್ತು ಅದು ದೇಹ ಪೋಷಣೆಗೆ ಅಗತ್ಯವಾದ ಎಲ್ಲ ಶಕ್ತಿಗಳ ಮೂಲ ಸ್ರೋತವಾಗಿದೆ. ಈ ಆತ್ಮಶಕ್ತಿಯು ದೇಹದಲ್ಲೆಲ್ಲ ಹರಡಿಕೊಂಡಿರುತ್ತದೆ. ಇದನ್ನೇ ಪ್ರಜ್ಞೆ ಎಂದು ಕರೆಯು ತ್ತಾರೆ. ಈ ಪ್ರಜ್ಞೆಯು ಆತ್ಮ ಶಕ್ತಿಯನ್ನು ದೇಹದಲ್ಲೆಲ್ಲ ಪ್ರಸರಿಸುವುದರಿಂದ ಮನುಷ್ಯನು ದೇಹದ ಯಾವುದೇ ಭಾಗದಲ್ಲಿ ಸುಖವನ್ನೋ ದುಃಖವನ್ನೋ ಅನುಭವಿಸುತ್ತಾನೆ. ಆತ್ಮ ವೆಂಬುದು ಒಂದು ವೈಯಕ್ತಿಕ ಸ್ವರೂಪ ಮತ್ತು ಈ ಆತ್ಮನು, ಒಬ್ಬ ವ್ಯಕ್ತಿಯು ಶೈಶವದಿಂದ ಬಾಲ್ಯಕ್ಕೆ ಬಾಲ್ಯದಿಂದ ಹುಡುಗತನಕ್ಕೆ, ಹುಡುಗುತನದಿಂದ ಯೌವನಕ್ಕೆ ಮತ್ತು ಆ ಮುಂದೆ ವೃದ್ಧಾಪ್ಯಕ್ಕೆ ಬದಲಾವಣೆ ಹೊಂದುವಂತೆ, ಒಂದು ದೇಹದಿಂದ ಮತ್ತೊಂದು ದೇಹಕ್ಕೆ ದೇಹಾಂತರವನ್ನು ಹೊಂದುತ್ತಾನೆ. ಆಗ ಹಳೆಯ ವಸ್ತ್ರವನ್ನು ಬದಲಾಯಿಸಿ ಹೊಸದನ್ನು ಸ್ವೀಕರಿಸುವಂತೆ ಮರಣವೆಂಬ ಬದಲಾವಣೆ ನಡೆಯುತ್ತದೆ. ನಮಗೆ ಹೊಸ ದೇಹ ಬರುತ್ತದೆ. ಇದೇ ಆತ್ಮನ ದೇಹಾಂತರ ಪ್ರಾಪ್ತಿ.

ಆತ್ಮನು ಆಧ್ಯಾತ್ಮ ಲೋಕದ ತನ್ನ ನಿಜ ಸ್ಥಾನವನ್ನು ಮರೆತು ಈ ಭೌತಿಕ ಪ್ರಪಂಚದಲ್ಲಿ ಸುಖಪಡೆಯಬಯಸಿದಾಗ ಅವನು ಈ ಕಷ್ಟದ ಅಸ್ತಿತ್ವದ ಜೀವನವನ್ನು ಪಡೆಯುತ್ತಾನೆ. ಆದರೆ ಆತ್ಮನು ತನ್ನ ಪ್ರಜ್ಞೆಯನ್ನು ಭಗವಂತನ ಪರಮ ಪ್ರಜ್ಞೆಯೊಂದಿಗೆ ಸಂಲಗ್ನಗೊಳಿಸಿ ಕೊಂಡಾಗ ಜನನ, ಮರಣ, ರೋಗ, ವೃದ್ಧಾಪ್ಯಗಳ ಪುನರಾವೃತ್ತಿಯ ಈ ಅಸ್ವಾಭಾವಿಕ ಜೀವನವನ್ನು ಕೊನೆಗೊಳಿಸಬಹುದಾಗಿದೆ. ಇದೇ ನಮ್ಮ ಕೃಷ್ಣಪ್ರಜ್ಞಾ ಆಂದೋಲನದ ಮೂಲತತ್ವ.

ಹೃದಯ ಜೋಡಣೆಯ ಮಟ್ಟಿಗೆ ಹೇಳುವುದಾದರೆ, ಹೃದಯದಲ್ಲಿ ಆತ್ಮವಿದ್ದ ಹೊರತು ಅದು ಯಶಸ್ವಿ ಆಗುವುದಿಲ್ಲ. ಆದುದರಿಂದ ಆತ್ಮದ ಅಸ್ತಿತ್ವವನ್ನು ಒಪ್ಪಿಕೊಳ್ಳಲೇಬೇಕು. ಆತ್ಮವಿರದಿದ್ದರೆ, ಸಂಭೋಗ ಮಾಡಿದಾಗ ಗರ್ಭೋತ್ಪತ್ತಿ ಆಗುವುದಿಲ್ಲ, ಗರ್ಭಧಾರಣೆ ಇರುವುದಿಲ್ಲ. ಗರ್ಭಧಾರಣೆ ತಡೆಯಿಂದ ಗರ್ಭಕೋಶವು ಕೆಟ್ಟುಹೋಗುತ್ತದೆ. ಅದು ಆತ್ಮಕ್ಕೆ ಆ ಮೇಲೆ ತಕ್ಕ ಸ್ಥಾನವಾಗಿರುವುದಿಲ್ಲ. ಇದು ದೇವರ ನಿಯಮಕ್ಕೆ ವಿರುದ್ಧವಾದುದಾಗಿದೆ. ದೇವರ ಆಜ್ಞಾನುಸಾರ, ಒಂದು ಆತ್ಮವು ವಿಶಿಷ್ಟ ಗರ್ಭಕ್ಕೆ ಕಳಿಸಲ್ಪಡುತ್ತದೆ, ಆದರೆ ಈ ಗರ್ಭನಿರೋಧದಿಂದಾಗಿ ಅವನಿಗೆ ಆ ಗರ್ಭಕೋಶವು ದೊರೆಯದೆ ಮತ್ತೊಂದು ಗರ್ಭದಲ್ಲಿ ಹೋಗಿ ಸೇರಬೇಕಾಗುತ್ತದೆ. ಇದು ಪರಮಾತ್ಮನ ಆದೇಶದ ಉಲ್ಲಂಘನೆ. ಉದಾಹರಣೆಗೆ: ಒಬ್ಬ ಮನುಷ್ಯನು ಒಂದು ವಿಶಿಷ್ಟ ಮನೆಯಲ್ಲಿ ಇರಬೇಕಾಗಿದೆಯೆಂದು ಭಾವಿಸೋಣ ಆದರೆ ಅವನು ಆ ಮನೆಯನ್ನು ಪ್ರವೇಶಿಸಲಾಗದಷ್ಟು ಅಲ್ಲಿ ತೊಂದರೆ ಯಿದ್ದರೆ, ಆಗ ಅವನಿಗೆ ಆ ಸ್ಥಿತಿಯಿಂದ ಬಹಳಷ್ಟು ಅನನುಕೂಲವಾಗುತ್ತದೆ. ಇದು ವಿಧಿಬಾಹಿರವಾದ ಹಸ್ತಕ್ಷೇಪ. ಇದು ದಂಡನಾರ್ಹವಾದುದು.

"ಆತ್ಮಶೋಧದ" ಕಾರ್ಯವು ವಿಜ್ಞಾನದ ಮುನ್ನಡೆಯನ್ನು ಸೂಚಿಸುವುದು ಖಂಡಿತ. ಆದರೆ ವಿಜ್ಞಾನದ ಮುನ್ನಡೆಯು ಆತ್ಮವನ್ನು ದೊರಕಿಸಲಾರದು. ಆತ್ಮದ ಇರುವಿಕೆಯನ್ನು ಸನ್ನಿವೇಶಗಳ ಅರಿವಿನಿಂದ ಮಾತ್ರ ಅಂಗೀಕರಿಸಬಹುದು. ಜೀವ ಪ್ರಮಾಣವು ಬಿಂದುವಿನ ಹತ್ತು ಸಾವಿರದಲ್ಲೊಂದಂಶದಷ್ಟಾಗಿದೆಯೆಂಬುದನ್ನು ನೀವು ವೇದಶಾಸ್ತ್ರಗಳಿಂದ ತಿಳಿದು ಕೊಳ್ಳಬಹುದು. ಆದುದರಿಂದ ಆತ್ಮವನ್ನು ಸೆರೆಹಿಡಿಯುವುದು ಭೌತವಿಜ್ಞಾನಿಗೆ ಸಾಧ್ಯವಾಗುವುದಿಲ್ಲ. ನೀವು ವೇದಪ್ರಮಾಣದಿಂದ ಮಾತ್ರ ಆತ್ಮನ ಅಸ್ತಿತ್ವವನ್ನು ಅಂಗೀ ಕರಿಸಬಹುದಷ್ಟೆ. ಮಹಾ ಮಹಾ ವಿಜ್ಞಾನಿಗಳು ಈಗ ಶೋಧಿಸುತ್ತಿರುವುದನ್ನು ನಮ್ಮವರು ಬಲುಹಿಂದೆಯೇ ವಿವರಿಸಿದ್ದಾರೆ.

ಮನುಷ್ಯನು ಆತ್ಮನ ಅಸ್ತಿತ್ವವನ್ನು ಅರಿತುಕೊಂಡೊಡನೆಯೇ ಅವನು ಪರಮಾತ್ಮನ ಅಸ್ತಿತ್ವವನ್ನೂ ಅರಿತುಕೊಳ್ಳುತ್ತಾನೆ. ದೇವರು ಮತ್ತು ಜೀವನಲ್ಲಿರುವ ವ್ಯತ್ಯಾಸವೆಂದರೆ, ದೇವರು ಬಲು ದೊಡ್ಡ ಆತ್ಮ, ಜೀವಾತ್ಮನಾದರೋ ಬಲು ಚಿಕ್ಕ ಆತ್ಮ, ಆದರೆ ಗುಣಾತ್ಮಕವಾಗಿ ಅವರೀರ್ವರೂ ಸಮಾನರು. ಆದುದರಿಂದಲೇ ದೇವರು ಸರ್ವಾಂತರ್ಯಾಮಿ, ಜೀವಾತ್ಮನು ಏಕದೇಶೀಯನು. ಆದರೆ ಸ್ವಭಾವ ಮತ್ತು ಗುಣಗಳಲ್ಲಿ ಸಾಮ್ಯವಿದೆ.

"ಆತ್ಮವು ಎಲ್ಲಿದೆ ಮತ್ತು ಅದು ಎಲ್ಲಿಂದ ಬರುತ್ತದೆ" ಎಂಬುದೇ ಮುಖ್ಯ ಪ್ರಶ್ನೆ ಯಾಗಿದೆಯೆಂದು ನೀವು ಹೇಳಿದ್ದೀರಿ. ಅದನ್ನೂ ಅರಿತುಕೊಳ್ಳುವುದು ಅಷ್ಟು ಕಷ್ಟ ಸಾಧ್ಯವಾದುದೇನಲ್ಲ. ಆತ್ಮವು ಜೀವಿಯ ಹೃದಯದಲ್ಲಿ ಸ್ಥಿತವಾಗಿರುತ್ತದೆ ಮತ್ತು ಅದು

ಮರಣಾನಂತರ ಮತ್ತೊಂದು ದೇಹದಲ್ಲಿ ಆಶ್ರಯ ಪಡೆಯುತ್ತದೆ ಎಂಬುದನ್ನು ನಾವು ಈಗಾಗಲೇ ಚರ್ಚಿಸಿದ್ದೇವೆ. ಮೂಲತಃ ಆತ್ಮವು ದೇವರಿಂದ ಹೊರಡುತ್ತದೆ—ಕಿಡಿಯು ಅಗ್ನಿಯಿಂದ ಹೊರಡುವಂತೆ. ಕಿಡಿಯು ಕೆಳಗೆ ಬಿದ್ದಾಗ, ಅದು ನಂದಿಹೋದಂತೆ ಕಾಣುತ್ತದೆ. ಹಾಗೆಯೇ ಆತ್ಮನ ಕಿಡಿಯು ಮೂಲತಃ ಆಧ್ಯಾತ್ಮಲೋಕದಿಂದ ಹೊರಟು ಭೌತಿಕ ಲೋಕವನ್ನು ಪ್ರವೇಶಿಸುತ್ತದೆ. ಭೌತಿಕ ಲೋಕದಲ್ಲಿ ಆತ್ಮನು ಮೂರುಸ್ಥಿತಿಗಳಿಗೆ ಒಳಪಡುತ್ತಾನೆ. ಅದನ್ನೇ ಮೂರು ಗುಣಗಳೆಂದು ಹೇಳುತ್ತಾರೆ. ಬೆಂಕಿಯ ಕಿಡಿಯು ಒಣ ಹುಲ್ಲಿನ ಮೇಲೆ ಬಿದ್ದಾಗ, ಅಗ್ನಿಯ ಗುಣವು ಮುಂದುವರಿಯುತ್ತದೆ, ಕಿಡಿಯು ನೆಲದ ಮೇಲೆ ಬಿದ್ದಾಗ ನೆಲವು ಅನುಕೂಲವಾಗಿದ್ದ ಹೊರತು ಅದು ತನ್ನ ಅಗ್ನಿ ಗುಣವನ್ನು ಪ್ರದರ್ಶಿಸಲಾರದು. ಕಿಡಿಯು ನೀರಿನಲ್ಲಿ ಬಿದ್ದಾಗ, ಅದು ನಂದಿಹೋಗುತ್ತದೆ. ಹೀಗೆ ನಾವು ಮೂರು ಬಗೆಯ ಜೈವಿಕ ಸ್ಥಿತಿಗಳನ್ನು ಕಾಣುತ್ತೇವೆ. ಒಬ್ಬ ಜೀವಾತ್ಮನು ತನ್ನ ಸ್ವರೂಪ ಜ್ಞಾನವನ್ನು ಸಂಪೂರ್ಣವಾಗಿ ಮರೆತು ಬಿಡುತ್ತಾನೆ, ಮತ್ತೊಬ್ಬನು ಸರಿಸುಮಾರು ಮರೆತೇ ಬಿಟ್ಟಂತಿದ್ದರೂ ಸ್ವರೂಪ ಸ್ವಭಾವ ಕಿಂಚಿತ್ ಅಂಶವನ್ನು ಹೊಂದಿರುತ್ತಾನೆ, ಮತ್ತೊಬ್ಬನು ಸಂಪೂರ್ಣವಾಗಿ ಆತ್ಮ ಸ್ವರೂಪದ ಶೋಧದಲ್ಲಿ ತೊಡಗಿರುತ್ತಾನೆ. ಕಿಡಿರೂಪದ ಆತ್ಮ ಸ್ವರೂಪವು ಆಧ್ಯಾತ್ಮಿಕ ಪರಿಪೂರ್ಣತೆಯನ್ನು ದೊರಕಿಸಿಕೊಳ್ಳಲು ಯೋಗ್ಯವಾದ ವಿಧಾನವಾಗಿದೆ. ಅವನಿಗೆ ಸರಿಯಾದ ಮಾರ್ಗದರ್ಶನ ದೊರತರೆ ಅವನು ಮತ್ತೆ ಸುಲಭವಾಗಿ ಎಲ್ಲಿಂದ ಪತನ ಹೊಂದಿದ್ದನೋ ಆ ಸ್ವಧಾಮವನ್ನು ಎಂದರೆ ಭಗವದ್ಧಾಮವನ್ನು ಸೇರಬಹುದು.

ವೇದ ಸಾಹಿತ್ಯದ ಈ ಪ್ರಮಾಣಪುರಸ್ಸರವಾದ ತಿಳಿವಳಿಕೆಯನ್ನು ಆಧುನಿಕ ವೈಜ್ಞಾನಿಕ ತಿಳಿವಳಿಕೆಯೊಂದಿಗೆ ಈಗಿನ ಜಗತ್ತಿಗೆ ನೀಡಿದ್ದಾದರೆ, ಮಾನವ ಸಮಾಜಕ್ಕೆ ಬಲುದೊಡ್ಡ ಕೊಡುಗೆಯನ್ನು ನೀಡಿದಂತಾಗುವುದು. ಸತ್ಯ ಸಂಗತಿ ಈಗಾಗಲೇ ಇದ್ದೇ ಇದೆ. ಅದನ್ನು ಆಧುನಿಕರಿಗೆ ತಿಳಿಯುವಂತೆ ನಿರೂಪಿಸಬೇಕಾಗಿದೆ ಅಷ್ಟೆ.

ನಿಮ್ಮ ನಂಬುಗೆಯ,

**ಎ.ಸಿ. ಭಕ್ತಿವೇದಾಂತ ಸ್ವಾಮಿ**



# ಗುರು ಎಂದರೇನು ?

**ಗುರು ಎಂಬ ಶಬ್ದವು ನಮ್ಮ ಕಿವಿಗೆ ಬಿದ್ದೊಡನೆಯೇ ವಿಚಿತ್ರವಾದ, ಜಡೆ ಗಟ್ಟಿದ ಉದ್ದಗಡ್ಡದ, ನೀಳಕಾಷಾಯ ವಸನಧಾರಿಯಾದ, ದೂರದ ಯಾವುದೋ ನಿಗೂಢ ಸತ್ಯದ ಧ್ಯಾನಮಗ್ನನಾಗಿರುವ ವೃದ್ಧನ ಚಿತ್ರವೊಂದು ಕಣ್ಣೆದುರು ಬಂದು ನಿಲ್ಲುತ್ತದೆ ಅಥವಾ ಆಧ್ಯಾತ್ಮತೃಷೆಯುಳ್ಳ ಯುವ ಪೀಳಿಗೆ ಯುವರನ್ನು ಬಲಿಪಶು ಮಾಡುವ ಒಬ್ಬ ವಿಶ್ವೋಪದೇಶಕನೆಂಬ ಭಾವನೆ ನಮಗೆ ಮೂಡುತ್ತದೆ. ಆದರೆ ನಿಜವಾಗಿ ಗುರು ಎಂದರೆ ಯಾರು ? ನಮಗೆ ತಿಳಿಯದಿರುವುದು ಅವನಿಗೇನು ತಿಳಿದಿದೆ ? ಅವನು ನಮಗೆ ಜ್ಞಾನದೀಪ್ತಿಯನ್ನು ಹೇಗೆ ನೀಡುತ್ತಾನೆ ? 1973ರಲ್ಲಿ ಇಂಗ್ಲೆಂಡಿನಲ್ಲಿ ಮಾಡಿದ ಒಂದು ಭಾಷಣದಲ್ಲಿ ಶ್ರೀಲ ಪ್ರಭುಪಾದರು ಮಾರ್ಗದರ್ಶಕ ಉತ್ತರಗಳನ್ನು ಒದಗಿಸಿದ್ದಾರೆ.**

ಓಂ ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।
ಚಕ್ಷುರ್ ಉನ್ಮೀಲಿತಂ ಯೇನ ತಸ್ಮೈ ಶ್ರೀ–ಗುರವೇ ನಮಃ ॥

"ನಾನು ಅಜ್ಞಾನಾಂಧಕಾರದಲ್ಲಿ ಜನಿಸಿದ್ದೆ, ನನ್ನ ಗುರು ಜ್ಞಾನಜ್ಯೋತಿಯಿಂದ ನನ್ನ ಕಣ್ಣು ತೆರೆಸಿದರು. ನಾನು ಅವರಿಗೆ ವಿನೀತನಾಗಿ ನಮಸ್ಕರಿಸುತ್ತೇನೆ."

ಅಜ್ಞಾನ ಎಂದರೆ ಬುದ್ಧಿಹೀನತೆ ಅಥವಾ ಅಂಧಕಾರ. ಈ ಕೋಣೆಯಲ್ಲಿರುವ ಎಲ್ಲ ದೀಪಗಳು ಆರಿಹೋದರೆ, ನಾವಾಗಲಿ ಬೇರೊಬ್ಬರಾಗಲಿ ಎಲ್ಲಿ ಕುಳಿತಿದ್ದೇವೆ ಎಂದು ಹೇಳಲು ನಮಗೆ ಸಾಧ್ಯವಾಗುವುದಿಲ್ಲ. ಎಲ್ಲವೂ ಗೊಂದಲಮಯವಾಗುತ್ತದೆ. ಹಾಗೆಯೇ ತಮೋಮಯವಾದ ಈ ಭೌತಿಕ ಜಗತ್ತಿನಲ್ಲಿ ನಾವೆಲ್ಲರೂ ಅಂಧಕಾರದಲ್ಲಿದ್ದೇವೆ. ತಮಸಾ ಅಥವಾ ತಿಮಿರ ಎಂದರೆ ಕತ್ತಲು. ಈ ಭೌತಿಕ ಜಗತ್ತು ಕತ್ತಲುಮಯವಾಗಿದೆ. ಅಂತೆಯೇ ಅದನ್ನು ಬೆಳಗಿಸಲು ಸೂರ್ಯಪ್ರಕಾಶವೋ ಚಂದ್ರಪ್ರಭೆಯೋ ಬೇಕಾಗಿದೆ. ಆದರೆ ಆಧ್ಯಾತ್ಮಲೋಕವೆನಿಸಿದ ಮತ್ತೊಂದು ಲೋಕವಿದೆ. ಅದು ಅಂಧಕಾರದ ಆಚೆಗಿದೆ. ಶ್ರೀಕೃಷ್ಣನು ಆ ಲೋಕವನ್ನು ಕುರಿತು ಭಗವದ್ಗೀತೆಯಲ್ಲಿ ವರ್ಣಿಸಿದ್ದಾನೆ (15-6) :

ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ ಗತ್ವಾ ನ ನಿವರ್ತಂತೇ ತದ್ ಧಾಮ ಪರಮಂ ಮಮ ॥

"ಆ ನನ್ನ ಧಾಮವನ್ನು ಸೂರ್ಯನಾಗಲಿ, ಚಂದ್ರನಾಗಲಿ ಅಥವಾ ವಿದ್ಯುತ್ತಾಗಲೀ ಬೆಳಗಿಸುವುದಿಲ್ಲ. ಆ ಧಾಮವನ್ನು ಸೇರಿದವನು ಮತ್ತೆ ಈ ಭೌತಿಕ ಪ್ರಪಂಚಕ್ಕೆ ಮರಳುವುದಿಲ್ಲ."

ತನ್ನ ಶಿಷ್ಯನನ್ನು ಕತ್ತಲೆಯಿಂದ ಬೆಳಕಿಗೆ ಕರೆದೊಯ್ಯುವುದೇ ಗುರುವಿನ ಕೆಲಸ. ತಿಳಿಯದೇ ಮನುಷ್ಯನು ರೋಗ ಸಂಪರ್ಕ ಹೊಂದುವಂತೆ, ಅಜ್ಞಾನ ನಿಮಿತ್ತವಾಗಿ ಸದ್ಯ ಪ್ರತಿಯೊಬ್ಬನೂ ದುಃಖಿಯಾಗಿದ್ದಾನೆ. ಮನುಷ್ಯನು ನೈರ್ಮಲ್ಯ ನಿಯಮಗಳನ್ನರಿಯದಿದ್ದರೆ, ಅವನಿಗೆ ಯಾವ ರೋಗ ಅಂಟುವುದೆಂಬುದು ಅವನಿಗೆ ತಿಳಿಯುವುದಿಲ್ಲ. ಅಜ್ಞಾನದಿಂದ ರೋಗ ಸಂಪರ್ಕ ಉಂಟಾಗುತ್ತದೆ ಮತ್ತು ರೋಗದಿಂದ ಬಳಲುತ್ತೇವೆ. ಪಾತಕಿಯೊಬ್ಬನು "ನನಗೆ ಕಾನೂನು ಗೊತ್ತಿರಲಿಲ್ಲ" ಎಂದು ಹೇಳಬಹುದು. ಆದರೆ ಅವನು ಅಪರಾಧ ಮಾಡಿದರೆ ಅವನಿಗೆ ಕ್ಷಮೆ ದೊರೆಯುವುದಿಲ್ಲ. ಅಜ್ಞಾನವು ಕ್ಷಮಾರ್ಹವಲ್ಲ. ಹಾಗೆಯೇ ಬೆಂಕಿಯು ಸುಡುತ್ತದೆ ಎಂಬುದನ್ನರಿಯದೆ ಮಗು ಬೆಂಕಿಯನ್ನು ಮುಟ್ಟುತ್ತದೆ. "ಇದು ಮಗು, ನಾನು ಸುಡುತ್ತೇನೆ ಎಂಬುದು ಅದಕ್ಕೆ ತಿಳಿದಿಲ್ಲ" ಎಂದು ಬೆಂಕಿಯು ಯೋಚಿಸುವುದಿಲ್ಲ. ಇಲ್ಲಿ ಕ್ಷಮೆಗೆ ಅವಕಾಶವೇ ಇಲ್ಲ. ರಾಜ್ಯದ ಕಾನೂನುಗಳಿರುವಂತೆ, ಕಠೋರ ಪ್ರಕೃತಿ ನಿಯಮಗಳೂ ಇವೆ ಮತ್ತು ನಾವು ಅವುಗಳನ್ನು ತಿಳಿಯದಿದ್ದರೂ ಅವು ಪ್ರವರ್ತಿಸುತ್ತವೆ. ನಾವು ಅಜ್ಞಾನವಶರಾಗಿ ಏನಾದರೂ ತಪ್ಪು ಮಾಡಿದರೆ, ಅದರ ಫಲವನ್ನು ಅನುಭವಿಸಬೇಕಾಗುತ್ತದೆ. ಇದೇ ನಿಯಮ. ಅದು ರಾಜ್ಯ ನಿಯಮವಾಗಿರಲಿ, ನಿಸರ್ಗ ನಿಯಮವಾಗಿರಲಿ, ನಾವು ಅದನ್ನು ಉಲ್ಲಂಘಿಸಿದರೆ, ನಮಗೆ ಅಪಾಯ ಉಂಟು.

ಯಾವ ಮನುಷ್ಯನೂ ಈ ಭೌತಿಕ ಪ್ರಪಂಚದಲ್ಲಿ ದುಃಖಕ್ಕೀಡಾಗದಂತೆ ನೋಡಿಕೊಳ್ಳುವುದೇ ಗುರುವಿನ ಕೆಲಸವಾಗಿದೆ. ನಾನು ದುಃಖಿಯಲ್ಲ ಎಂದು ಯಾರೂ ಹೇಳುವಂತಿಲ್ಲ. ಅದು ಅಸಾಧ್ಯ. ಈ ಭೌತಿಕ ಜಗತ್ತಿನಲ್ಲಿ ಮೂರು ಬಗೆಯ ದುಃಖಗಳಿವೆ : ಆಧ್ಯಾತ್ಮಿಕ, ಅಧಿಭೌತಿಕ, ಮತ್ತು ಅಧಿದೈವಿಕ. ಈ ದುಃಖಗಳು ಭೌತಿಕ ದೇಹ ಮನಸ್ಸುಗಳಿಂದ ಮತ್ತು ಇತರ ಜೀವರಿಂದ ಹಾಗೂ ನಿಸರ್ಗಶಕ್ತಿಗಳಿಂದ ಉಂಟಾಗುತ್ತವೆ. ನಾವು ಮಾನಸಿಕ ದುಃಖವನ್ನು ಅನುಭವಿಸಬಹುದು ಅಥವಾ ಇರುವೆ, ಸೊಳ್ಳೆ ಅಥವಾ ನೊಣನೊರಜು ಮೊದಲಾದ ಪ್ರಾಣಿಗಳಿಂದ ಪೀಡೆ ಹೊಂದಬಹುದು ಅಥವಾ ಇನ್ನಾವುದೋ ಪ್ರಬಲಶಕ್ತಿಯಿಂದ ತೊಂದರೆಗೀಡಾಗಬಹುದು. ಮಳೆಯೇ ಇಲ್ಲದೆ ಹೋಗಬಹುದು ಅಥವಾ ನೆರೆಹಾವಳಿಯುಂಟಾಗಬಹುದು. ಅತ್ಯುಷ್ಣವೂ ಅಥವಾ ಅತಿಶೀತವೂ ತೊಂದರೆಕೊಡಬಹುದು. ನಿಸರ್ಗದಿಂದ ಅನೇಕ ಪೀಡೆಗಳುಂಟಾಗಬಹುದು. ಅಂತೂ ಈ ಭೌತಿಕ ಜಗತ್ತಿನಲ್ಲಿ ತಾಪತ್ರಯಗಳಿವೆ ಮತ್ತು ಪ್ರತಿಯೊಬ್ಬನೂ ಈ ದುಃಖಗಳನ್ನು ಅನುಭವಿಸುತ್ತಾನೆ. ತಾನು ಈ ದುಃಖಗಳಿಂದ ಸಂಪೂರ್ಣವಾಗಿ ದೂರವಾಗಿದ್ದೇನೆಂದು ಯಾರೂ ಹೇಳುವಂತಿಲ್ಲ.

ಹಾಗಾದರೆ ಜೀವನು ಏಕೆ ದುಃಖಪಡುತ್ತಾನೆ ಎಂದು ನಾವು ಕೇಳಬಹುದು. ಅಜ್ಞಾನದೆಶೆಯಿಂದ ಎಂಬುದೇ ಉತ್ತರ. "ನಾನು ತಪ್ಪು ಮಾಡುತ್ತಿದ್ದೇನೆ. ಪಾಪಿಷ್ಠನಾಗಿ ಜೀವಿಸುತ್ತಿದ್ದೇನೆ, ಅಂತೆಯೇ ದುಃಖಪಡುತ್ತಿದ್ದೇನೆ" ಎಂದು ಅವನು ಯೋಚಿಸುವುದಿಲ್ಲ. ಆದುದರಿಂದ ತನ್ನ ಶಿಷ್ಯನನ್ನು ಈ ಅಜ್ಞಾನದಿಂದ ಪಾರುಮಾಡುವುದೇ ಗುರುವಿನ ಪ್ರಥಮ ಕೆಲಸ. ದುಃಖದಿಂದ ದೂರವಾಗಿರಲಿ ಎಂದೇ ನಾವು ನಮ್ಮ ಮಕ್ಕಳನ್ನು ಶಾಲೆಗೆ ಕಳಿಸುತ್ತೇವೆ. ನಮ್ಮ ಮಕ್ಕಳು ಶಿಕ್ಷಣ ಪಡೆಯದಿದ್ದರೆ ಮುಂದೆ ಅವರು ಕಷ್ಟಪಡಬೇಕಾಗುತ್ತದೆ. ದುಃಖ

ಬರುವುದು ಅಜ್ಞಾನದಿಂದಾಗಿ, ಅಜ್ಞಾನವೆಂದರೆ ಅಂಧಕಾರ. ಇದೆಲ್ಲ ಗುರುವಿಗೆ ತಿಳಿದಿರುತ್ತದೆ. ತಾನೇ ಅಂಧಕಾರದಲ್ಲಿರುವವನು ಇತರರನ್ನು ರಕ್ಷಿಸುವುದು ಹೇಗೆ ? ಜ್ಞಾನ ಪ್ರಕಾರದಿಂ ತಾನೇ ರಕ್ಷಿಸಬೇಕು ? ಗುರುವು ಜ್ಞಾನಜ್ಯೋತಿಯನ್ನು ಹಿಡಿದು ಅಂಧಕಾರದಲ್ಲಿರು ಜೀವಾತ್ಮನ ಮುಂದೆ ತೋರುತ್ತಾನೆ. ಆ ಜ್ಞಾನವು ಶಿಷ್ಯನನ್ನು ಕತ್ತಲೆಯ ಕಷ್ಟದಿಂದ ಪಾರ ಮಾಡುತ್ತದೆ.

ಗುರು ಅನಿವಾರ್ಯವೇ ಎಂದು ಯಾರಾದರೂ ಕೇಳಬಹುದು. ಹೌದು ಎಂದ ವೇದಗಳು ಹೇಳುತ್ತವೆ:

ತದ್ ವಿಜ್ಞಾನಾರ್ಥಮ್ ಸ ಗುರುಂ ಏವಾಭಿಗಚ್ಛೇತ್ ।
ಸಮಿತ್‌ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥ (ಮುಂಡಕ-ಉಪನಿಷದ್ 1-2-12)

ನಾವು ಒಬ್ಬ ಗುರುವನ್ನು ಹುಡುಕಿಕೊಳ್ಳಬೇಕೆಂದು ವೇದಗಳು ನಮಗೆ ವಿಧಿಸಿವೆ. ನಿಜವಾಗಿ ವೇದಗಳು ವಿಧಿಸಿರುವುದು ಕೇವಲ ಯಾರೋ ಒಬ್ಬ ಗುರುವನ್ನಲ್ಲ. ಒಬ್ಬ ಅಧಿಕೃತ ಗುರುವನ್ನು ಹೊಂದುವುದು. ಗುರು ಶಿಷ್ಯ ಪರಂಪರೆಯಲ್ಲಿ ಬಂದವನೇ ಗುರುವಾಗಲು ಅರ್ಹನಾಗಿರುತ್ತಾನೆ. ಐದು ಸಾವಿರ ವರ್ಷಗಳ ಹಿಂದೆ ವೇದವ್ಯಾಸ್ಯರು ಮತ್ತು ಕೃಷ್ಣನು ಏನನ್ನು ಬೋಧಿಸಿದರೋ ಈಗಲೂ ಅದನ್ನೇ ಬೋಧಿಸಲಾಗುತ್ತಿದೆ. ಇವುಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ನೂರಾರು ಸಹಸ್ರಾರು ಆಚಾರ್ಯರು ಆಗಿ ಹೋಗಿದ್ದಾರೆ. ಆದರೆ ಸಂದೇಶ ಮಾತ್ರ ಅಂದಿಗೂ ಇಂದಿಗೂ ಒಂದೇ. ನಿಜವಾದ ಗುರು ದ್ವಿವಿಧವಾಗಿರುವುದು ಸಾಧ್ಯವೇ ಇಲ್ಲ. ನಿಜವಾದ ಗುರು ಪೂರ್ವಜರು ಹೇಳಿದ್ದಕ್ಕೆ ವ್ಯತಿರಿಕ್ತವಾದುದನ್ನು ಎಂದೂ ಬೋಧಿಸುವುದಿಲ್ಲ. ಕೆಲವು ಜನ ಆಧ್ಯಾತ್ಮ ಬೋಧಕರು "ನನ್ನ ಅಭಿಪ್ರಾಯದಲ್ಲಿ ನೀನು ಹೀಗೆ ಮಾಡತಕ್ಕದ್ದು" ಎಂದು ಹೇಳುವುದುಂಟು. ಹಾಗೆ ಹೇಳುವವನು ಗುರುವೇ ಅಲ್ಲ. ಇಂಥ ಗುರುಗಳು ಕೇವಲ ದುರಾತ್ಮರು. ನಿಜವಾದ ಗುರು ಏಕೈಕ ಅಭಿಪ್ರಾಯ ಹೊಂದಿರುತ್ತಾನೆ ಮತ್ತು ಆ ಅಭಿಪ್ರಾಯವು ಕೃಷ್ಣ, ವೇದವ್ಯಾಸ, ನಾರದ, ಅರ್ಜುನ ಮತ್ತು ಚೈತನ್ಯ ಮಹಾಪ್ರಭುಗಳು ಮತ್ತು ಗೋ ಸ್ವಾಮಿಗಳ ಅಭಿಪ್ರಾಯವೇ ಆಗಿರುತ್ತದೆ. ಐದು ಸಾವಿರ ವರ್ಷಗಳ ಹಿಂದೆ ಭಗವಾನ್ ಶ್ರೀ ಕೃಷ್ಣನು ಭಗವದ್ಗೀತೆಯನ್ನು ಉಪದೇಶಿಸಿದ ಮತ್ತು ವೇದವ್ಯಾಸರು ಅದನ್ನು ಗ್ರಂಥ ರೂಪಕ್ಕಿಳಿಸಿದರು. ವೇದವ್ಯಾಸರು "ಇದು ನನ್ನ ಅಭಿಪ್ರಾಯ" ಎಂದು ಹೇಳಲಿಲ್ಲ. ಬದಲಾಗಿ "ಶ್ರೀ ಭಗವಾನ್ ಉವಾಚ, ಎಂದರೆ ಪರಮ ದೇವೋತ್ತಮ ಪುರುಷನು ಹೇಳುತ್ತಾನೆ" ಎಂದರು. ವೇದವ್ಯಾಸರು ಏನೆಲ್ಲ ಬರೆದರೋ ಅದೆಲ್ಲವೂ ಮೂಲತಃ ಪರಮದೇವೋತ್ತಮ ಪುರುಷನು ಹೇಳಿದ್ದೇ ಆಗಿದೆ. ವೇದಾವ್ಯಾಸರು ಸ್ವಂತ ಅಭಿಪ್ರಾಯವನ್ನು ತಿಳಿಸಲಿಲ್ಲ.

ಅಂತೆಯೇ ವೇದವ್ಯಾಸರು ನಿಜವಾದ ಗುರು. ಅವರು ಕೃಷ್ಣನ ಅಭಿಪ್ರಾಯವನ್ನು ಎಲ್ಲಿಯೂ ಅಪಾರ್ಥ ಮಾಡಲಿಲ್ಲ. ಅವುಗಳನ್ನು ಇದ್ದಂತೆಯೇ ಪುನರುಚ್ಚರಿಸಿಕೊಂಡು ಬಂದರು. ನಾವು ಒಂದು ತಂತೀ ಸಂದೇಶವನ್ನು ಕಳಿಸಿದರೆ, ಸಂದೇಶವನ್ನು ತಲಪಿಸುವವನು ಅದನ್ನು ತಿದ್ದುವುದಿಲ್ಲ, ಸರಿ ಪಡಿಸುವುದಿಲ್ಲ ಅಥವಾ ಅದಕ್ಕೆ ಹೊಸದಾಗಿ ಏನನ್ನೂ ಸೇರಿಸುವುದಿಲ್ಲ. ಅವನು ಕೇವಲ ಅದನ್ನು ತಲಪಿಸುತ್ತಾನೆ. ಗುರು ಮಾಡಬೇಕಾದ ಕೆಲಸ ಇಷ್ಟೆ. ಗುರು

ಯಾರೇ ಆಗಿರಬಹುದು, ಆದರೆ ಸಂದೇಶ ಒಂದೇ. ಅಂತೆಯೇ ಗುರು ಎಂದರೆ ಒಬ್ಬನೇ ಎಂದು ಹೇಳುವುದುಂಟು.

ಈ ಗುರು ಶಿಷ್ಯ ಪರಂಪರೆಯಲ್ಲಿ ಅದೇ ವಿಷಯದ ಪುನರಾವೃತ್ತಿಯನ್ನು ನಾವು ಕಾಣುತ್ತೇವೆ: ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೀಗೆ ಹೇಳುತ್ತಾನೆ:

ಮನ್-ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮ್ ಏವೈಷ್ಯಸಿ ಯುಕ್ತ್ವೈವಮ್ ಆತ್ಮಾನಂ ಮತ್‌ಪರಾಯಣಃ ॥ (9-34)

"ನೀನು ನಿನ್ನ ಮನಸ್ಸನ್ನು ಸದಾ ನನ್ನ ಚಿಂತನೆಯಲ್ಲಿಯೇ ತೊಡಗಿಸು, ನನ್ನ ಭಕ್ತನಾಗು, ನಮಸ್ಕರಿಸು ಮತ್ತು ನನ್ನನ್ನೇ ಅರ್ಚಿಸು. ನೀನು ಸಂಪೂರ್ಣವಾಗಿ ನನ್ನಲ್ಲಿಯೇ ರತನಾದಾಗ ನಿಸ್ಸಂದೇಹವಾಗಿ ನೀನು ನನ್ನಲ್ಲಿಗೆ ಬರುವಿ." ಈ ಉಪದೇಶಗಳನ್ನೇ ಎಲ್ಲ ಆಚಾರ್ಯರೂ ಎಂದರೆ ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಮತ್ತು ಚೈತನ್ಯ ಮಹಾಪ್ರಭುಗಳು ಪುನರುಚ್ಚರಿಸಿದರು. ಆರು ಜನ ಗೋಸ್ವಾಮಿಗಳು ಕೂಡ ಈ ಸಂದೇಶವನ್ನೇ ನೀಡುತ್ತ ಬಂದಿದ್ದಾರೆ. ಯಾವ ವ್ಯತ್ಯಾಸವೂ ಇಲ್ಲದೆ ನಾವು ಕೇವಲ ಅವರ ಹೆಜ್ಜೆಗಳನ್ನೇ ಹಿಂಬಾಲಿಸುತ್ತಿದ್ದೇವೆ. "ನನ್ನ ಅಭಿಪ್ರಾಯದಲ್ಲಿ ಕುರುಕ್ಷೇತ್ರದ ರಣಾಂಗಣವು ಮಾನವ ದೇಹವನ್ನು ಪ್ರತಿನಿಧಿಸುತ್ತದೆ" ಇತ್ಯಾದಿಯಾಗಿ ಕೃಷ್ಣನ ಮಾತುಗಳಿಗೆ ನಾವು ವ್ಯಾಖ್ಯಾನ ಮಾಡಲು ಹೋಗುವುದಿಲ್ಲ. ಮೂರ್ಖರು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಈ ಜಗತ್ತಿನಲ್ಲಿ ತಮ್ಮ ಸ್ವಂತದ ಅಭಿಪ್ರಾಯಗಳನ್ನು ನೀಡುವ ಮೂರ್ಖಗುರುಗಳೇ ಬಹಳ. ಆದರೆ ನಾವು ಅವರನ್ನು ಪ್ರತಿಭಟಿಸುತ್ತೇವೆ. ಮೂರ್ಖಗುರು, "ನಾನೇ ದೇವರು" ಎಂದೂ ಅಥವಾ "ನಾವೆಲ್ಲರೂ ದೇವರು" ಎಂದೂ ಹೇಳಬಹುದು, ಹೇಳಿಕೊಳ್ಳಲಿ. ಆದರೆ "ದೇವರು" ಎಂಬುದಕ್ಕೆ ನಿಘಂಟಿನಲ್ಲಿ ಏನು ಅರ್ಥಕೊಡಲಾಗಿದೆಯೆಂಬುದನ್ನು ನಾವು ನೋಡಬೇಕು. ಸಾಮಾನ್ಯವಾಗಿ ದೇವರೆಂದರೆ ಭಗವಂತ ಎಂದು ನಿಘಂಟು ಹೇಳುತ್ತದೆ. "ನೀನು ಭಗವಂತನೇ" ಎಂದು ನಾವು ಅಂಥ ಗುರುವನ್ನು ಪ್ರಶ್ನಿಸಬಹುದು. ಅವನು ಅದನ್ನು ಅರಿಯಲು ಶಕ್ತನಾದರೆ 'ಪರಮ' ಎಂದರೇನು ಎಂಬುದನ್ನು ನಾವು ಅವನಿಗೆ ತಿಳಿಹೇಳಬೇಕಾಗುತ್ತದೆ. "ಪರಮ" ಎಂದರೆ "ಪರಮಾಧಿಕಾರಿ" ಎಂದು ಎಲ್ಲ ನಿಘಂಟುಗಳೂ ಹೇಳುತ್ತವೆ. ಹಾಗಾದರೆ, "ನೀನು ಪರಮಾಧಿಕಾರಿಯೇ ?" ಎಂದು ನಾವು ಅಂಥ ಗುರುವನ್ನು ಕೇಳಬಹುದು. ಅಂಥ ಮೂರ್ಖ ಗುರು "ತಾನೇ ದೇವರೆಂದು ಸಾರಿದರೂ" ಇಂಥ ಪ್ರಶ್ನೆಯನ್ನೂ ಉತ್ತರಿಸಲಾರನು. ದೇವರು ಪರಮಾತ್ಮನೂ ಪರಮಾಧಿಕಾರಿಯೂ ಆಗಿದ್ದಾನೆ. ಅವನಿಗೆ ಸರಿಸಮನಾದ ಅಥವಾ ಅವನಿಗಿಂತ ಹೆಚ್ಚಿನವನಾದ ಯಾವ ವ್ಯಕ್ತಿಯೂ ಇಲ್ಲ. ಹೀಗಿದ್ದೂ ಅನೇಕ ಗುರುದೇವರುಗಳಿದ್ದಾರೆ, ತಾವೆ 'ಪರಮ' ಎಂದು ಹೇಳಿಕೊಳ್ಳುವ ಅನೇಕ ಮೂರ್ಖರೂ ಇದ್ದಾರೆ. ಇಂಥ ಮೂರ್ಖರು ನಮ್ಮನ್ನು ಭೌತಿಕ ಪ್ರಪಂಚದ ಕತ್ತಲೆಯಿಂದ ಪಾರುಮಾಡಲು ಅಸಮರ್ಥರು. ಅವರು ದಿವ್ಯ ಜ್ಞಾನದಿಂದ ನಮ್ಮ ಕತ್ತಲೆಯನ್ನು ನಿವಾರಿಸುವುದು ಸಾಧ್ಯವಿಲ್ಲ.

ನಿಜವಾದ ಗುರುವಾದವರು ಪರಮ ಗುರುವಾದ ಭಗವಂತನು ಸಚ್ಛಾಸ್ತ್ರಗಳಲ್ಲಿ ಏನು ಹೇಳುವನೋ ಕೇವಲ ಅದನ್ನೇ ತಿಳಿಸುತ್ತಾರೆ. ಗುರುವಾದವರು ಪಾರಂಪರಿಕವಾಗಿ ಬಂದ ಉಪದೇಶವನ್ನು ಬದಲಾಯಿಸುವುದಿಲ್ಲ.

ಪರಮಸತ್ಯಸ್ವರೂಪವನ್ನು ಅರಿಯಲು ನಮ್ಮ ಸಂಶೋಧನೆ ಪ್ರಯೋಜನವಿಲ್ಲವೆಂಬುದನ್ನು ನಾವು ತಿಳಿದುಕೊಳ್ಳಬೇಕು. "ನಮ್ಮ ಗುರುವರ್ಯರು, ನನ್ನನ್ನು ಒಬ್ಬ ದೊಡ್ಡ ಮೂರ್ಖನೆಂದುಭಾವಿಸಿದ್ದರು"ಎಂದು ಸ್ವತಃ ಚೈತನ್ಯ ಮಹಾಪ್ರಭುಗಳೇ ಹೇಳಿದ್ದಾರೆ. ಯಾರು ತನ್ನ ಗುರುವಿನ ಮುಂದೆ ಮೂರ್ಖರಾಗಿರುತ್ತಾರೋ ಅವರೇ ನಿಜವಾದ ಗುರು. "ನಾನು ನನ್ನ ಗುರುವಿಗಿಂತ ಚೆನ್ನಾಗಿ ಹೇಳಬಲ್ಲೆ" ಎಂದು ಯಾರು ಹೇಳುತ್ತಾರೋ ಅವರು ಪರಮ ಮೂರ್ಖರು. ಭಗವದ್ಗೀತೆಯಲ್ಲಿ (4-2) ಶ್ರೀಕಷ್ಣನು ಹೀಗೆ ಹೇಳುತ್ತಾನೆ :

ಏವಂ ಪರಂಪರಾ ಪ್ರಾಪ್ತಮ್ ಇಮಂ ರಾಜರ್ಷಯೋವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥

"ಈ ಪರಮ ವಿಜ್ಞಾನವು ಹೀಗೆ ಗುರು ಶಿಷ್ಯ ಪರಂಪರೆಯಿಂದ ನಿರಂತರವಾಗಿ ಮುಂದುವರಿದುಕೊಂಡು ಬಂದಿದೆ ಮತ್ತು ರಾಜಋುಷಿಗಳು ಅದನ್ನು ಆ ರೀತಿಯಲ್ಲಿಯೇ ಅರಿತುಕೊಂಡಿದ್ದಾರೆ. ಆದರೆ ಕಾಲಾಂತರದಲ್ಲಿ ಆ ಪರಂಪರೆಯು ವಿಚ್ಛಿನ್ನವಾಯಿತು ಮತ್ತು ಆ ವಿಜ್ಞಾನವು ಯಥಾರೂಪದಲ್ಲಿ ನಷ್ಟವಾಯಿತು."

ಒಬ್ಬ ಗುರುವನ್ನು ಹೊಂದಿರುವುದು ಕೇವಲ ಒಂದು ಆಧ್ಯತೆಯಲ್ಲ. ಆಧ್ಯಾತ್ಮ ಜೀವನವನ್ನು ಅರಿತುಕೊಳ್ಳಲು ನಿಜವಾಗಿಯೂ ಆಸಕ್ತನಾಗಿರುವವನಿಗೆ ಮಾತ್ರ ಗುರುವಿನ ಅಗತ್ಯವಿದೆ. ಆಧ್ಯಾತ್ಮ ಜೀವನವನ್ನು, ದೇವರನ್ನು, ಸುಕರ್ಮವನ್ನು ಮತ್ತು ದೇವರೊಂದಿಗೆ ತನ್ನ ಸಂಬಂಧವನ್ನು ಅರಿತುಕೊಳ್ಳಲು ಕುತೂಹಲಿಯಾದವನಿಗೆ ಮಾತ್ರ ಗುರುಪ್ರಾಪ್ತಿಯು ಅಗತ್ಯ. ನಾವು ಈ ವಿಷಯಗಳನ್ನು ತಿಳಿದುಕೊಳ್ಳಲು ಬಹಳ ಆಸಕ್ತಿ ಹೊಂದಿದ್ದರೆ ಮಾತ್ರ ನಮಗೆ ಒಬ್ಬ ಗುರು ಬೇಕು. ಸದ್ಯ ಒಬ್ಬ ಗುರು ನೋಡಲು ಬಲು ಆಕರ್ಷಕನಾಗಿದ್ದಾನೆಂಬ ಮಾತ್ರದಿಂದ ನಾವು ಅವನ ಬಳಿ ಹೋಗಬಾರದು. ಶರಣಾಗತಿ ಅಗತ್ಯ. ಶರಣಾಗತನಾಗದೆ ನಾವು ಏನನ್ನೂ ಕಲಿಯುವುದು ಸಾಧ್ಯವಿಲ್ಲ. ಗುರುವಿನೊಡನೆ ನಾವು ವಾದ ವಿವಾದಕ್ಕಿಳಿಯಲು ಹೋದರೆ, ಅದರಿಂದ ನಮಗೆ ವಿದ್ಯೆಲಭಿಸುವುದಿಲ್ಲ. ಅರ್ಜುನನು ಹೇಗೆ ಶ್ರೀ ಕೃಷ್ಣನನ್ನು ತನ್ನ ಗುರುವೆಂದು ಅಂಗೀಕರಿಸಿದನೋ ಹಾಗೆಯೇ ನಾವೂ ಒಬ್ಬ ಗುರುವನ್ನು ಸ್ವೀಕರಿಸಬೇಕು.

ಕಾರ್ಪಣ್ಯ-ದೋಷೋಪಹತ-ಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮ ಸಮ್ಮೂಢ ಚೇತಾಃ।
ಯಚ್ಛ್ರೇಯಃ ಸ್ಯಾನ್ ನಿಶ್ಚಿತಂ ಬ್ರೂಹಿ ತನ್ಮೇಶಿಷ್ಯಸ್ತೇ ಅಹಂ ಶಾಧಿ ಮಾಂ
ತ್ವಾಂ ಪ್ರಪನ್ನಮ್ ॥

" ನನ್ನ ಕರ್ತವ್ಯವೇನೆಂಬ ಬಗ್ಗೆ ನಾನೀಗ ಗೊಂದಲಕ್ಕೀಡಾಗಿದ್ದೇನೆ ಮತ್ತು ದೌರ್ಬಲ್ಯದಿಂದಾಗಿ ನಾನು ನನ್ನ ಚಿತ್ತ ಸ್ವಾಸ್ಥ್ಯವನ್ನು ಕಳೆದುಕೊಂಡಿದ್ದೇನೆ. ಈ ಸ್ಥಿತಿಯಲ್ಲಿ ನನಗೆ ಅತ್ಯುತ್ತಮವಾದುದು ಯಾವುದೋ ಅದನ್ನು ಹೇಳಬೇಕೆಂದು ನಿನ್ನನ್ನು ಕೇಳಿಕೊಳ್ಳುತ್ತೇನೆ. ನಾನೀಗ ನಿನ್ನ ಶಿಷ್ಯ, ನಿನಗೆ ಶರಣಾಗತನಾಗಿದ್ದೇನೆ. ದಯವಿಟ್ಟು ನನಗೆ ಉಪದೇಶ ನೀಡು." (ಭಗವದ್ಗೀತಾ 2-7)

ಇದು ಗುರುವನ್ನು ಸ್ವೀಕರಿಸಿರುವ ವಿಧಾನ. ಗುರುವು ಕೃಷ್ಣನ ಮತ್ತು ಈ ಪೂರ್ವದ ಎಲ್ಲ ಆಚಾರ್ಯರ ಪ್ರತಿನಿಧಿಯಾಗಿರುತ್ತಾನೆ. ಎಲ್ಲ ಆಚಾರ್ಯರೂ ತನ್ನ ಪ್ರತಿನಿಧಿಗಳೆಂದು

ಕೃಷ್ಣ ಹೇಳುತ್ತಾನೆ; ಆದುದರಿಂದ ದೇವರಲ್ಲಿ ತೋರುವ ಗೌರವವನ್ನೇ ಗುರುವಿನಲ್ಲಿಯೂ ತೋರಬೇಕು. "ಯಸ್ಯ ಪ್ರಸಾದಾತ್ ಭಗವತ್ ಪ್ರಸಾದಃ" ಎಂದು ವಿಶ್ವನಾಥ ಚಕ್ರವರ್ತಿ ಠಾಕೂರರು ಹೇಳುವಂತೆ "ಗುರುಪ್ರಸಾದದಿಂದಲೇ ಕೃಷ್ಣನ ಪ್ರಸಾದ ಲಭಿಸುತ್ತದೆ." ಹೀಗೆ ನಾವು ನಿಜವಾದ ಗುರುಪಾದದಲ್ಲಿ ಶರಣಾಗತರಾದರೆ, ನಾವು ಭಗವಂತನಿಗೆ ಶರಣಾಗತರಾದಂತೆಯೇ ಭಗವಂತನು ಅದನ್ನು ಸ್ವೀಕರಿಸುತ್ತಾನೆ.

ಭಗವದ್ಗೀತೆಯಲ್ಲಿ (18-66) ಕೃಷ್ಣನು ಹೀಗೆ ಉಪದೇಶಿಸುತ್ತಾನೆ :

ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ ।
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

"ಎಲ್ಲ ಬಗೆಯ ಧರ್ಮಗಳನ್ನು ಪರಿತ್ಯಜಿಸಿ ನನಗೆ ಶರಣಾಗತನಾಗು. ನಾನು ನಿನ್ನನ್ನು ಸಕಲ ಪಾಪಗಳಿಂದ ಮುಕ್ತನನ್ನಾಗಿ ಮಾಡುತ್ತೇನೆ. ಭಯ ಪಡಬೇಡ." "ಕೃಷ್ಣನು ಎಲ್ಲಿದ್ದಾನೆ ಹೇಳಿ ? ನಾನು ಅವನಿಗೆ ಶರಣಾಗತನಾಗುತ್ತೇನೆ" ಎಂದು ಯಾರಾದರೂ ಕೇಳಬಹುದು. ಅದು ಹಾಗಿಲ್ಲ. ಮೊದಲು ಕೃಷ್ಣನ ಪ್ರತಿನಿಧಿಗೆ ಶರಣಾಗತರಾಗಬೇಕು. ಆಮೇಲೆ ಕೃಷ್ಣನಿಗೆ ಶರಣಾಗತರಾಗಬೇಕು. ಇದು ವಿಧಾನ. ಅಂತೆಯೇ **ಸಾಕ್ಷಾದ್ ಹರಿತ್ವೇನ ಸಮಸ್ತ ಶಾಸ್ತ್ರೈಃ** ಎಂದರೆ ಗುರು ದೇವರಿದ್ದಂತೆಯೆ ಎಂದು ಹೇಳಲಾಗುತ್ತದೆ. ನಾವು ಗುರುವಿಗೆ ನಮಸ್ಕರಿಸಿದಾಗ ದೇವರನ್ನು ನಮಸ್ಕರಿಸುತ್ತೇವೆ. ನಾವು ಭಗವತ್ ಪ್ರಜ್ಞೆಯನ್ನು ಹೊಂದಲು ಯತ್ನಿಸುತ್ತಿರುವುದರಿಂದ, ದೇವರ ಪ್ರತಿನಿಧಿಯ ಮೂಲಕ ದೇವರಿಗೆ ನಮಸ್ಕರಿಸಲು ಕಲಿಯಬೇಕು. ಎಲ್ಲ ಶಾಸ್ತ್ರಗಳಲ್ಲಿ ಗುರುವನ್ನು ದೇವರಂತೆಯೇ ವರ್ಣಿಸಲಾಗಿದೆ. ಆದರೆ ಗುರು "ನಾನೇ ದೇವರು" ಎಂದು ಸರ್ವಥಾ ಹೇಳುವುದಿಲ್ಲ. ಶಿಷ್ಯನ ಕರ್ತವ್ಯವೆಂದರೆ ಅವನು ದೇವರಿಗೆ ನಮಸ್ಕರಿಸುವಂತೆ ಗುರುವಿಗೂ ನಮಸ್ಕರಿಸಬೇಕು. ಆದರೆ ಗುರುವಾದವನು, "ನನ್ನ ಶಿಷ್ಯರು ದೇವರಿಗೆ ನಮಸ್ಕರಿಸಿದಂತೆಯೇ ನನಗೂ ನಮಸ್ಕಾರ ಮಾಡುತ್ತಿದ್ದಾರೆ; ಆದುದರಿಂದ ನಾನು ದೇವರಾಗಿದ್ದೇನೆ" ಎಂದು ಸರ್ವಥಾ ಭಾವಿಸುವುದಿಲ್ಲ. ಅವನು ಹಾಗೆ ಭಾವಿಸಲು ಪ್ರಾರಂಭಿಸಿದೊಡನೆಯೇ ದೇವರ ಬದಲಾಗಿ ಅವನು ನಾಯಿಯಾಗುತ್ತಾನೆ. ಆದುದರಿಂದ **"ಕಿಂತು ಪ್ರಭೋರ್‌ಯಃ ಪ್ರಿಯ ಏವ ತಸ್ಯ"** ಎಂದು ವಿಶ್ವನಾಥ ಚಕ್ರವರ್ತಿಗಳು ಹೇಳುತ್ತಾರೆ. ಗುರು ದೇವರ ಪರಮಾಪ್ತ ಸೇವಕನಾಗಿರುವುದರಿಂದ ನಾವು ದೇವರಿಗೆ ಸಲ್ಲಿಸುವ ಗೌರವವನ್ನೇ ಗುರುವಿಗೂ ಸಲ್ಲಿಸುತ್ತೇವೆ. ದೇವರು ಸದಾ ದೇವರೇ, ಗುರು ಸದಾ ಗುರುವೇ. ವಿನೀತ ಭಾವದ ದೃಷ್ಟಿಯಿಂದ ದೇವರು ಪೂಜ್ಯ ಗುರು. ಗುರು ಪೂಜಕ ದೇವರು (ಸೇವಕ-ಭಗವಾನ್). ಆದುದರಿಂದ ಗುರುವನ್ನು ಪ್ರಭುಪಾದ ಎಂದು ಸಂಬೋಧಿಸಲಾಗುತ್ತದೆ. ಪ್ರಭು ಎಂದರೆ "ಭಗವಾನ್" ಮತ್ತು "ಪಾದ" ಎಂದರೆ "ಸ್ಥಿತಿ". ಹೀಗೆ ಪ್ರಭುಪಾದ ಎಂದರೆ "ಭಗವಂತನ ಸ್ಥಿತಿಯನ್ನು ಗ್ರಹಿಸಿರುವವರು" ಎಂದು ಅರ್ಥ. ಇದು ಸಾಕ್ಷಾದ್ ಹರಿತ್ವೇನ ಸಮಸ್ತ ಶಾಸ್ತ್ರೈಃ ಎಂದಹಾಗೆಯೇ.

ನಾವು ಭಗವದ್ ವಿಜ್ಞಾನವನ್ನು ತಿಳಿದುಕೊಳ್ಳಲು ಉತ್ಕಟಾಕಾಂಕ್ಷೆಯುಳ್ಳವರಾಗಿದ್ದರೆ ಮಾತ್ರ ನಮಗೆ ಗುರುವಿನ ಅಗತ್ಯವಿದೆ. ನಾವು ಕೇವಲ ಒಂದು ಸಂಪ್ರದಾಯವಾಗಿ ಗುರುವನ್ನು ಹೊಂದಲು ಯತ್ನಿಸಕೂಡದು. ಒಬ್ಬ ಗುರುವನ್ನು ಅಂಗೀಕರಿಸಿದವನು ಬುದ್ಧಿವಂತಿಕೆಯಿಂದ

ಮಾತನಾಡುವನು. ಅವನು ಅಸಂಬದ್ಧ ಮಾತನಾಡುವುದಿಲ್ಲ. ಅವನು ನಿಜವಾದ ಗುರುವನ್ನು ಹೊಂದಿದ್ದಾನೆ, ಎಂಬುದಕ್ಕೆ ಇದೇ ಸಾಕ್ಷಿ. ನಾವು ಗುರುವಿಗೆ ಎಲ್ಲ ವಿಧದಲ್ಲಿಯೂ ಖಂಡಿತ ಗೌರವ ನೀಡಬೇಕು. ಆದರೆ ಅವನ ಆದೇಶಗಳನ್ನು ಹೇಗೆ ಪಾಲಿಸಬೇಕೆಂಬುದನ್ನು ನೆನಪಿನಲ್ಲಿಡ ಬೇಕು. ಭಗವದ್ ಗೀತೆಯಲ್ಲಿ ಗುರುವನ್ನು ಹೇಗೆ ಪ್ರಶ್ನಿಸಿ ತಿಳಿದುಕೊಳ್ಳಬೇಕು ಎಂಬುದನ್ನು ಶ್ರೀಕೃಷ್ಣನು ಸ್ವತಃ ಹೇಳಿದ್ದಾನೆ.

ತದ್ ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಮ್ ಜ್ಞಾನಿನಸ್ತತ್ತ್ವ ದರ್ಶನಃ ॥

"ಗುರುವಿನ ಬಳಿಗೆ ಹೋಗಿ ಸತ್ಯವನ್ನು ಅರಿಯಲು ಪ್ರಯತ್ನಿಸಿ ವಿನೀತರಾಗಿ ಅವನನ್ನು ಪ್ರಶ್ನೆಮಾಡಿ, ಅವನ ಸೇವೆಯನ್ನು ಮಾಡಬೇಕು. ಆತ್ಮ ಸಾಕ್ಷಾತ್ಕಾರ ಹೊಂದಿದ ಜೀವನು ಸತ್ಯದರ್ಶನ ಮಾಡಿರುವುದರಿಂದ, ಜ್ಞಾನೋಪದೇಶ ಮಾಡಲು ಸಮರ್ಥ ನಾಗಿರುತ್ತಾನೆ." ಶರಣಾಗತರಾಗುವುದೇ ಮೊದಲನೆಯ ಕೆಲಸ. ನಾವು ಮಹಾ ಘನ ವ್ಯಕ್ತಿ ಯನ್ನು ಹುಡುಕಿಕೊಳ್ಳಬೇಕು. ಆಮೇಲೆ ಇಚ್ಛಾಪೂರ್ವಕವಾಗಿ ಅವನಿಗೆ ಶರಣಾಗತರಾಗಬೇಕು. ನಾವು ಒಬ್ಬ ಗುರುವನ್ನು ಸ್ವೀಕರಿಸುವ ಮುಂಚೆ ಅವನಿಗೆ ಶರಣಾಗತರಾಗಬಹುದೇ ಎಂಬ ಬಗ್ಗೆ ಎಚ್ಚರಿಕೆಯಿಂದ ಅಧ್ಯಯನ ಮಾಡಬೇಕು. ಕೇವಲ ಅಂಧಶ್ರದ್ಧೆಯಿಂದ ತಕ್ಷಣ ಗುರು ವನ್ನು ಸ್ವೀಕರಿಸಬಾರದು. ಅದು ಬಲು ಅಪಾಯಕಾರಿ. ಗುರುವಾದರೂ ಕೂಡಾ ಶಿಷ್ಯ ನಾಗುವವನು ಶಿಷ್ಯತ್ವಕ್ಕೆ ಯೋಗ್ಯನಾಗಿದ್ದಾನೆಯೇ ಎಂಬುದನ್ನು ಪರೀಕ್ಷಿಸಬೇಕು. ಈ ರೀತಿ ಯಲ್ಲಿ ಗುರು ಶಿಷ್ಯ ಸಂಬಂಧ ಬೆಳೆಯಬೇಕು. ಎಲ್ಲವನ್ನು ಹೇಳಿಯಾಗಿದೆ. ನಾವು ಈ ವಿಧಾನ ವನ್ನು ಆಸಕ್ತಿಪೂರ್ವಕ ಅನುಸರಿಸಬೇಕು ಅಷ್ಟೇ. ಮೊದಲು ನಾವು ಒಬ್ಬ ನಿಜವಾದ ಗುರು ವನ್ನು ಕಂಡುಕೊಳ್ಳಬೇಕು. ಆಮೇಲೆ ಅವನೊಂದಿಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳಬೇಕು ಮತ್ತು ಅವನ ಉಪದೇಶದಂತೆ ನಡೆಯಬೇಕು. ಗುರುವು ಅಂಧಕಾರದಲ್ಲಿರುವ ಪ್ರಾಮಾಣಿಕ ಶಿಷ್ಯನಿಗೆ ಜ್ಞಾನೋಪದೇಶ ನೀಡುವುದರಿಂದ ನಮ್ಮ ಜೀವನವು ಯಶಸ್ವಿಯಾಗುತ್ತದೆ.

ಹುಟ್ಟುವಾಗ ಪ್ರತಿಯೊಬ್ಬನೂ ಮೂಢನಾಗಿರುತ್ತಾನೆ. ಹುಟ್ಟುವಾಗಲೇ ನಾವು ಜ್ಞಾನವಂತರಾದರೆ ಶಾಲೆಗೆ ಹೋಗುವ ಅವಶ್ಯಕತೆಯೇನು? ನಾವು ಜ್ಞಾನಸಂಪಾದನೆ ಮಾಡದಿದ್ದರೆ ಪಶುಗಳಿಗಿಂತ ಉತ್ತಮರಲ್ಲ. ನನಗೆ ಯಾವ ಗ್ರಂಥಗಳೂ ಬೇಡ. ನಾನು ಗುರು ವಾಗಿದ್ದೇನೆ ಎಂದು ಪಶು ಹೇಳಬಹುದು. ಆದರೆ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಮಾಣ ಪುರಸ್ಸರವಾದ ಗ್ರಂಥಗಳ ಅಧ್ಯಯನ ಮಾಡದೆ ಒಬ್ಬನು ಜ್ಞಾನ ಸಂಪಾದನೆ ಮಾಡುವು ದಾದರೂ ಹೇಗೆ ? ಮೂರ್ಖಗುರುಗಳು ಈ ಪ್ರಶ್ನೆಗಳಿಂದ ತಪ್ಪಿಸಿಕೊಳ್ಳುತ್ತಾರೆ. ನಾವೆಲ್ಲರೂ ಜನ್ಮತಃ ಮೂರ್ಖರು ಮತ್ತು ಮೂಢರು, ನಮಗೆ ಜ್ಞಾನದೀಪ್ತಿ ಬೇಕು. ನಮ್ಮ ಜೀವನವನ್ನು ಪರಿಪೂರ್ಣಗೊಳಿಸಿಕೊಳ್ಳಲು ನಾವು ಜ್ಞಾನೋಪದೇಶವನ್ನು ಪಡೆಯಬೇಕು. ನಾವು ಪರಿಪೂರ್ಣ ಜೀವನವನ್ನು ಹೊಂದದಿದ್ದರೆ ನಮ್ಮ ಜೀವನವು ವಿಫಲಗೊಳ್ಳುವುದು. ಈ ವೈಫಲ್ಯವೆಂದರೇನು? ಉಳಿವಿಗಾಗಿ ಹೋರಾಟ. ನಾವು ಉತ್ತಮ ಜೀವನ, ಶ್ರೇಷ್ಠ ಜೀವನಕ್ಕಾಗಿ ಯತ್ನಿಸುತ್ತಿದ್ದೇವೆ. ಅದಕ್ಕಾಗಿಯೇ ಬಹಳ ಕಷ್ಟ ಪಡುತ್ತಿದ್ದೇವೆ. ಆದರೆ ಉತ್ತಮ ಸ್ಥಿತಿಯೆಂದರೇನು ಎಂಬುದೇ ನಮಗೆ ಗೊತ್ತಿಲ್ಲ.

ನಾವು ಈ ಭೌತಿಕ ಪ್ರಪಂಚದಲ್ಲಿ ಹೊಂದಿರುವ ಯಾವ ಸ್ಥಾನ ಮಾನವೇ ಇರಲಿ. ಅದನ್ನು ಪರಿತ್ಯಜಿಸಬೇಕು. ಅದು ಒಳ್ಳೆಯದಾಗಿರಬಹುದು, ಕೆಟ್ಟದ್ದಾಗಿರಬಹುದು. ಏನೇ ಇದ್ದರೂ ನಾವಿಲ್ಲಿ ಉಳಿಯುವ ಹಾಗಿಲ್ಲ. ನಾವು ಲಕ್ಷಾವಧಿ ಹಣವನ್ನು ಸಂಪಾದಿಸ ಬಹುದು ಮತ್ತು "ನಾನೀಗ ಸ್ಥಿತಿವಂತನಾಗಿದ್ದೇನೆ" ಎಂದು ಭಾವಿಸಬಹುದು ಆದರೆ ಕಿಂಚಿತ್ ಆಮಾಶಯವೋ ಮಾರಿಕಾ ಬೇನಿಯೋ ನಮ್ಮನ್ನು ಮುಗಿಸಿ ಬಿಡುವುದು. ಬ್ಯಾಂಕು ಮುಳುಗಿ ಹೋದರೆ ನಮ್ಮ ಸ್ಥಿತಿ ಮುಗಿದಂತೆಯೇ ಸರಿ. ಹೀಗಾಗಿ ಈ ಭೌತಿಕ ಜಗತ್ತಿನಲ್ಲಿ ಒಳ್ಳೆಯ ಸ್ಥಿತಿ ಎಂಬುದೇ ಇಲ್ಲ. ಅದೆಲ್ಲ ಕಲ್ಪಿತ. ಈ ಭೌತಿಕ ಪ್ರಪಂಚದಲ್ಲಿ ಒಳ್ಳೆಯ ಸ್ಥಿತಿಯನ್ನು ಬಯಸುವವರೆಲ್ಲ, ಉತ್ತಮ ಸ್ಥಿತಿಯೆಂಬುದೇ ಇಲ್ಲವಾದ್ದರಿಂದ, ಕೊನೆಗೆ ವಿಫಲಗೊಳ್ಳುತ್ತಾರೆ. ಒಳ್ಳೆಯ ಸ್ಥಿತಿ ಎಂದರೇನು ಎಂಬುದನ್ನು ಭಗವದ್ಗೀತೆಯು (14-26) ಹೀಗೆ ಹೇಳುತ್ತದೆ :

ಮಾಂ ಚಯೋ ಅವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ಸಗುಣಾನ್ ಸಮತೀತ್ಯೈತಾನ್ ಬ್ರಹ್ಮ ಭೂಯಾಯ ಕಲ್ಪತೇ ॥

"ಶುದ್ಧ ಭಕ್ತಿಯುತ ಸೇವೆಯ ಆಧ್ಯಾತ್ಮ ಚಟುವಟಿಕೆಗಳಲ್ಲಿ ನಿರತನಾದವನು ಕೂಡಲೇ ಭೌತಿಕ ಪ್ರಕೃತಿ ಗುಣಗಳಿಂದ ಅತೀತನಾಗುತ್ತಾನೆ ಮತ್ತು ಆಧ್ಯಾತ್ಮ ವೇದಿಕೆಗೆ ಮೇಲೇರುತ್ತಾನೆ."

ನಾವು ಅಮೃತತ್ವವನ್ನು ಹೊಂದುವಂಥ ಜ್ಞಾನ ನೀಡುವ ವಿಜ್ಞಾನವಾವುದಾದರೂ ಇದೆಯೇ ? ಇದೆ, ನಾವು ಅಮೃತತ್ವವನ್ನು ಹೊಂದಬಹುದು. ಆದರೆ ಭೌತಿಕ ಅರ್ಥದಲ್ಲಿ ಅಲ್ಲ. ನಾವು ಈ ಬಗೆಯ ಜ್ಞಾನವನ್ನು ನಮ್ಮ ಈ ವಿಶ್ವವಿದ್ಯಾಲಯಗಳಲ್ಲಿ ಪಡೆಯುವುದು ಸಾಧ್ಯವಿಲ್ಲ. ಆದರೆ ವೇದಶಾಸ್ತ್ರಗಳಲ್ಲಿ ಈ ಬಗೆಯ ಜ್ಞಾನವಿದೆ, ಅದರ ಬಲದಿಂದ ನಾವು ಅಮರರಾಗಬಹುದು. ಆ ಅಮರತ್ವವೇ ನಮ್ಮ ಉತ್ತಮ ಸ್ಥಿತಿ. ಆಮೇಲೆ ಮತ್ತೆ ಜನನವಿಲ್ಲ, ಮತ್ತೆ ಸಾವಿಲ್ಲ, ವೃದ್ಧಾಪ್ಯವಿಲ್ಲ, ರೋಗರುಜಿನಗಳಿಲ್ಲ. ಹೀಗೆ ಗುರುವಾದವನು ಬಲು ದೊಡ್ಡ ಹೊಣೆ ಹೊರಬೇಕಾಗುತ್ತದೆ. ಅವನು ತನ್ನ ಶಿಷ್ಯನಿಗೆ ಮಾರ್ಗದರ್ಶನ ನೀಡಬೇಕು ಮತ್ತು ಶಿಷ್ಯನು ಅಮರತ್ವದ ಪರಿಪೂರ್ಣ ಸ್ಥಿತಿಯನ್ನು ಹೊಂದಲು ಅರ್ಹನಾಗುವಂತೆ ಮಾಡಬೇಕು. ಗುರು, ತನ್ನ ಶಿಷ್ಯನು ಮರಳಿ ತನ್ನ ಮನೆಗೆ ಎಂದರೆ, ಮರಳಿ ದೇವತ್ವದೆಡೆಗೆ ಹೋಗುವಂತೆ ಮಾಡಲು ಸಮರ್ಥನಾಗಿರಬೇಕು.



# ಸಂತರು ಮತ್ತು ಶೋಷಕರು

**ಯೋಗಾಭ್ಯಾಸ ನಿರತರ ಮತ್ತು ಧ್ಯಾನಾಸಕ್ತರಾದ ಜನರ ಸಂಖ್ಯೆ ದಿನವೂ ಸಾವಿರ ಸಾವಿರಗಳ ಸಂಖ್ಯೆಯಲ್ಲಿ ಬೆಳೆಯುತ್ತಿದೆ. ಒಬ್ಬ ಯೋಗ್ಯ ಮಾರ್ಗದರ್ಶಕನ ಶೋಧದಲ್ಲಿರುವ ವ್ಯಕ್ತಿಗೆ, ದುರ್ದೈವದಿಂದ, ಎಲ್ಲೆಲ್ಲಿಯೂ ವಿಸ್ಮಯಕಾರಿ ಮಾಯಾವಿಗಳ, ಸ್ವಯಮಾರೋಪಿತ ಗುರುಗಳ ಮತ್ತು ಸ್ವಯಂಘೋಷಿತ ದೇವರುಗಳ ತಂಡಗಳೇ ಕಣ್ಣಿಗೆ ಬೀಳುತ್ತಿವೆ. ಒಬ್ಬ ನಿಜವಾದ ಸಾಧಕನು ಮೋಸದ ಮತ್ತು ನಿಜವಾದ ಮಾರ್ಗದರ್ಶಕರ ವ್ಯತ್ಯಾಸವನ್ನು ಹೇಗೆ ಗುರುತಿಸಬಲ್ಲನು ಎಂಬುದನ್ನು ಶ್ರೀಲ ಪ್ರಭುಪಾದರು ತಮ್ಮ ಲಂಡನ್ ಟೈಮ್ಸ್‌ನ ಸಂದರ್ಶನ ವೊಂದರಲ್ಲಿ ವಿವರಿಸುತ್ತಾರೆ.**

ವರದಿಗಾರ : ಸ್ವಾಮಿ, ಇಂದು ಜನ ಎಂದಿಗಿಂತ ಹೆಚ್ಚು ಹೆಚ್ಚಾಗಿ ಯಾವುದೋ ಬಗೆಯ ಆಧ್ಯಾತ್ಮ ಜೀವನವನ್ನು ಅರಸುತ್ತಿದ್ದಾರೆ ಎಂದು ಕಂಡು ಬರುತ್ತಿದೆ. ಹೀಗೇಕೆ ಎಂದು ನನಗೆ ಆಶ್ಚರ್ಯವಾಗುತ್ತಿದೆ. ತಾವು ದಯವಿಟ್ಟು ವಿವರಿಸುವಿರಾ ?

ಶ್ರೀಲ ಪ್ರಭುಪಾದ : ಆಧ್ಯಾತ್ಮ ಜೀವನದ ಬಯಕೆ ಅತ್ಯಂತ ಸ್ವಾಭಾವಿಕವಾದುದು. ನಾವು ಜೀವಾತ್ಮರಾಗಿರುವುದರಿಂದ ಈ ಭೌತಿಕ ಪ್ರಪಂಚದಲ್ಲಿ ಸುಖಿಗಳಾಗಿರುವುದು ಸಾಧ್ಯವಿಲ್ಲ. ನೀವು ಮೀನನ್ನು ನೀರಿನಿಂದ ಹೊರತೆಗೆದರೆ ಅದು ಭೂಮಿಯ ಮೇಲೆ ಸುಖವಾಗಿರ ಲಾರದು. ಹಾಗೆಯೇ ನಾವೂ ಕೂಡ ಆಧ್ಯಾತ್ಮ ಪ್ರಜ್ಞಾರಹಿತರಾದರೆ ಎಂದೂ ಸುಖಿ ಗಳಾಗಿರುವುದಿಲ್ಲ. ಈಗ ಅನೇಕಾನೇಕ ಜನ ವೈಜ್ಞಾನಿಕ ಪ್ರಗತಿ ಮತ್ತು ಆರ್ಥಿಕ ಅಭಿವೃದ್ಧಿ ಇವುಗಳ ಬೆನ್ನುಹತ್ತಿದ್ದಾರೆ. ಆದರೂ ಅವರು ಸುಖಿಗಳಾಗಿಲ್ಲ, ಕಾರಣ ಇಷ್ಟೆ. ಅವು ಜೀವನದ ನಿಜವಾದ ಗುರಿಗಳಲ್ಲ. ಯುವ ಪೀಳಿಗೆಯ ಅನೇಕರಿಗೆ ಇದೀಗ ಮನವರಿಕೆಯಾಗಿದೆ. ಅವರೀಗ ಪ್ರಾಪಂಚಿಕ ಜೀವನವನ್ನು ಬದಿಗೊತ್ತಿ ಆಧ್ಯಾತ್ಮ ಜೀವನದ ಅನ್ವೇಷಣೆಗೆ ಯತ್ನಿಸುತ್ತಿದ್ದಾರೆ. ಇದು ನಿಜವಾದ ಶೋಧ. ಕೃಷ್ಣಪ್ರಜ್ಞೆಯೇ ಜೀವನದ ನಿಜವಾದ ಗುರಿ. ಅದು ಸತ್ಯ ಸಂಗತಿ. ಆದುದರಿಂದ ಪ್ರತಿಯೊಬ್ಬರೂ ಈ ಮಹಾ ಆಂದೋಲನವನ್ನು ಅಧ್ಯಯನ ಮಾಡಬೇಕು ಮತ್ತು ಅರಿತುಕೊಳ್ಳಬೇಕೆಂದು ನಾವು ಕರೆಯುತ್ತಿದ್ದೇವೆ.

ವರದಿಗಾರ : ಮೊದಲನೆಯ "ಗುರು"ವಾಗಿ ಒಬ್ಬ ಭಾರತೀಯ ಯೋಗಿಯು ಬ್ರಿಟನ್ನಿಗೆ ಬರುವ ಮುಂಚೆ, ಅನೇಕರಿಗೆ ಅದು ಗೊತ್ತೇ ಇರಲಿಲ್ಲ; ಇದ್ದಕ್ಕಿದ್ದ ಹಾಗೆಯೇ ನೂರಾರು "ಗುರು"ಗಳು ಕಾಣಿಸಿಕೊಂಡಿದ್ದಾರೆ ಎಂಬುದು ನಿಜವಾಗಿಯೂ ನನ್ನನ್ನು ಚಿಂತೆಗೀಡು ಮಾಡಿದೆ.

ಅವರು ನಿಜವಾಗಿ ಹೇಗಿರಬೇಕೋ ಹಾಗಿಲ್ಲ ಎಂದು ಕೆಲವುಸಲ ನನಗನಿಸುತ್ತದೆ. ಎಲ್ಲರೂ ಹಾಗೆಂದು ನಾನು ಹೇಳುವುದಿಲ್ಲ. ಆಧ್ಯಾತ್ಮ ಜೀವನವನ್ನು ಅನುಸರಿಸಬಯಸುವ ಜನ ತಮಗೆ ಉಪದೇಶ ನೀಡುವ ಒಬ್ಬ ನಿಜವಾದ ಗುರುವನ್ನು ಪಡೆದಿದ್ದಾರೆಂಬುದನ್ನು ಖಾತ್ರಿ ಮಾಡಿ ಕೊಳ್ಳುವಂತೆ ಜನರನ್ನು ಎಚ್ಚರಿಸುವುದು ಒಳ್ಳೆಯದಲ್ಲವೇ ?

ಶ್ರೀಲ ಪ್ರಭುಪಾದ : ಹೌದು. ಅದು ನಿಜ. ಗುರುವನ್ನು ಹುಡುಕಿಕೊಳ್ಳುವುದೇನೊ, ಒಳ್ಳೆಯದೇ. ಆದರೆ ನಿಮಗೊಬ್ಬ ಅಗ್ಗದ ಗುರು ಬೇಕಾಗಿದ್ದರೆ ಅಥವಾ ನೀವು ಮೋಸ ಹೋಗಲು ಸಿದ್ಧರಾಗಿದ್ದರೆ, ನಿಮಗೆ ಅನೇಕ ಅಂಥ ಠಕ್ಕ ಗುರುಗಳು ಸಿಕ್ಕುತ್ತಾರೆ. ಆದರೆ ನೀವು ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ, ನಿಮಗೆ ನಿಜವಾದ ಗುರು ಸಿಕ್ಕುತ್ತಾನೆ. ಎಲ್ಲವೂ ಅಗ್ಗದ ವಸ್ತು ಆಗಬೇಕೆಂದು ಜನ ಬಯಸುವುದರಿಂದ ಅವರು ಮೋಸಹೋಗುತ್ತಾರೆ. ನಮ್ಮ ಶಿಷ್ಯರು ನಿಷಿದ್ಧ ಸಂಭೋಗ, ಮಾಂಸಾಹಾರ, ಜೂಜಾಟ ಮತ್ತು ಮದ್ಯಪಾನ ಇವುಗಳಿಂದ ದೂರವಿರ ಬೇಕೆಂದು ನಾವು ಅವರಿಗೆ ಕಟ್ಟುನಿಟ್ಟಾಗಿ ಹೇಳುತ್ತೇವೆ. ಇದು ಬಹಳ ಕಷ್ಟಸಾಧ್ಯ–ತೊಂದರೆ ದಾಯಕ ಎಂದು ಜನ ಹೇಳುತ್ತಾರೆ. ಆದರೆ ಇತರರು "ನೀವು ಇಷ್ಟ ಬಂದಂತೆ ಇರಿ, ಕೇವಲ ನಮ್ಮ ಮಂತ್ರವನ್ನು ಮಾತ್ರ ಸ್ವೀಕರಿಸಿ" ಎಂದು ಹೇಳಿದರೆ, ಜನ ಅವರನ್ನು ಬಹಳ ಮೆಚ್ಚಿಕೊಳ್ಳುತ್ತಾರೆ. ಜನ ಸ್ವತಃ ಮೋಸ ಹೋಗಬಯಸುತ್ತಾರೆ. ಅಂತೆಯೇ ಮೋಸಗಾರರು ಪ್ರವೇಶಿಸುತ್ತಾರೆ. ಕಠೋರ ನಿಯಮಗಳನ್ನು ಪಾಲಿಸಲು ಯಾರೂ ಇಚ್ಛಿಸುವುದಿಲ್ಲ. ಮಾನವ ಜನ್ಮವಿರುವುದೇ ಕಠೋರ ನಿಯಮಾನುಸಾರಕ್ಕಾಗಿ, ಆದರೆ ಅದಕ್ಕೆ ಯಾರೂ ಸಿದ್ಧರಿಲ್ಲ. ಪರಿಣಾಮವೆಂದರೆ, ಮೋಸಗಾರರು ಬಂದು, "ನಿಮ್ಮ ಇಷ್ಟ ಬಂದುದನ್ನು ಮಾಡಿ, ನನಗೆ ಹಣ ಕೊಡಿ ಸಾಕು, ನಾನು ನಿಮಗೆ ಮಂತ್ರೋಪದೇಶ ಮಾಡುತ್ತೇನೆ, ನೀವು ಆರು ತಿಂಗಳೊಳಗಾಗಿ ದೇವರಾಗುತ್ತೀರಿ" ಎಂದು ಹೇಳುತ್ತಾರೆ. ಇದೆಲ್ಲ ನಡೆದಿದೆ. ನೀವು ಹೀಗೆ ಮೋಸಹೋಗ ಬಯಸಿದರೆ ಮೋಸಗಾರರು ನಿಮ್ಮಲ್ಲಿಗೆ ಬರುತ್ತಾರೆ.

ವರದಿಗಾರ : ಆಧ್ಯಾತ್ಮ ಜೀವನವನ್ನು ನಡೆಸಲು ನಿಜವಾಗಿ ಆಸಕ್ತನಾದ ವ್ಯಕ್ತಿಯು ಇಂಥ ತಪ್ಪು ಗುರುವಿನಿಂದ ಮೋಸಕ್ಕೊಳಗಾದರೆ ಅವನ ಗತಿಯೇನು ?

ಶ್ರೀಲ ಪ್ರಭುಪಾದ : ಸಾಮಾನ್ಯ ವಿದ್ಯೆ ಕಲಿಯಬೇಕಾದರೂ ನಿಮಗೆ ಸಾಕಷ್ಟು ಸಮಯ, ಶ್ರಮ ಮತ್ತು ತಿಳಿವಳಿಕೆ ಅಗತ್ಯ. ಹೀಗಿರುವಾಗ, ನೀವು ಆಧ್ಯಾತ್ಮ ಜೀವನವನ್ನು ಬಯಸುವುದಾದರೆ ನಿಮಗೆ ಅದರಲ್ಲಿ ಉತ್ಕಟವಾದ ಆಸಕ್ತಿ ಇರಬೇಕು. ಯಾವುದೋ ಮಂತ್ರ ಮಾಯೆಯಿಂದ ಆರು ತಿಂಗಳಲ್ಲಿ ಒಬ್ಬನು ದೇವರಾಗುವುದುಂಟೆ ? ಯಾಕೆ ಜನ ಇಂಥದನ್ನು ಬಯಸುತ್ತಾರೆ. ಹಾಗೆ ಬಯಸಿದರೆ ಅವರು ಮೋಸಹೋಗಲು ಸಿದ್ಧರಾಗಿದ್ದಾರೆಂದು ಅರ್ಥ ಅಷ್ಟೆ.

ವರದಿಗಾರ : ತಾನು ನಿಜವಾದ ಗುರುವನ್ನು ಹೊಂದಿದ್ದೇನೆಂದು ಒಬ್ಬನು ಹೇಳುವುದು ಹೇಗೆ ಸಾಧ್ಯ ?

ಶ್ರೀಲ ಪ್ರಭುಪಾದ : ನನ್ನ ಶಿಷ್ಯರಲ್ಲಿ ಯಾರಾದರೂ ಈ ಪ್ರಶ್ನೆಗೆ ಉತ್ತರಿಸುವಿರಾ ?

ಶಿಷ್ಯ : ಒಂದು ಸಲ ಜಾನ್ ಲೆನ್ನನ್ ಅವರು, "ನಿಜವಾದ ಗುರು ಯಾರೆಂಬುದನ್ನು ನಾನು ಹೇಗೆ ತಿಳಿದುಕೊಳ್ಳಬೇಕು" ಎಂದು ನಿಮ್ಮನ್ನು ಕೇಳಿದರು. "ಯಾರು ಅತ್ಯಂತ ಕೃಷ್ಣ

ಹುಚ್ಚರೋ ಆದರೇ ನಿಜವಾದ ಗುರು ಎಂದು ತಿಳಿದುಕೊಳ್ಳಿರಿ" ಎಂದು ನೀವು ಉತ್ತರಿಸಿದಿರಿ. ಇದು ನನಗೆ ನೆನಪಿದೆ.

ಶ್ರೀಲ ಪ್ರಭುಪಾದ : ಹೌದು. ನಿಜವಾದ ಗುರು ದೇವರ ಪ್ರತಿನಿಧಿ, ಅವನು ದೇವರ ವಿಷಯವನ್ನು ಬಿಟ್ಟು ಇನ್ನೇನೂ ಹೇಳುವುದಿಲ್ಲ. ನಿಜವಾದ ಗುರುವಿಗೆ ಪ್ರಾಪಂಚಿಕ ಜೀವನದಲ್ಲಿ ಆಸಕ್ತಿಯಿರುವುದಿಲ್ಲ. ಅವನು ಸದಾ ಸರ್ವದಾ ದೇವರನ್ನೇ ಬೆನ್ನುಹತ್ತಿರುತ್ತಾನೆ. ಇದು ನಿಜವಾದ ಗುರುವಿನ ಒಂದು ಲಕ್ಷಣ. ಅವನು ಸದಾ ಬ್ರಹ್ಮನಿಷ್ಠನು. ಅವನು ಪರಮ ಸತ್ಯ ಸ್ವರೂಪನಲ್ಲಿ ತಲ್ಲೀನನಾಗಿರುತ್ತಾನೆ. ಮುಂಡಕ ಉಪನಿಷತ್ತಿನಲ್ಲಿ, "ನಿಜವಾದ ಗುರು ವೇದಶಾಸ್ತ್ರ ಪಾರಂಗತನೂ ಸಂಪೂರ್ಣ ಭಗವದವಲಂಬಿಯೂ" ಎಂದರೆ—**ಶ್ರೋತ್ರಿಯಮ್ ಬ್ರಹ್ಮನಿಷ್ಠಮ್** ಎಂದು ಹೇಳಲಾಗಿದೆ. ಬ್ರಹ್ಮ ಎಂದರೇನು ಮತ್ತು ಅವನಲ್ಲಿ ಹೇಗೆ ಸ್ಥಿತನಾಗಿರಬೇಕು ಎಂಬುದನ್ನು ಅವನು ಅರಿತವನಾಗಿರಬೇಕು. ಈ ಲಕ್ಷಣಗಳನ್ನು ವೇದ ಶಾಸ್ತ್ರಗಳಲ್ಲಿ ನಿರೂಪಿಸಲಾಗಿದೆ. ನಾನು ಈಗಾಗಲೇ ಹೇಳಿದಂತೆ, ನಿಜವಾದ ಗುರು ದೇವರ ಪ್ರತಿನಿಧಿ. ಒಬ್ಬ ವೈಸ್ರಾಯ್ ರಾಜನನ್ನು ಪ್ರತಿನಿಧಿಸುವಂತೆ, ಗುರು ದೇವರನ್ನು ಪ್ರತಿ ನಿಧಿಸುತ್ತಾನೆ. ನಿಜವಾದ ಗುರು ತಾನು ಏನನ್ನೂ ಕಲ್ಪಿಸುವುದಿಲ್ಲ. ಅವನು ಹೇಳುವುದೆಲ್ಲವೂ ವೇದಶಾಸ್ತ್ರಗಳಿಗೂ ಪೂರ್ವಾಚಾರ್ಯರಿಗೂ ಅನುಸಾರವಾಗಿರುತ್ತದೆ. ಅವನು ನಿಮಗೊಂದು ಮಂತ್ರ ನೀಡಿ ನೀವು ಆರು ತಿಂಗಳಲ್ಲಿ ದೇವರಾಗುವಿರಿ ಎಂದು ಹೇಳುವುದಿಲ್ಲ. ಇದು ಗುರುವಿನ ಕೆಲಸವಲ್ಲ. ಪ್ರತಿಯೊಬ್ಬನೂ ದೇವರ ಭಕ್ತನಾಗುವಂತೆ ಪ್ರಚಾರ ಮಾಡುವುದೇ ಗುರುವಿನ ಕೆಲಸ. ಅದೇ ಗುರುವಿನ ಕೆಲಸದ ಮುಖ್ಯಾಂಶ. ನಿಜವಾಗಿ ಹೇಳುವುದಾದರೆ, ಅವನಿಗೆ ಬೇರೆ ಇನ್ನೇನೂ ಕೆಲಸವಿಲ್ಲ. "ಯಾರೇ ಸಿಕ್ಕಲಿ, ನೀವು ಭಗವತ್ ಪ್ರಜ್ಞೆಯನ್ನು ಹೊಂದಿರಿ" ಎಂದು ಅವನು ಹೇಳುತ್ತಾನೆ ಅಷ್ಟೆ. ಯಾವ ರೀತಿಯಲ್ಲಿಯೇ ಆಗಲಿ ದೇವರ ಪರ ಉಪದೇಶ ಮಾಡುತ್ತ ಪ್ರತಿಯೊಬ್ಬನೂ ದೇವರ ಭಕ್ತನಾಗುವಂತೆ ಪ್ರಯತ್ನಿಸುವವನೇ ನಿಜವಾದ ಗುರು.

ವರದಿಗಾರ : ಕ್ರೈಸ್ತ ಪಾದರಿಗಳ ಬಗ್ಗೆ ಏನು ಹೇಳುತ್ತೀರಿ ?

ಶ್ರೀಲ ಪ್ರಭುಪಾದ : ಕ್ರಿಶ್ಚನ್, ಮುಹಮ್ಮದೀಯ, ಹಿಂದೂ ಯಾರೇ ಆಗಿರಲಿ, ಅದು ಮುಖ್ಯವಲ್ಲ. ಅವನು ಕೇವಲ ದೇವರ ಪರ ಮಾತನಾಡುತ್ತಿದ್ದರೆ ಮಾತ್ರ ಅವನು ಗುರು. ಉದಾಹರಣೆಗೆ : ಏಸು ಕ್ರಿಸ್ತ. ಆತನು "ನೀವು ದೇವರನ್ನು ಪ್ರೀತಿಸಿ" ಎಂದು ಜನರಿಗೆ ಬೋಧಿಸಿದ. ಹಿಂದೂ, ಮುಸ್ಲಿಮ್ ಅಥವಾ ಕ್ರಿಶ್ಚನ್ ಏನೇ ಆಗಿರಲಿ, ಅದು ಮುಖ್ಯವಲ್ಲ. ದೇವರನ್ನು ಪ್ರೀತಿಸುವಂತೆ ಅವನು ಜನರ ಮನವೊಲಿಸಿದರೆ ಅವನೇ ಗುರು. ಇದೇ ಪರೀಕ್ಷೆ. ಗುರುವಾದವನು "ನಾನೇ ದೇವರು" ಅಥವಾ "ನಾನು ನಿಮ್ಮನ್ನು ದೇವರನ್ನಾಗಿ ಮಾಡುತ್ತೇನೆ" ಎಂದು ಸರ್ವಥಾ ಹೇಳುವುದಿಲ್ಲ.

ನಿಜವಾದ ಗುರುವಾದವನು "ನಾನು ದೇವರ ಸೇವಕ, ನಿಮ್ಮನ್ನು ದೇವರ ಸೇವಕನನ್ನಾಗಿ ಮಾಡುತ್ತೇನೆ" ಎಂದು ಹೇಳುತ್ತಾನೆ. ಗುರು ಯಾವ ಬಗೆಯ ಪೋಷಾಕು ಧರಿಸಿದ್ದಾನೆ ಎಂಬುದು ಮಹತ್ವದ್ದಲ್ಲ. ಚೈತನ್ಯ ಮಹಾ ಪ್ರಭುಗಳು "ಕೃಷ್ಣನನ್ನು ಕುರಿತು ಜ್ಞಾನೋಪದೇಶ ಮಾಡುವವನೇ ಗುರು" ಎಂದು ಹೇಳಿದರು. ನಿಜವಾದ ಗುರು ಜನರು ದೇವರ, ಎಂದರೆ ಕೃಷ್ಣನ ಭಕ್ತರಾಗುವಂತೆ ಪ್ರಯತ್ನಿಸುತ್ತಾನೆ. ಅವರಿಗೆ ಬೇರೆ ಇನ್ನಾವ ಕೆಲಸವೂ ಇಲ್ಲ.

ವರದಿಗಾರ : ಆದರೆ ಕೆಟ್ಟ ಗುರುಗಳು......

ಶ್ರೀಲಾ ಪ್ರಭುಪಾದ : "ಕೆಟ್ಟ" ಗುರು ಎಂದರೇನು ?

ವರದಿಗಾರ : ಕೆಟ್ಟ ಗುರು ಹಣವನ್ನೋ ಕೀರ್ತಿಯನ್ನೋ ಬಯಸುತ್ತಾನೆ.

ಶ್ರೀಲಾ ಪ್ರಭುಪಾದ : ಅವನು ಕೆಟ್ಟವನಾದರೆ ಅವನು ಗುರು ಹೇಗೆ ಆಗುತ್ತಾನೆ?(ನಗೆ) ಕಬ್ಬಿಣವು ಚಿನ್ನವಾಗುವುದೆಂತು ? ಗುರು ಕೆಟ್ಟವನಾಗುವುದು ಸಾಧ್ಯವೇ ಇಲ್ಲ. ಒಬ್ಬನು ಕೆಟ್ಟವನಾಗಿದ್ದರೆ ಅವನು ಗುರುವಾಗಿರುವುದಿಲ್ಲ. ಆದುದರಿಂದ. ನೀವು "ಕೆಟ್ಟಗುರು" ಎಂದು ಹೇಳಲು ಬರುವುದಿಲ್ಲ. ಅದು ವಿರೋಧೋಕ್ತಿ. ನಿಜವಾದ ಗುರು ಯಾರೆಂಬುದನ್ನು ಅರಿತು ಕೊಳ್ಳಲು ನೀವು ಪ್ರಯತ್ನ ಮಾತ್ರ ಮಾಡಬೇಕು. ನಿಜ ಗುರುವಿನ ಲಕ್ಷಣವೆಂದರೆ ಅವನು ಸದಾ ದೇವರ ಬಗ್ಗೆಯೇ ಮಾತನಾಡುತ್ತಾನೆ. ಅಷ್ಟೆ. ಅವನು ಬೇರೆ ಅಸಂಬದ್ಧ ಮಾತಾನಾಡುತ್ತಿದ್ದರೆ ಅವನು ಗುರುವಲ್ಲ. ಗುರು ಕೆಟ್ಟವನಾಗಿರುವುದು ಸಾಧ್ಯವಿಲ್ಲ. ಕೆಂಪು ಗುರು, ಬಿಳಿಯ ಗುರು ಆಗುವುದು ಹೇಗೆ ಸಾಧ್ಯವಿಲ್ಲವೊ, ಹಾಗೆಯೇ ಕೆಟ್ಟ ಗುರುವಾಗುವ ಪ್ರಶ್ನೆಯೂ ಉದ್ಭವಿಸುವುದಿಲ್ಲ. ಗುರು ಎಂದರೆ "ನಿಜವಾದ ಗುರುವೆ". ನಾವು ತಿಳಿದುಕೊಳ್ಳ ಬೇಕಾದುದೇನೆಂದರೆ ನಿಜವಾದ ಗುರು ಕೇವಲ ದೇವರ ಬಗ್ಗೆ ಮಾತನಾಡಬೇಕು, ಮತ್ತು ಜನರು ದೇವರ ಭಕ್ತರಾಗುವಂತೆ ಪ್ರಯತ್ನ ಮಾಡುತ್ತಿರಬೇಕು. ಅವನು ಹೀಗೆ ಮಾಡುತ್ತಿದ್ದರೆ ಅವನೇ ನಿಜವಾದ ಗುರು.

ವರದಿಗಾರ : ನಾನು ನಿಮ್ಮ ಸಂಘದಲ್ಲಿ ದೀಕ್ಷೆ ವಹಿಸಬಯಸಿದರೆ ನಾನೇನು ಮಾಡಬೇಕು ?

ಶ್ರೀಲ ಪ್ರಭುಪಾದ : ಮೊದಲನೆಯದಾಗಿ ನೀವು ನಿಷಿದ್ಧ ಲೈಂಗಿಕ ಜೀವನವನ್ನು ಬಿಡಬೇಕು.

ವರದಿಗಾರ : ಹಾಗೆಂದರೆ ಎಲ್ಲ ಲೈಂಗಿಕ ಜೀವನವನ್ನೇ ಬಿಡಬೇಕೆ ? ನಿಷಿದ್ಧ ಲೈಂಗಿಕ ಜೀವನವೆಂದರೆ ಏನು ?

ಶ್ರೀಲ ಪ್ರಭುಪಾದ : ನಿಷಿದ್ಧ ಲೈಂಗಿಕ ಸಂಪರ್ಕ ಎಂದರೆ ವಿವಾಹ ಬಾಹಿರವಾದ ಸಂಪರ್ಕ. ಪಶುಗಳು ಅನಿರ್ಬಂಧ ಕಾಮದಲ್ಲಿ ತೊಡಗುತ್ತವೆ. ಆದರೆ ಮನುಷ್ಯ ವರ್ಗದಲ್ಲಿ ನಿರ್ಬಂಧಗಳಿವೆ. ಪ್ರತಿಯೊಂದು ದೇಶದಲ್ಲಿ ಮತ್ತು ಪ್ರತಿಯೊಂದು ಧರ್ಮದಲ್ಲಿ ಲೈಂಗಿಕ ಜೀವನವನ್ನು ನಿರ್ಬಂಧಿಸುವ ಒಂದಿಲ್ಲೊಂದು ಪದ್ಧತಿ ಇದೆ. ನೀವು ಟೀ, ಸಿಗರೇಟು, ಮದ್ಯ, ಮಾರಿಯೋನಾ, ಮಾದಕಗೊಳಿಸುವ ಯಾವುದೇ ವಸ್ತು ಇವೆಲ್ಲವುಗಳನ್ನು ಬಿಡಬೇಕಾಗುವುದು.

ವರದಿಗಾರ : ಮತ್ತೇನು ಬಿಡಬೇಕು ?

ಶ್ರೀಲ ಪ್ರಭುಪಾದ : ನೀವು ಮಾಂಸ, ಮೊಟ್ಟೆ ಮತ್ತು ಮೀನು ತಿನ್ನುವುದನ್ನು ಬಿಡಬೇಕು. ಜೂಜಾಟವನ್ನು ನಿಲ್ಲಿಸಬೇಕು. ಈ ನಾಲ್ಕು ದುಷ್ಕರ್ಮಗಳನ್ನು ಬಿಡದ ಹೊರತು ನಿಮಗೆ ದೀಕ್ಷೆ ನೀಡಲಾಗುವುದಿಲ್ಲ.

ವರದಿಗಾರ : ಇಡೀ ವಿಶ್ವದಲ್ಲಿ ನಿಮ್ಮ ಶಿಷ್ಯರ ಸಂಖ್ಯೆ ಎಷ್ಟಿದೆ ?

ಶ್ರೀಲ ಪ್ರಭುಪಾದ : ಒಳ್ಳೆಯದಕ್ಕೆ ಅನುಯಾಯಿಗಳು ಬಹಳ ಕಡಿಮೆ. ಕೆಟ್ಟದ್ದಕ್ಕೆ ಅವರ ಸಂಖ್ಯೆ ಹೆಚ್ಚು. ಆದರೂ ನಮಗೆ ದೀಕ್ಷಾ ಬದ್ಧರಾದ 5000 ಶಿಷ್ಯರಿದ್ದಾರೆ.

ವರದಿಗಾರ : ಕೃಷ್ಣಪ್ರಜ್ಞಾ ಆಂದೋಲನವು ಕಾಲಕಾಲಕ್ಕೆ ಬೆಳೆಯುತ್ತಿದೆಯೆ ?

ಶ್ರೀಲ ಪ್ರಭುಪಾದ : ಹೌದು, ಬೆಳೆಯುತ್ತಿದೆ. ಆದರೆ ಸಾವಧಾನವಾಗಿ; ಕಾರಣ ವೆಂದರೆ ನಮ್ಮಲ್ಲಿ ಅನೇಕ ನಿರ್ಬಂಧಗಳಿವೆ, ಜನರಿಗೆ ನಿರ್ಬಂಧಗಳು ಹಿಡಿಸುವುದಿಲ್ಲ.

ವರದಿಗಾರ : ನಿಮ್ಮ ಶಿಷ್ಯರ ಸಂಖ್ಯೆ ಎಲ್ಲಿ ಹೆಚ್ಚಾಗಿದೆ.

ಶ್ರೀಲ ಪ್ರಭುಪಾದ : ಅಮೆರಿಕಾದಲ್ಲಿ, ಯೂರೋಪಿನಲ್ಲಿ, ದಕ್ಷಿಣ ಅಮೆರಿಕಾದಲ್ಲಿ ಮತ್ತು ಆಸ್ಟ್ರೇಲಿಯಾದಲ್ಲಿ. ಭಾರತದಲ್ಲಂತೂ ಕೃಷ್ಣಪ್ರಜ್ಞೆಯ ಸಾಧಕರು ಲಕ್ಷೋಪಲಕ್ಷವಾಗಿ ದ್ದಾರೆ.

ವರದಿಗಾರ : ನಿಮ್ಮ ಆಂದೋಲನದ ಗುರಿ ಏನು ? ಎಂಬುದನ್ನು ದಯವಿಟ್ಟು ಹೇಳುವಿರಾ ?

ಶ್ರೀಲ ಪ್ರಭುಪಾದ : ಮಾನವನ ಮೂಲ ಪ್ರಜ್ಞೆಯನ್ನು ಜಾಗೃತಗೊಳಿಸುವುದೇ ಕೃಷ್ಣಪ್ರಜ್ಞಾ ಆಂದೋಲನದ ಉದ್ದೇಶವಾಗಿದೆ. ಸದ್ಯ ನಮ್ಮ ಪ್ರಜ್ಞೆಯು ಉಪಾಧಿಬದ್ಧ ವಾಗಿದೆ. ಒಬ್ಬನು "ನಾನು ಆಂಗ್ಲನು," ಮತ್ತೊಬ್ಬನು "ನಾನು ಅಮೆರಿಕನ್" ಎಂದು ಹೇಳುತ್ತಾರೆ. ಆದರೆ ಈ ಯಾವ ನಾವೋಪಾಧಿಗಳಿಗೂ ನಾವು ಸೇರಿದವರಲ್ಲ. ನಾವೆಲ್ಲರೂ ದೇವರ ವಿಭಿನ್ನಾಂಶರು. ಅದೇ ನಮ್ಮ ನಿಜ ಸ್ವರೂಪ. ಪ್ರತಿಯೊಬ್ಬನೂ ಆ ಪ್ರಜ್ಞೆಗೆ ಬಂದರೆ ಸಾಕು, ಜಗತ್ತಿನ ಸಮಸ್ಯೆಗಳೆಲ್ಲ ಪರಿಹಾರವಾಗುತ್ತವೆ. ಆಗ ನಾವೆಲ್ಲ ಒಂದೇ--ಜೀವಾತ್ಮ ಸ್ವರೂಪ ದವರು ಎಂಬುದು ನಮಗೆ ಅರಿವಾಗುತ್ತದೆ. ಅದೇ ಬಗೆಯ ಜೀವಾತ್ಮವು ಎಲ್ಲರಲ್ಲಿಯೂ ಇದೆ, ಅದು ವಿವಿಧ ಉಡುಪಿನಲ್ಲಿ ಇರಬಹುದಷ್ಟೆ. ಭಗವದ್ಗೀತೆಯಲ್ಲಿ ಈ ವಿವರಣೆ ನೀಡಲಾಗಿದೆ.

ಕೃಷ್ಣಪ್ರಜ್ಞೆಯೆಂಬುದು ನಿಜವಾಗಿಯೂ ಒಂದು ಶುದ್ಧೀಕರಣ ವಿಧಾನ (**ಸರ್ವೋಪಾಧಿ ವಿನಿರ್ಮುಕ್ತಂ**) ಜನರನ್ನು ಎಲ್ಲ ಉಪಾಧಿಗಳಿಂದ ಮುಕ್ತಗೊಳಿಸುವುದೇ ಇದರ ಉದ್ದೇಶ ವಾಗಿದೆ. (**ತತ್ ಪರತ್ವೇನನಿರ್ಮಲಂ**). ನಮ್ಮ ಪ್ರಜ್ಞೆಯು ಎಲ್ಲ ಉಪಾಧಿಗಳಿಂದ ಶುದ್ಧ ವಾದಾಗ,ನಮ್ಮ ಶುದ್ಧ ಇಂದ್ರಿಯಗಳಿಂದ ನಾವು ಮಾಡುವ ಕರ್ಮಗಳು ನಮ್ಮನ್ನು ಪರಿಪೂರ್ಣ ಗೊಳಿಸುತ್ತವೆ. ಕೊನೆಗೆ ನಾವು ಮಾನವ ಜೀವಿತದ ಆದರ್ಶ ರೂಪವಾದ ಪರಿಪೂರ್ಣತೆಯನ್ನು ತಲಪುತ್ತೇವೆ. ಕೃಷ್ಣಪ್ರಜ್ಞೆಯು ಕೂಡ ಬಹಳ ಸುಲಭೋಪಾಯವಾಗಿದೆ. ಅದಕ್ಕಾಗಿ ಯಾರೂ ದೊಡ್ಡ ವೇದಾಂತಿಯಾಗಲಿ, ವಿಜ್ಞಾನಿಯಾಗಲಿ ಅಥವಾ ಇನ್ನೇನಾದರೂ ಆಗಿರಬೇಕಾಗಿಲ್ಲ. ನಾವು ಕೇವಲ ಭಗವನ್ನಾಮ ಸಂಕೀರ್ತನೆ ಮಾಡಬೇಕು ಮತ್ತು ಅವನ ನಾಮ ರೂಪ ಗುಣಗಳೆಲ್ಲ ಪರಿಪೂರ್ಣವಾದವುಗಳೆಂದು ಅರಿತುಕೊಳ್ಳಬೇಕು

ಕೃಷ್ಣಪ್ರಜ್ಞೆಯೆಂಬುದೇ ಒಂದು ದೊಡ್ಡ ವಿಜ್ಞಾನವಾಗಿದೆ. ಆದರೆ ವಿಶ್ವವಿದ್ಯಾ ಲಯಗಳಲ್ಲಿ ಈ ವಿಜ್ಞಾನದ ವಿಭಾಗವೇ ಇಲ್ಲದಿರುವುದು ದುರ್ದೈವದ ಸಂಗತಿ, ಆದುದರಿಂದ

ಮಾನವ ಕಲ್ಯಾಣದಲ್ಲಿ ನಿಜವಾಗಿ ಆಸಕ್ತರಾದ ಜನರೆಲ್ಲರೂ ಈ ಮಹಾ ಆಂದೋಲನವನ್ನು ಅರ್ಥಮಾಡಿಕೊಳ್ಳಲು ಮತ್ತು ಸಾಧ್ಯವಿದ್ದರೆ, ಇದರಲ್ಲಿ ಭಾಗವಹಿಸಿ ನಮ್ಮೊಡನೆ ಸಹಕರಿಸಲು ಆಹ್ವಾನಿಸುತ್ತೇವೆ. ಇದರಿಂದ ಜಗತ್ತಿನ ಸಮಸ್ಯೆಗಳು ಪರಿಹಾರವಾಗುತ್ತವೆ. ಇದೇ ಆಧ್ಯಾತ್ಮ ಜ್ಞಾನದ ಅತ್ಯಂತ ಮಹತ್ವದ ಮತ್ತು ಪ್ರಮಾಣಭೂತವಾದ ಶಾಸ್ತ್ರವೆನಿಸಿದ ಭಗವದ್ಗೀತೆಯ ನಿರ್ಧಾರವಾಕ್ಯವೂ ಆಗಿದೆ. ನಿಮ್ಮಲ್ಲಿ ಅನೇಕರು ಭಗವದ್ಗೀತೆಯ ವಿಚಾರವನ್ನು ಕೇಳಿದ್ದೀರಿ. ನಮ್ಮ ಆಂದೋಲನವು ಅದನ್ನೇ ಆಧರಿಸಿದೆ. ನಮ್ಮ ಆಂದೋಲನಕ್ಕೆ ಭಾರತದಲ್ಲಿ ಎಲ್ಲ ಮಹಾ ಆಚಾರ್ಯರಿಂದ ಅಂಗೀಕಾರ ದೊರೆತಿದೆ–ರಾಮಾನುಜಾಚಾರ್ಯ, ಮಧ್ವಾಚಾರ್ಯ, ಭಗವಾನ್ ಚೈತನ್ಯ ಮತ್ತು ಇನ್ನೂ ಅನೇಕರು. ನೀವೆಲ್ಲ ಪತ್ರಿಕಾ ಪ್ರತಿನಿಧಿಗಳಾಗಿದ್ದೀರಿ, ಮಾನವ ಕಲ್ಯಾಣದ ದೃಷ್ಟಿಯಿಂದ ನೀವೆಲ್ಲರೂ ಈ ಆಂದೋಲನವನ್ನು ಅರಿತ.ಕೊಳ್ಳಲೆತ್ನಿಸ ಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ವರದಿಗಾರ : ದೇವರನ್ನು ಅರಿಯಲು ನಿಮ್ಮ ಆಂದೋಲನವೇ ಏಕೈಕ ಮಾರ್ಗ ಎಂದು ನೀವು ಭಾವಿಸುವಿರಾ ?

ಶ್ರೀಲಪ್ರಭುಪಾದ : ಹೌದು.

ವರದಿಗಾರ : ಆ ಬಗ್ಗೆ ಖಾತ್ರಿಯೇನು ?

ಶ್ರೀಲ ಪ್ರಭುಪಾದ : ಅದಕ್ಕೆ ಪ್ರಮಾಣಗಳು ಮತ್ತು ಭಗವಂತನಾದ ಕೃಷ್ಣನೇ ಆಧಾರ. ಕೃಷ್ಣ ಹೇಳುತ್ತಾನೆ:

ಸರ್ವ ಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ ।
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

"ಸರ್ವ ಧರ್ಮಗಳನ್ನೂ ಪರಿತ್ಯಜಿಸಿ ಕೇವಲ ನನಗೆ ಶರಣಾಗತನಾಗು. ನಾನು ನಿನ್ನನ್ನು ಎಲ್ಲ ಪಾಪಕರ್ಮಗಳ ಫಲಗಳಿಂದ ವಿಮುಕ್ತಗೊಳಿಸುತ್ತೇನೆ. ಭಯಪಡಬೇಡ." (ಭಗವದ್ಗೀತಾ 18-66)

ವರದಿಗಾರ : ಶರಣಾಗತಿ ಎಂದರೆ ಕುಟುಂಬವನ್ನೆಲ್ಲ ತೊರೆದು ಬರಬೇಕೆ ?

ಶ್ರೀಲ ಪ್ರಭುಪಾದ : ಇಲ್ಲ.

ವರದಿಗಾರ : ನಾನು ದೀಕ್ಷೆ ಪಡೆದೆನೆಂದು ತಿಳಿಯೋಣ. ಆಗ ನಾನು ಬಂದು ಈ ಮಂದಿರದಲ್ಲಿಯೇ ಇರಬೇಕೆ ?

ಶ್ರೀಲ ಪ್ರಭುಪಾದ : ಅಗತ್ಯವಿಲ್ಲ.

ವರದಿಗಾರ : ನಾನು ನನ್ನ ಮನೆಯಲ್ಲಿಯೇ ಇರಬಹುದು !

ಶ್ರೀಲ ಪ್ರಭುಪಾದ : ಖಂಡಿತ.

ವರದಿಗಾರ : ನಮ್ಮ ಕೆಲಸದ ಗತಿಯೇನು ? ನಾನು ನನ್ನ ಕೆಲಸವನ್ನು ಬಿಡಬೇಕಾಗುವುದಲ್ಲವೇ ?

ಶ್ರೀಲ ಪ್ರಭುಪಾದ : ಇಲ್ಲ. ನೀವು ನಿಮ್ಮ ಕೆಟ್ಟ ಚಟಗಳನ್ನು ಮಾತ್ರ ಬಿಡಬೇಕು ಮತ್ತು ಜಪಮಾಲೆಯ ಆಧಾರದಿಂದ ಹರೇಕೃಷ್ಣ ಮಂತ್ರ ಜಪಿಸಬೇಕು ಅಷ್ಟೆ.

ವರದಿಗಾರ : ನಾನು ಆರ್ಥಿಕ ಸಹಾಯವನ್ನೇನಾದರೂ ನೀಡಬೇಕೇ ?

ಶ್ರೀಲ ಪ್ರಭುಪಾದ : ಹಾಗೇನೂ ಇಲ್ಲ. ಅದು ನಿಮ್ಮ ಇಚ್ಛೆಗೆ ಸೇರಿದ್ದು. ನೀವು ಕೊಡುವುದಾದರೆ ಸಂತೋಷ. ಕೊಡದಿದ್ದರೂ ಚಿಂತೆಯಿಲ್ಲ. ನಾವು ಯಾರ ಆರ್ಥಿಕ ಸಹಾಯವನ್ನೂ ಅವಲಂಬಿಸುವುದಿಲ್ಲ. ನಾವು ಕೃಷ್ಣನನ್ನು ಅವಲಂಬಿಸುತ್ತೇವೆ.

ವರದಿಗಾರ : ಹಾಗಾದರೆ ನಾನೇನೂ ದುಡ್ಡು ಕೊಡಬೇಕಾಗಿಲ್ಲ ?

ಶ್ರೀಲ ಪ್ರಭುಪಾದ : ಇಲ್ಲ.

ವರದಿಗಾರ : ನಿಜವಾದ ಗುರುವನ್ನು ಸುಳ್ಳು ಗುರುವಿನಿಂದ ಭಿನ್ನವೆಂದು ಗುರುತಿಸಲು ಇದು ಮುಖ್ಯ ಲಕ್ಷಣಗಳಲ್ಲೊಂದಾಗಿಯೇ ?

ಶ್ರೀಲ ಪ್ರಭುಪಾದ : ಹೌದು, ನಿಜವಾದ ಗುರು ವ್ಯಾಪಾರಿಯಲ್ಲ. ಅವನು ದೇವರ ಪ್ರತಿನಿಧಿ. ದೇವರು ಏನು ಹೇಳುತ್ತಾನೋ ಗುರು ಅದನ್ನೇ ಪುನರುಚ್ಚರಿಸುತ್ತಾನೆ. ಅವನು ವ್ಯತಿರಿಕ್ತವಾಗಿ ಮಾತನಾಡುವುದಿಲ್ಲ.

ವರದಿಗಾರ : ಆದರೆ ಒಬ್ಬ ಗುರು ರೊಲ್ಸ್ ರಾಯ್ಸ್ ಕಾರಿನಲ್ಲಿ ಸುತ್ತಾಡುತ್ತಾನೆ. ಮತ್ತು ಒಂದು ಭಾರೀ ಹೋಟೇಲಿನ ಭವ್ಯ ಕೋಣೆಯಲ್ಲಿ ವಾಸಿಸುತ್ತಾನೆ ಎಂದು ನೀವು ನಿರೀಕ್ಷಿಸುತ್ತೀರಾ ?

ಶ್ರೀಲ ಪ್ರಭುಪಾದ : ಕೆಲವು ಸಲ ಜನ ಶ್ರೇಷ್ಠದರ್ಜೆಯ ಹೋಟೆಲಿನ ಕೋಣೆಯಲ್ಲಿ ವಾಸಾನುಕೂಲವನ್ನು ಒದಗಿಸುತ್ತಾರೆ. ಆದರೆ ಸಾಮಾನ್ಯವಾಗಿ ನಾವು ನಮ್ಮ ಮಂದಿರಗಳಲ್ಲಿಯೇ ತಂಗುತ್ತೇವೆ. ನಮಗೆ ವಿಶ್ವಾದ್ಯಂತ ಒಂದು ನೂರು ಮಂದಿರಗಳಿವೆ. ಆದುದರಿಂದ ನಾವು ಹೋಟೆಲುಗಳಿಗೆ ಹೋಗುವ ಪ್ರಸಂಗ ಬರುವುದಿಲ್ಲ.

ವರದಿಗಾರ : ನಾನು ಯಾವ ಆಪಾದನೆಗಳನ್ನೂ ಮಾಡುತ್ತಿಲ್ಲ ತಾನೇ ? ನಿಮ್ಮ ಎಚ್ಚರಿಕೆಯು ಬಲು ಮಹತ್ವದ್ದಾಗಿದೆಯೆಂಬುದನ್ನು ಉದಾಹರಣೆಯಿಂದ ವಿವರಿಸಬಯಸಿದೆನಷ್ಟೆ. ಆಧ್ಯಾತ್ಮ ಜೀವನವನ್ನು ಬಯಸುವವರು ಅನೇಕರಿದ್ದಾರೆ. ಹಾಗೆಯೇ "ಗುರು ವ್ಯವಹಾರ"ದಿಂದ ಹಣ ಮಾಡುವವರೂ ಸಾಕಷ್ಟಿದ್ದಾರೆ.

ಶ್ರೀಲ ಪ್ರಭುಪಾದ : ಹಾಗಾದರೆ, ಆಧ್ಯಾತ್ಮ ಜೀವನವೆಂದರೆ ಸ್ವಇಚ್ಛೆಯಿಂದಲೇ ದಾರಿದ್ರ್ಯವನ್ನು ಅಂಗೀಕರಿಸುವುದೆಂದು ನೀವು ಭಾವಿಸುವಿರಾ ?

ವರದಿಗಾರ : ಅದು ನನಗೆ ತಿಳಿಯದು.

ಶ್ರೀಲ ಪ್ರಭುಪಾದ : ಕಡು ದರಿದ್ರನು ಪ್ರಾಪಂಚಿಕನಾಗಿರಬಹುದು. ಸಿರಿವಂತನು ಆಧ್ಯಾತ್ಮಿಯಾಗಿರಬಹುದು. ಆಧ್ಯಾತ್ಮ ಜೀವನವು ದಾರಿದ್ರ್ಯವನ್ನೋ ಸಿರಿವಂತಿಕೆಯನ್ನೋ ಅವಲಂಬಿಸಿರುವುದಿಲ್ಲ. ಆಧ್ಯಾತ್ಮ ಜೀವನವೆಂದರೆ ದಿವ್ಯಜೀವನ. ಉದಾಹರಣೆಗೆ ಅರ್ಜುನನ್ನೇ ತೆಗೆದುಕೊಳ್ಳಿ. ಅರ್ಜುನನು ಅರಸು ಮನೆತನಕ್ಕೆ ಸೇರಿದವನು, ಆದರೂ ಅವನು ಪರಮಾತ್ಮನ ಪರಮ ಭಕ್ತನಾಗಿದ್ದನು. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು, **"ಏವಂ ಪರಂಪರಾ ಪ್ರಾಪ್ತಮ್ ಇಮಂ ರಾಜರ್ಷಿಯೋ ವಿದುಃ"** ಎಂದರೆ ಈ ಪರಮ ವಿಜ್ಞಾನವು ಗುರು ಶಿಷ್ಯ ಪರಂಪರೆಯಿಂದ ಸಾಗಿಬಂದಿದೆ, ಮತ್ತು ರಾಜರ್ಷಿಗಳು ಅದನ್ನು ಆ ರೀತಿಯಲ್ಲಿಯೇ

ಅರಿತುಕೊಳ್ಳುತ್ತ ಬಂದಿದ್ದಾರೆ" ಎಂದು ಹೇಳುತ್ತಾನೆ. ಹಿಂದೆ ಋಷಿಗಳಂತಿದ್ದ ರಾಜರುಗಳೆಲ್ಲ ಆಧ್ಯಾತ್ಮ ವಿಜ್ಞಾನವನ್ನು ತಿಳಿದವರಾಗಿದ್ದರು. ಆದುದರಿಂದ ಆಧ್ಯಾತ್ಮ ಜೀವನ ಎಂಬುದು ಒಬ್ಬನ ಸ್ಥಿತಿವಂತಿಕೆಯನ್ನವಲಂಬಿಸಿಲ್ಲ. ಒಬ್ಬನ ಆರ್ಥಿಕ ಸ್ಥಿತಿ ಏನೇ ಇರಲಿ–ರಾಜನಾಗಿರಲಿ, ನಿರ್ಗತಿಕನಾಗಿರಲಿ ಆಗಲೂ ಅವನು ಆಧ್ಯಾತ್ಮ ಜೀವನವನ್ನು ಅರಿತುಕೊಳ್ಳಬಹುದು. ಸಾಮಾನ್ಯವಾಗಿ ಆಧ್ಯಾತ್ಮ ಜೀವನವೆಂಬುದನ್ನರಿಯದವರು ಅನಾವಶ್ಯಕವಾಗಿ ನಮ್ಮನ್ನು ಟೀಕಿಸುತ್ತಾರೆ. ಆಧ್ಯಾತ್ಮ ಜೀವನವೆಂದರೇನು ಎಂದು ನಾನು ನಿಮ್ಮನ್ನು ಕೇಳಿದರೆ ನೀವೇನು ಹೇಳುತ್ತೀರಿ ?

ವರದಿಗಾರ : ನನಗೆ ಗೊತ್ತಿಲ್ಲ.

ಶ್ರೀಲ ಪ್ರಭುಪಾದ : ನಿಮಗೆ ಆಧ್ಯಾತ್ಮ ಜೀವನವೆಂದರೇನು ಗೊತ್ತಿಲ್ಲ. ಆದರೂ "ಇದು ಹೀಗೆ" ಅಥವಾ "ಅದು ಹಾಗೆ" ಎಂದು ನೀವು ಹೇಳುತ್ತೀರಿ. ಆದರೆ ಆಧ್ಯಾತ್ಮ ಜೀವನ ಎಂದರೇನು ಎಂಬುದನ್ನು ನೀವು ಮೊದಲು ಅರಿತುಕೊಳ್ಳಬೇಕು. ನೀವು ನಿಮ್ಮ ದೇಹವಲ್ಲ ಎಂಬುದನ್ನು ಅರಿತೊಡನೆಯೇ ನಿಮ್ಮ ಆಧ್ಯಾತ್ಮ ಜೀವನ ಪ್ರಾರಂಭವಾಗುತ್ತದೆ. ಇದೇ ಆಧ್ಯಾತ್ಮ ಜೀವನದ ನಿಜವಾದ ನಾಂದಿ. ನಿಮ್ಮ ಆತ್ಮ ಮತ್ತು ನಿಮ್ಮ ದೇಹ ಇವುಗಳ ವ್ಯತ್ಯಾಸವನ್ನು ನೀವು ಅರಿತಾಗ, ನೀವು ಜೀವಾತ್ಮನು ಎಂಬುದು (ಅಹಂಬ್ರಹ್ಮಾಸ್ಮಿ) ನಿಮಗೆ ತಿಳಿಯುತ್ತದೆ.

ವರದಿಗಾರ : ಈ ಜ್ಞಾನವು ಪ್ರತಿಯೊಬ್ಬರ ಶಿಕ್ಷಣದ ಭಾಗವಾಗಬೇಕೆಂದು ನೀವು ಭಾವಿಸುವಿರಾ ?

ಶ್ರೀಲ ಪ್ರಭುಪಾದ : ಹೌದು. ಜನರಿಗೆ ತಾವೇನೆಂಬುದನ್ನು ಮೊದಲು ತಿಳಿಸಿಕೊಡಬೇಕು. ಅವರು ತಮ್ಮ ದೇಹವೋ ಅಥವಾ ಮತ್ತೇನಾದರೂ ಆಗಿದ್ದಾರೆಯೇ ? ಇದೇ ಶಿಕ್ಷಣದ ಪ್ರಾರಂಭ. ಈಗ ಪ್ರತಿಯೊಬ್ಬರು ತಾವೆಂದರೆ ಈ ದೇಹ ಎಂಬ ಶಿಕ್ಷಣ ಪಡೆದಿದ್ದಾರೆ. ಒಬ್ಬನಿಗೆ ಆಕಸ್ಮಾತ್ತಾಗಿ ಅಮೆರಿಕನ್ ದೇಹ ದೊರೆತಿದ್ದರಿಂದ ಅವನು "ತಾನು ಅಮೇರಿಕನ್" ಎಂದು ಭಾವಿಸುತ್ತಾನೆ. ಇದು, ನೀವು ಕೆಂಪು ಅಂಗಿಯನ್ನು ತೊಟ್ಟದ್ದರಿಂದ "ನಾನು ಕೆಂಪಂಗಿ" ಎಂದು ಹೇಳಿದಂತಿದೆ. ನೀವು ಕೆಂಪಂಗಿ ಅಲ್ಲ. ನೀವು ಒಬ್ಬ ಮನುಷ್ಯರು. ಹಾಗೆಯೇ ಈ ದೇಹವು ನಿಜವಾದ ವ್ಯಕ್ತಿಯ (ಜೀವಾತ್ಮನ) ಮೇಲಿರುವ ಷರ್ಟೋ ಕೋಟೋ ಆಗಿದೆ. ನಾವು ಕೇವಲ ನಮ್ಮ ದೇಹಾಖ್ಯವಾದ ಷರ್ಟನ್ನೋ ಕೋಟನ್ನೋ ನಮ್ಮ ಆತ್ಮವೆಂದು ತಿಳಿದುಕೊಂಡರೆ ನಮಗೆ ಆಧ್ಯಾತ್ಮ ಶಿಕ್ಷಣವೇ ಇಲ್ಲದಂತಾಗುವುದು.

ವರದಿಗಾರ : ಶಾಲೆಗಳಲ್ಲಿ ಈ ಬಗೆಯ ಶಿಕ್ಷಣ ನೀಡಬೇಕೆಂದು ನೀವು ಬಯಸುವಿರಾ ?

ಶ್ರೀಲ ಪ್ರಭುಪಾದ : ಹೌದು, ಶಾಲೆ ಕಾಲೇಜುಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಈ ಬಗೆಯ ಶಿಕ್ಷಣ ದೊರೆಯಬೇಕು. ಈ ವಿಷಯವನ್ನು ಕುರಿತು ಅಪಾರ ಸಾಹಿತ್ಯವೂ ಜ್ಞಾನ ನಿಧಿಯೂ ಉಂಟು. ಸಮಾಜದ ಮುಂದಾಳುಗಳು ಈ ಆಂದೋಲನವನ್ನು ಅರಿತುಕೊಳ್ಳಲು ಮುಂದೆ ಬರುವುದು ಕಾಲದ ನಿಜವಾದ ಆವಶ್ಯಕತೆಯಾಗಿದೆ.

ವರದಿಗಾರ : ಹಿಂದೆ ಸುಳ್ಳು ಗುರುವಿನ ಸಂಪರ್ಕ ಹೊಂದಿದವರ್ಯಾರಾದರೂ ಈಗ ನಿಮ್ಮನ್ನು ಬಂದು ಕಂಡಿರುವರೇ ?

ಶ್ರೀಲ ಪ್ರಭುಪಾದ : ಹೌದು, ಬೇಕಾದಷ್ಟು ಜನ.

ವರದಿಗಾರ : ಅವರ ಆಧ್ಯಾತ್ಮ ಜೀವನ ಈ ಸುಳ್ಳು ಗುರುಗಳಿಂದಾಗಿ ಯಾವುದೇ ರೀತಿಯಲ್ಲಿ ಹಾನಿಗೊಂಡಿತ್ತೇ ?

ಶ್ರೀಲ ಪ್ರಭುಪಾದ : ಇಲ್ಲ. ಅವರು ನಿಜವಾಗಿ ಆಧ್ಯಾತ್ಮ ಜೀವನಾಸಕ್ತರಾಗಿದ್ದವರು. ಅದು ಅವರ ಅರ್ಹತೆಯಾಗಿತ್ತು. ದೇವರು ಪ್ರತಿಯೊಬ್ಬರ ಹೃದಯ ಸ್ಥಿತನಾಗಿದ್ದಾನೆ. ನಿಜವಾಗಿ ಅವನನ್ನು ಅರಸಿ ಬಂದವರಿಗೆ, ಅವನು ಸದ್ಗುರು ದೊರೆಯುವಂತೆ ಸಹಾಯ ಮಾಡುತ್ತಾನೆ.

ವರದಿಗಾರ : ನಿಮ್ಮಂಥ ಸದ್ಗುರುಗಳಾದವರು ಈ ಸುಳ್ಳು ಗುರು ವ್ಯವಹಾರಕ್ಕೆ ತಡೆ ಹಾಕಲು ಯಾವಾಗಲಾದರೂ ಪ್ರಯತ್ನಿಸಿರುವಿರಾ ? ಎಂದರೆ ಅವರನ್ನು ಅವರ ವ್ಯಾಪಾರದಿಂದ ಹೊರತಳ್ಳಲು ಪ್ರಭಾವ ಬೀರಿದ್ದೀರಾ ?

ಶ್ರೀಲ ಪ್ರಭುಪಾದ : ಇಲ್ಲ. ಅದು ನನ್ನ ಉದ್ದೇಶವಲ್ಲ. ಕೇವಲ ಹರೇಕೃಷ್ಣ ನಾಮ ಸಂಕೀರ್ತನೆಯಿಂದ ನಾನು ನನ್ನ ಈ ಆಂದೋಲನವನ್ನು ಪ್ರಾರಂಭಿಸಿದೆ. ನಾನು ನ್ಯೂ ಯಾರ್ಕಿನಲ್ಲಿ ತಾಂಪಕಿನ್ಸ್ ಸ್ಕ್ವೇರ್ ಪಾರ್ಕಿನಲ್ಲಿ ಈ ಕೀರ್ತನೆ ಮಾಡಿದೆ, ಜನ ಕೂಡಲೇ ನನ್ನ ಕಡೆಗೆ ಬರತೊಡಗಿದರು. ಹೀಗೆ ಕೃಷ್ಣಪ್ರಜ್ಞಾ ಆಂದೋಲನವು ಕ್ರಮೇಣ ಬೆಳೆದು ಬಂತು. ಕೆಲವರು ಇದನ್ನು ಅಂಗೀಕರಿಸಿದರು, ಕೆಲವರು ಅಂಗೀಕರಿಸಲಿಲ್ಲ. ಅದೃಷ್ಟವಂತರು ಇದನ್ನು ಅಂಗೀಕರಿಸಿದ್ದಾರೆ.

ವರದಿಗಾರ : ಸುಳ್ಳು ಗುರುಗಳ ಅನುಭವಕ್ಕೆ ಒಳಗಾದವರು, ಗುರುಗಳೆಂದರೆ ಸಂದೇಹ ಪಡುವಂತಾಗಿದೆ ಎಂಬುದು ತಮಗೆ ತಿಳಿದಿದೆಯೇ ? ನೀವು ಒಬ್ಬ ಸುಳ್ಳು ದಂತ ವೈದ್ಯನ ಬಳಿಗೆ ಹೋದಾಗ ಅವನು ನಿಮ್ಮ ಹಲ್ಲನ್ನೇ ಮುರಿದುಹಾಕಿದರೆ, ನೀವು ಮತ್ತೊಬ್ಬ ದಂತ ವೈದ್ಯನ ಬಳಿಗೆ ಹೋಗಲು ಭಯ ಪಡುವುದಿಲ್ಲವೇ ?

ಶ್ರೀಲ ಪ್ರಭುಪಾದ : ಹೌದು. ಅದು ಸ್ವಾಭಾವಿಕ. ನೀವು ಮೋಹಗೊಂಡರೆ, ಮುಂದೆ ನೀವು ಭಯಪಡುವಿರಿ. ಆದರೆ ಒಂದು ಸಲ ಮೋಸಹೋದರೆ ನೀವು ಯಾವಾಗಲೂ ಮೋಸ ಹೋಗುತ್ತಿರಿ ಎಂದು ಹೇಳಲು ಬರುವುದಿಲ್ಲ. ನೀವು ಒಬ್ಬ ಪ್ರಾಮಾಣಿಕ ವ್ಯಕ್ತಿಯನ್ನು ಹುಡುಕಿಕೊಳ್ಳಬೇಕು. ಆದರೆ ನೀವು ಕೃಷ್ಣಪ್ರಜ್ಞೆಗೆ ಬರಬೇಕಾದರೆ ಬಲು ಅದೃಷ್ಟವಂತರಾಗಿರಬೇಕು. ಇಲ್ಲವೇ ಈ ವಿಜ್ಞಾನವನ್ನು ಚೆನ್ನಾಗಿ ಅರಿತವರಾಗಿರಬೇಕು. ನಿಜವಾದ ಆಧ್ಯಾತ್ಮ ಆಸಕ್ತರು ಬಲು ವಿರಳ ಎಂಬುದು ಭಗವದ್ಗೀತೆಯಿಂದ ತಿಳಿದು ಬರುತ್ತದೆ. **ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ.** ಲಕ್ಷೋಪಲಕ್ಷ ಜನರಲ್ಲಿ ಒಬ್ಬನು ಆಧ್ಯಾತ್ಮ ನಿಷ್ಠನು ಸಿಕ್ಕಬಹುದು. ಸಾಮಾನ್ಯವಾಗಿ ಜನ ಆಹಾರನಿದ್ರಾಭಯಮೈಥುನಾದಿಗಳಲ್ಲಿಯೇ ಆಸಕ್ತರಾಗಿರುತ್ತಾರೆ. ಹೀಗಿರುವಾಗ ಹೆಚ್ಚು ಜನ ಅನುಯಾಯಿಗಳನ್ನು ನಾವು ನಿರೀಕ್ಷಿಸುವುದಾದರೂ ಹೇಗೆ ಸಾಧ್ಯ ? ಜನರು ಆಧ್ಯಾತ್ಮ ಆಸಕ್ತಿಯನ್ನು ಕಳೆದುಕೊಂಡಿದ್ದಾರೆಂಬುದನ್ನು ಸುಲಭವಾಗಿ ಕಾಣಬಹುದಾಗಿದೆ. ಈ ಬಗೆಯ ಆಸಕ್ತಿ ಹೊಂದಿದ್ದ ಸರಿಸುಮಾರು ಎಲ್ಲರೂ ಸುಳ್ಳು ಆಧ್ಯಾತ್ಮವಾದಿಗಳಿಂದ ಮೋಸ ಹೋಗಿದ್ದಾರೆ. ಒಂದು ಆಂದೋಲನವನ್ನು ಕೇವಲ ಅದರ ಅನುಯಾಯಿಗಳ ಸಂಖ್ಯಾಬಲದಿಂದ ನೀವು ನಿರ್ಧರಿಸಲಾರಿರಿ. ಒಬ್ಬನು ಪ್ರಾಮಾಣಿಕ

ನಾಗಿದ್ದರೂ ಸಾಕು, ಆಂದೋಲನವು ಯಶಸ್ವಿಯಾಗುತ್ತದೆ. ಇಲ್ಲಿ ಪ್ರಮಾಣಕ್ಕಿಂತ ಗುಣ ಮಹತ್ವದ್ದು.

ವರದಿಗಾರ : ಎಷ್ಟು. ಜನ ಸುಳ್ಳು ಗುರುಗಳಿಂದ ಮೋಸ ಹೋಗಿರಬಹುದೋ !

ಶ್ರೀಲ ಪ್ರಭುಪಾದ : ವಾಸ್ತವಿಕವಾಗಿ ಎಲ್ಲರೂ ಮೋಸಹೋಗಿದ್ದಾರೆ (ನಗು) ಎಣಿಸಲಾಗದಷ್ಟು ಪ್ರತಿಯೊಬ್ಬನೂ.

ವರದಿಗಾರ : ಹಾಗೆಂದರೆ ಸಾವಿರಾರು ಜನ ಅಲ್ಲವೇ ?

ಶ್ರೀಲ ಪ್ರಭುಪಾದ : ಲಕ್ಷೋಪಲಕ್ಷ ಜನ ಮೋಸ ಹೊಂದಿದ್ದಾರೆ. ಅವರಿಗೆ ಮೋಸ ಹೋಗುವುದೇ ಬೇಕಾಗಿತ್ತೆಂದು ಕಾಣುತ್ತದೆ. ದೇವರು ಸರ್ವಶಕ್ತ. ನಿಮ್ಮ ಇಚ್ಛೆಗಳನ್ನು ಅವನು ಬಲ್ಲನು. ಅವನು ನಿಮ್ಮ ಹೃದಯನಿವಾಸಿ. ನೀವು ಮೋಸ ಹೊಂದಬಯಸಿದರೆ ಮೋಸಗಾರನನ್ನು ನಿಮ್ಮೆಡೆಗೆ ಕಳಿಸುತ್ತಾನೆ.

ವರದಿಗಾರ : ನೀವು ಈ ಹಿಂದೆ ಹೇಳಿದ ಪರಿಪೂರ್ಣಾವಸ್ಥೆಯನ್ನು ಪಡೆದು ಕೊಳ್ಳುವುದು ಪ್ರತಿಯೊಬ್ಬನಿಗೂ ಸಾಧ್ಯವಿದೆಯೇ ?

ಶ್ರೀಲ ಪ್ರಭುಪಾದ : ಕ್ಷಣ ಮಾತ್ರದಲ್ಲಿ ಪರಿಪೂರ್ಣತೆಯನ್ನು ಪಡೆದುಕೊಳ್ಳಬಹುದು. ಆದರೆ ಇಚ್ಛೆ ಇದ್ದವನು ಮಾತ್ರ. ಯಾರಿಗೂ ಇಚ್ಛೆಯಿಲ್ಲ ಎಂಬುದೇ ಈಗ ಸಮಸ್ಯೆ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ **(ಸರ್ವಧರ್ಮಾನ್ ಪರಿತ್ಯಜ್ಯ, ಮಾಂ ಏಕಂ ಶರಣಂವ್ರಜ)** ಕೇವಲ "ನನಗೆ ಶರಣಾಗತನಾದರೆ ಸಾಕು" ಎಂದಿದ್ದಾನೆ. ಆದರೆ ದೇವರಿಗೆ ಶರಣಾಗತರಾಗಲು ಯಾರು ಸಿದ್ಧರಿದ್ದಾರೆ ? ಪ್ರತಿಯೊಬ್ಬನೂ "ನಾನೇಕೆ ದೇವರಿಗೆ ಶರಣಾಗಬೇಕು ? ನಾನು ಸ್ವತಂತ್ರನಾಗಿರುತ್ತೇನೆ" ಎಂದು ಹೇಳುತ್ತಾನೆ. ನೀವು ಕೇವಲ ಶರಣಾಗತರಾದರೆ ಸಾಕು. ಕ್ಷಣಾರ್ಧದಲ್ಲಿ ಸಿದ್ಧಿ, ಅಷ್ಟೆ. ಆದರೆ ಯಾರಿಗೂ ಇಚ್ಛೆಯಿಲ್ಲ. ಅದೇ ಸಮಸ್ಯೆ.

ವರದಿಗಾರ : ಬಹುಜನ ಮೋಸ ಹೋಗಬಯಸುತ್ತಾರೆ, ಹಾಗೆಯೇ ಬಹುಜನ ತಮ್ಮ ಐಹಿಕ ಸುಖಭೋಗಗಳ ಜೊತೆಗೆ ಮಂತ್ರ ಜಪಿಸುತ್ತ ಅಥವಾ ಕೈಯಲ್ಲಿ ಪುಷ್ಪಧರಿಸಿ ಆಧ್ಯಾತ್ಮ ಜೀವಿಗಳಾಗಿರುತ್ತಾರೆ ಎಂದು ತಾವು ಹೇಳುವಿರಾ ? ಮೋಸ ಹೋಗುವುದು ಎಂದು ನೀವು ಹೇಳುವುದು ಇದೇ ತಾನೆ ?

ಶ್ರೀಲ ಪ್ರಭುಪಾದ : ಹೌದು, ಇದು ಒಬ್ಬ ರೋಗಿಯು "ನಾನು ಕಾಯಿಲೆಯಿಂದ ಬಳಲುತ್ತಲೇ ಆರೋಗ್ಯವಂತನಾಗಿರುತ್ತೇನೆ" ಎಂದು ಹೇಳಿದ ಹಾಗಿದೆ. ಇದು ವಿರೋಧಾಭಾಸ. ಮೊದಲನೆಯದಾಗಿ ಮನುಷ್ಯ ಆಧ್ಯಾತ್ಮಿಕ ಶಿಕ್ಷಣ ಹೊಂದಬೇಕು. ಆಧ್ಯಾತ್ಮ ಜೀವನ ಎಂಬುದು ಕೆಲವು ನಿಮಿಷಗಳ ಮಾತಿನಿಂದ ಸಿದ್ಧಿಸುವುದಿಲ್ಲ. ತತ್ವಜ್ಞಾನ, ದೈವತ ಶಾಸ್ತ್ರ, ಅನೇಕಾನೇಕ ಗ್ರಂಥಗಳಿವೆ, ಆದರೆ ಜನರಿಗೆ ಅವುಗಳಲ್ಲಿ ಆಸಕ್ತಿಯಿಲ್ಲ. ಅದೇ ಬಂದಿರುವ ಕಷ್ಟ. ಉದಾಹರಣೆಗೆ ಶ್ರೀಮದ್ಭಾಗವತವು ಸುದೀರ್ಘವಾದ ಗ್ರಂಥ. ಅದನ್ನು ನೀವು ಓದತೊಡಗಿದರೆ ಅದರ ಒಂದು ಪಂಕ್ತಿಯನ್ನು ಅರ್ಥಮಾಡಿಕೊಳ್ಳಲು ನಿಮಗೆ ಅನೇಕ ದಿನ ಹಿಡಿಯಬಹುದು. ದೇವರು ಪರಮ ಸತ್ಯ ಸ್ವರೂಪನೆಂದು ಭಾಗವತವು ಹೇಳುತ್ತದೆ. ಜನರಿಗೆ ಅದರಲ್ಲಿ ಆಸಕ್ತಿಯಿಲ್ಲ. ಆದರೆ, ಯೋಗಾಯೋಗದಿಂದ ಒಬ್ಬನು ಆಧ್ಯಾತ್ಮ ಜೀವನದಲ್ಲಿ ಆಸಕ್ತಿ ಹೊಂದಿದರೆ, ಅವನು ಕೂಡಲೇ ಅಗ್ಗದ ಫಲ ಬಯಸುತ್ತಾನೆ. ಹೀಗಾಗಿಯೇ ಅವನು ಮೋಸ ಹೋಗುತ್ತಾನೆ. ನಿಜವಾಗಿ

ಮಾನವ ಜೀವನವು ಕಠೋರ ವ್ರತಾಚರಣೆ ಮತ್ತು ತಪಸ್ಸಿಗಾಗಿ ಇದೆ. ಅದೇ ವೈದಿಕ ನಾಗರಿಕತೆ. ವೇದಕಾಲದಲ್ಲಿ ಹುಡುಗರಿಗೆ ಬ್ರಹ್ಮಚರ್ಯದ ತರಬೇತಿ ನೀಡಲಾಗುತ್ತಿತ್ತು; ಇಪ್ಪತ್ತೈದು ವರ್ಷದ ತನಕ ಲೈಂಗಿಕ ಜೀವನಕ್ಕೆ ಅವಕಾಶವಿರಲಿಲ್ಲ. ಬ್ರಹ್ಮಚಾರಿ ಎಂದರೆ ವಿದ್ಯಾರ್ಥಿಯು ಸಂಪೂರ್ಣ ಇಂದ್ರಿಯ ನಿಗ್ರಹ ಹೊಂದಿ, ಗುರುಕುಲದಲ್ಲಿದ್ದು, ಗುರುವಾಜ್ಞಾ ಪಾಲಕನಾಗಿರುತ್ತಿದ್ದ. ಈಗ ಶಾಲೆ ಕಾಲೇಜುಗಳಲ್ಲಿ ಪ್ರಾರಂಭದಿಂದಲೇ ಲೈಂಗಿಕ ಶಿಕ್ಷಣ ನೀಡಲಾಗುತ್ತದೆ. ಹೀಗಾಗಿ ಹನ್ನೆರಡು-ಹದಿಮೂರು ವರ್ಷದ ಹುಡುಗ ಹುಡುಗಿಯರು ಲೈಂಗಿಕ ಕ್ರಿಯೆ ನಡೆಸುತ್ತಾರೆ. ಇಂಥವರು ಆಧ್ಯಾತ್ಮ ಜೀವನಕ್ಕೆ ಒಗ್ಗುವುದು ಹೇಗೆ ? ಆಧ್ಯಾತ್ಮ ಜೀವನ ಎಂದರೆ, ಭಗವತ್ ಸಾಕ್ಷಾತ್ಕಾರಕ್ಕಾಗಿ ಸ್ವಇಚ್ಛೆಯಿಂದಲೇ ವ್ರತಾಚರಣೆಗಳನ್ನು ಕೈಕೊಳ್ಳುವುದು. ಅಂತೆಯೇ ನಿಷಿದ್ಧ ಸಂಭೋಗ, ಮಾಂಸಾಹಾರ, ಜೂಜಾಟ ಮತ್ತು ಮದ್ಯಪಾನ ದೀಕ್ಷಾ ಬದ್ಧರಿಗೆ ಬೇಡ ಎಂದು ನಾವು ಒತ್ತಾಯಿಸುತ್ತೇವೆ. ಈ ನಿರ್ಬಂಧಗಳಿಲ್ಲದೆ ಯಾವ "ಧ್ಯಾನಯೋಗವಾಗಲಿ" ಅಥವಾ "ಆಧ್ಯಾತ್ಮ ನಿಷ್ಠೆಯಾಗಲಿ" ನಿಜವಾದುದಾಗುವುದಿಲ್ಲ. ಅದು ಮೋಸಗಾರರ ಮತ್ತು ಅದಕ್ಕೆ ಬಲಿಯಾಗುವವರ ನಡುವಿನ ಒಂದು ವ್ಯಾಪಾರ ಮಾತ್ರ ಆಗಬಹುದು.

ವರದಿಗಾರ : ಧನ್ಯವಾದಗಳು.

ಶ್ರೀಲ ಪ್ರಭುಪಾದ : ಹರೇಕೃಷ್ಣ.



# ಗುರು ಅನಿವಾರ್ಯ

**ತಮ್ಮ ಆಧ್ಯಾತ್ಮ ಗುರುವಾದ ಶ್ರೀಲ ಭಕ್ತಿಸಿದ್ಧಾಂತ ಸರಸ್ವತಿಗೋಸ್ವಾಮಿ ಅವರನ್ನು ಕುರಿತು, ಯುವ ಶಿಷ್ಯರೊಬ್ಬರು ಪ್ರಚಂಡವಾಗಿ ಮತ್ತು ಉಜ್ವಲವಾಗಿ ಭಾರತದ ಬೊಂಬಾಯಿಯಲ್ಲಿ 1936ರ ಫೆಬ್ರವರಿಯಂದು ಮಾತನಾಡಿದ್ದನ್ನು ಕಂಡು ಪ್ರಸಿದ್ಧ ಧಾರ್ಮಿಕ ಸಂಸ್ಥೆಯಾದ ಗೌಡೀಯ ಮಠದ ಸದಸ್ಯರು ಬೆರಗಾದರು. ಮೂರು ದಶಕಗಳ ತರುವಾಯ ಆ ಯುವ ಉಪನ್ಯಾಸಕರೇ ಕೃಷ್ಣ ಪ್ರಜ್ಞಾ ಆಂದೋಲನದ ವಿಶ್ವವಿಖ್ಯಾತ ಸ್ಥಾಪಕರೂ ಆಚಾರ್ಯರೂ ಆದರು. ಶ್ರೀಲ ಪ್ರಭುಪಾದರ ಅಂದಿನ ನಿರೂಪಣೆಯು ಆಧ್ಯಾತ್ಮ ಜೀವನದಲ್ಲಿ ಗುರುವಿನ ಮಹತ್ವವನ್ನು ಕುರಿತ ಒಂದು ಸ್ಮರಣೀಯ ಉಪನ್ಯಾಸವಾಗಿದೆ.**

ಸಾಕ್ಷಾದ್ ಹರಿತ್ವೇನ ಸಮಸ್ತ ಶಾಸ್ತ್ರೈರ್ ಉಕ್ತಸ್ತಥಾ ಭಾವ್ಯತ ಏವ ಸದ್ಭಿಃ ।
ಕಿಂತು ಪ್ರಭೋರ್ ಯಃ ಪ್ರಿಯ ಏವ ತಸ್ಯ ವಂದೇ ಗುರೋಃ ಶ್ರೀಚರಣಾರವಿಂದಮ್ ॥

"ಆಧ್ಯಾತ್ಮ ಉಪದೇಶಕನನ್ನು ಎಂದರೆ ಗುರುವನ್ನು ಪರಮದೇವೋತ್ತಮ ಪುರುಷ ನಂತೆಯೇ ಆರಾಧಿಸಬೇಕೆಂದು ಶ್ರುತಿಗಳು ಸಾರಿವೆ. ಈ ವೇದ ವಿಧಿಯನ್ನು ಭಗವಂತನ ಪರಿಶುದ್ಧ ಭಕ್ತರು ಪಾಲಿಸಿಕೊಂಡೇ ಬಂದಿದ್ದಾರೆ. ಗುರು ಭಗವಂತನ ಪರಮಾಪ್ತ ದಾಸ ನಾಗಿರುತ್ತಾನೆ. ಆದುದರಿಂದ ಗುರು ಚರಣಾರವಿಂದಗಳಿಗೆ ನಮ್ಮ ನಮಸ್ಕಾರಗಳನ್ನು ಸಲ್ಲಿಸೋಣ."

ಮಹನೀಯರೇ, ಈ ಸಂಜೆ ಈ ಗೌಡೀಯ ಮಠದ ಸ್ಥಾಪನಾಚಾರ್ಯರೂ ವಿಶ್ವ ವೈಷ್ಣವ ರಾಜಸಭೆಯ ಅಧ್ಯಕ್ಷ ಆಚಾರ್ಯರೂ, ಆಚಾರ್ಯದೇವರೂ ಆಗಿರುವ ನನ್ನ ನಿತ್ಯ ದಿವ್ಯೋಪದೇಶಕರಾಗಿರುವ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಶ್ರೀಮದ್ ಭಕ್ತಿ ಸಿದ್ಧಾಂತ ಸರಸ್ವತೀ ಗೋಸ್ವಾಮಿ ಮಹಾರಾಜರ ಚರಣಾರವಿಂದಗಳಿಗೆ ನಮನಗಳನ್ನರ್ಪಿಸುವ ಈ ಸಭೆಗೆ ದಯವಿಟ್ಟು ಬಂದಿರುವ ತಮ್ಮೆಲ್ಲರಿಗೆ ಗೌಡೀಯ ಮಠದ ಬೊಂಬಯಿ ಶಾಖೆಯ ಸದಸ್ಯರ ಪರವಾಗಿ ಸ್ವಾಗತ ಬಯಸುತ್ತೇನೆ.

ಅರವತ್ತೆರಡು ವರ್ಷಗಳ ಹಿಂದೆ, ಇದೇ ದಿನ, ಶ್ರೀ ಕ್ಷೇತ್ರಪುರಿ ಜಗನ್ನಾಥ ಧಾಮದಲ್ಲಿ ಠಾಕುರ ಭಕ್ತಿ ವಿನೋದರ ಕರೆಯ ಮೇರೆಗೆ ಆಚಾರ್ಯದೇವರು ಜನ್ಮವೆತ್ತಿದರು.

ಮಹನೀಯರೇ, ಗುರುದೇವ ಅಥವಾ ಆಚಾರ್ಯದೇವ ಇವರ ಮೂಲತತ್ವಗಳನ್ನು

ಕುರಿತು ನಾವು ಮಾತನಾಡುವಾಗ, ವಿಶ್ವವ್ಯಾಪಕವಾದ ವಿಷಯವನ್ನು ಕುರಿತೇ ಮಾತನಾಡುತ್ತೇವೆ. ಆದ್ದರಿಂದ ಈ ಸಂಜೆ ಆಚಾರ್ಯದೇವರಿಗೆ ನಮನಗಳನ್ನು ಅರ್ಪಿಸುವ ಈ ಸಮಾರಂಭವು ಯಾವುದೇ ಮತೀಯ ಸಮಾರಂಭವಲ್ಲ. ನಮ್ಮ ಗುರು, ನಿಮ್ಮ ಗುರು, ಅವರ ಗುರು, ಇವರ ಗುರು ಎಂದು ಗುರುಗಳಲ್ಲಿ ಭೇದವೆಣಿಸುವ ಪ್ರಶ್ನೆಯೇ ಇಲ್ಲ. ಅನಂತ ರೂಪಗಳಲ್ಲಿ ಪ್ರಾದುರ್ಭೂತರಾಗಿ ನಿಮಗೂ ನಮಗೂ ಎಲ್ಲರಿಗೂ ಉಪದೇಶ ನೀಡಿ ಉದ್ಧರಿಸುವ ಗುರು ಒಬ್ಬರೇ.

ಸಚ್ಛಾಸ್ತ್ರ ಮೂಲಗಳಿಂದ ನಾವು ತಿಳಿದುಕೊಂಡಿರುವ ಗುರು, ನಮಗೆ ದೇವಲೋಕದ ಎಂದರೆ ಎಲ್ಲಿ ಎಲ್ಲವೂ ವ್ಯತ್ಯಾಸವಿಲ್ಲದ ಪರಮ ಸತ್ಯ ಸ್ವರೂಪನ ಸೇವಾ ನಿರತವಾಗಿದೆಯೋ ಆ ಪರಮ ಪುರುಷನ ಧಾಮದ ಸಂದೇಶವನ್ನು ನೀಡುತ್ತಾರೆ. **ಮಹಾಜನೋ ಏನ ಗತಃ ಸ ಪಂಥಾಃ** (ನಿಮ್ಮ ಪೂರ್ವಾಚಾರ್ಯರು ನಡೆದ ಮಾರ್ಗದಲ್ಲಿಯೇ ನಡೆಯಿರಿ) ಎಂಬ ಮಾತನ್ನೂ ನಾವು ಅನೇಕ ಸಲ ಕೇಳಿದ್ದೇವೆ. ಆದರೆ ಈ ಶ್ಲೋಕದ ಅರ್ಥವನ್ನೇ ನಾವು ತಿಳಿದುಕೊಂಡಿಲ್ಲ. ನಾವು ಈ ಸೂಚನೆಯನ್ನು ಪರಿಶೀಲನಾತ್ಮಕವಾಗಿ ಅಧ್ಯಯನ ಮಾಡಿದರೆ, ಮಹಾಜನ ಎಂಬುದು ಒಂದೇ ಎಂದು ನಮಗೆ ತಿಳಿಯುತ್ತದೆ. ಹಾಗೆಯೇ ದಿವ್ಯಲೋಕಕ್ಕೆ ಇರುವ ಹೆದ್ದಾರಿಯೂ ಒಂದೇ ಮುಂಡಕ ಉಪನಿಷತ್ತಿನಲ್ಲಿ (1-2-12)

ತದ್ ವಿಜ್ಞಾನಾರ್ಥಮ್ ಸ ಗುರುಮ್ ಏವಾಭಿಗಚ್ಛೇತ್ ।
ಸಮಿತ್‌ಪಾಣಿಃ ಶ್ರೋತ್ರಿಯಂ ಬ್ರಹ್ಮ ನಿಷ್ಠಮ್॥

ಎಂದು ಹೇಳಲಾಗಿದೆ. "ದಿವ್ಯ ಜ್ಞಾನವನ್ನರಿತುಕೊಳ್ಳಲು, ಪರಂಪರಾಗತವಾಗಿ ಬಂದ ಮತ್ತು ಭಗವನ್ನಿಷ್ಠನಾದ ನಿಜಗುರುವಿನ ಬಳಿಗೆಯೇ ನಾವು ಹೋಗಬೇಕು.

ಹೀಗೆ ಈ ದಿವ್ಯಜ್ಞಾನ ಪ್ರಾಪ್ತಿಗೆ ಗುರುವಿನ ಬಳಿ ಹೋಗಬೇಕೆಂದು ವಿಧಿಸಲಾಗಿದೆ. ಪರಮ ಸತ್ಯವು ಒಂದೇ ಆಗಿದ್ದು ಆ ಬಗ್ಗೆ ನಮ್ಮಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲದಿದ್ದರೆ, ಗುರು ಕೂಡ ಇಬ್ಬರಾಗಿರುವುದು ಸಾಧ್ಯವಿಲ್ಲ. ಈ ಸಂಜೆ ನಮ್ಮ ವಿನಮ್ರ ನಮನಗಳನ್ನು ಯಾವ ಆಚಾರ್ಯ ದೇವರಿಗೆ ಅರ್ಪಿಸಲು ನಾವಿಲ್ಲಿ ಸೇರಿದ್ದೇವೆಯೋ, ಅವರು ಮತೀಯವಾಗಿ ಅಥವಾ ಸತ್ಯವನ್ನು ಕುರಿತು ಭಿನ್ನ ಭಿನ್ನವಾಗಿ ಪ್ರತಿಪಾದಿಸುವವರಲ್ಲಿ ಒಬ್ಬರಾದ ಗುರುಗಳಲ್ಲ. ಅದಕ್ಕೆ ಬದಲಾಗಿ, ಅವರು ಜಗದ್ಗುರುಗಳು ಅಥವಾ ನಮ್ಮೆಲ್ಲರ ಗುರುಗಳಾಗಿದ್ದಾರೆ. ವ್ಯತ್ಯಾಸ ವಿಷ್ಟೆ. ಕೆಲವರು ಅವರಿಗೆ ಹೃತ್ಪೂರ್ವಕವಾಗಿ ವಿಧೇಯರಾಗಿದ್ದಾರೆ ಮತ್ತೆ ಕೆಲವರು ನೇರವಾಗಿ ಅವರಿಗೆ ವಿಧೇಯರಾಗಿಲ್ಲ.

ಶ್ರೀಮದ್ಭಾಗವತದಲ್ಲಿ (11-17-27) ಹೀಗೆ ಹೇಳಿದೆ.

ಆಚಾರ್ಯಂ ಮಾಂ ವಿಜಾನೀಯಾನ್ ನಾವಮನ್ಯೇತ ಕರ್‌ಹಿಚಿತ್
ನಮರ್ತ್ಯ ಬುದ್ಧ್ಯಾಸೂಯೇತಾ ಸರ್ವದೇವ ಮಯೋ ಗುರುಃ ॥

"ಗುರುವನ್ನು ನನ್ನಂತೆಯೇ ತಿಳಿದು ಕೊಳ್ಳಬೇಕು, ಗುರುವನ್ನು ಕುರಿತು ಯಾರೂ ಅಸೂಯೆ ಪಡಕೂಡದು ಅಥವಾ ಗುರುವನ್ನು ಸಾಮಾನ್ಯ ಮನುಷ್ಯನೆಂದೂ ಭಾವಿಸಕೂಡದು,

ಗುರು ಸಕಲ ದೇವತೆಗಳ ಸಾರಭೂತನಾಗಿರುತ್ತಾನೆ.” ಎಂದರೆ ಆಚಾರ್ಯರನ್ನು ದೇವರೆಂದೇ ಪರಿಗಣಿಸಲಾಗಿದೆ. ಆತನಿಗೆ ಈ ಪ್ರಾಪಂಚಿಕ ಜಗತ್ತನ್ನು ಕಟ್ಟಿಕೊಂಡು ಏನೂ ಆಗಬೇಕಿಲ್ಲ. ತಾತ್ಕಾಲಿಕ ಅನಾವಶ್ಯಕತೆಗಳನ್ನು ಕುರಿತು ವ್ಯವಹರಿಸಲು ಗುರು ಭೂಮಿಗೆ ಬರುವುದಿಲ್ಲ. ಪತಿತ ಮತ್ತು ಬದ್ಧ ಜೀವರನ್ನು ಎಂದರೆ, ಮನಸ್ಸಿನಿಂದ ಮತ್ತು ಪಂಚ ಜ್ಞಾನೇಂದ್ರಿಯಗಳಿಂದ ಸುಖಾನುಭೋಗ ಮಾಡಲು ಈ ಭೌತಿಕ ಪ್ರಪಂಚಕ್ಕೆ ಬಂದಿರುವವರ ಉದ್ಧಾರಕ್ಕಾಗಿ ಬರುತ್ತಾರೆ. ನಮಗೆ ವೇದ ಜ್ಞಾನವನ್ನು ನೀಡಲು ಮತ್ತು ನಮಗೆ ಪೂರ್ಣಸ್ವಾತಂತ್ರ್ಯದ ಸತ್ಫಲವನ್ನು ಒದಗಿಸಿಕೊಡಲು ಗುರು ನಮ್ಮಲ್ಲಿಗೆ ಬರುತ್ತಾರೆ. ಆ ಬಳಿಕ ನಾವು ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಅವರನ್ನು ಹಿಂಬಾಲಿಸಬೇಕು.

ವೇದಗಳ ದಿವ್ಯಜ್ಞಾನವನ್ನು ಭಗವಂತನು ಈ ವಿಶ್ವದ ಸೃಷ್ಟಿಕರ್ತನಾದ ಬ್ರಹ್ಮನಿಗೆ ತಿಳಿಸಿದನು. ಆ ಜ್ಞಾನವು ಬ್ರಹ್ಮನಿಂದ ನಾರದರಿಗೆ ಬಂತು. ನಾರದರಿಂದ ವೇದವ್ಯಾಸರಿಗೆ, ವ್ಯಾಸದೇವರಿಂದ ಮಧ್ವರಿಗೆ ಮತ್ತು ಹೀಗೆಯೇ ಗುರು–ಶಿಷ್ಯ ಪರಂಪರೆಯಲ್ಲಿ ಈ ದಿವ್ಯ ಜ್ಞಾನವು ಶಿಷ್ಯರಿಂದ ಶಿಷ್ಯರಿಗೆ, ಭಗವಾನ್ ಗೌರಾಂಗರು ಎಂದರೆ, ಈಶ್ವರಪುರಿ ಅವರ ಶಿಷ್ಯರೂ ಉತ್ತರಾಧಿಕಾರಿಯೂ ಎಂದು ಹೆಸರಾದ ಶ್ರೀ ಕೃಷ್ಣ ಚೈತನ್ಯರಿಗೆ ತಲಪುವ ತನಕ ಇಳಿದು ಬಂತು. ಈಗಿನ ಆಚಾರ್ಯರು, ಭಗವಾನ್ ಚೈತನ್ಯರ ಪ್ರಥಮ ಪ್ರತಿನಿಧಿಯಾದ ರೂಪಗೋಸ್ವಾಮಿ ಅವರಿಂದ ಶಿಷ್ಯ ಪರಂಪರೆಯಲ್ಲಿ ಬಂದ ಹತ್ತನೆಯವರು. ಚೈತನ್ಯರು ಈ ದಿವ್ಯಾಧ್ಯಾತ್ಮದ ಸಂಪ್ರದಾಯವನ್ನು ಪೂರ್ಣವಾಗಿ ಪ್ರಚಾರ ಮಾಡಿದರು. ನಮ್ಮ ಗುರುದೇವರಿಂದ ನಾವು ಪಡೆಯುವ ಜ್ಞಾನವು ಭಗವಂತನೇ ಸ್ವತಃ ನೀಡಿದ ಜ್ಞಾನದಿಂದ ಮತ್ತು ಬ್ರಹ್ಮನಿಂದಾರಂಭ ಮಾಡಿ ಉಪದೇಶ ನೀಡುತ್ತ ಬಂದ ಆಚಾರ್ಯರ ಪಂಕ್ತಿಯ ಜ್ಞಾನದಿಂದ ಭಿನ್ನವಾದುದಲ್ಲ. ಈ ಮಂಗಲ ದಿನವನ್ನು ನಾವು ವ್ಯಾಸ ಪೂಜಾತಿಥಿ ಎಂಬುದಾಗಿ ಆಚರಿಸುತ್ತೇವೆ. ಈ ನಮ್ಮ ಆಚಾರ್ಯರು ವೇದವ್ಯಾಸರ ಸಜೀವ ಪ್ರತಿನಿಧಿಯೇ ಆಗಿದ್ದಾರೆ. ವೇದವ್ಯಾಸರು ವೇದಗಳನ್ನು, ಪುರಾಣಗಳನ್ನು, ಭಗವದ್ಗೀತೆಯನ್ನು, ಮಹಾಭಾರತ ಮತ್ತು ಶ್ರೀಮದ್ಭಾಗವತವನ್ನು ರಚಿಸಿದ ದೇವೋತ್ತಮರು.

ದಿವ್ಯಧ್ವನಿಯನ್ನು ಅಥವಾ ಶಬ್ದಬ್ರಹ್ಮವನ್ನು ತಮ್ಮ ಅಪರಿಪೂರ್ಣ ಭೌತಿಕ ಇಂದ್ರಿಯ ಜ್ಞಾನಗಳ ಮೂಲಕ ಅರ್ಥೈಸುವವರು ನಿಜವಾದ ಗುರುಗಳಾಗಲಾರರು. ಕಾರಣವೆಂದರೆ, ಆಚಾರ್ಯರಲ್ಲಿ ತಕ್ಕ ಸಂಯಮದಿಂದ ಜ್ಞಾನೋಪದೇಶ ಪಡೆದಿರದಿದ್ದರೆ, ವ್ಯಾಖ್ಯಾನ ಮಾಡಹೊರಟವನು (ಮಾಯವಾದಿಗಳು ಮಾಡುವಂತೆ) ವೇದವ್ಯಾಸ ದೇವರ ಅರ್ಥಕ್ಕೆ ವಿರುದ್ಧವಾಗಿಯೇ ಹೇಳಹೊರಡುವುದು ಖಂಡಿತ. ಶ್ರೀ ವೇದವ್ಯಾಸ ವೇದಶಾಸ್ತ್ರಗಳ ವಿಷಯದಲ್ಲಿ ಪರಮ ಪ್ರಮಾಣರು. ಆದುದರಿಂದ ಇಂಥ ವಿಸಂಗತ ವ್ಯಾಖ್ಯಾನಕಾರನು ಪ್ರಾಪಂಚಿಕ ವಿಷಯಗಳಲ್ಲಿ ಎಷ್ಟೇ ಜ್ಞಾನಸಂಪಾದನೆ ಮಾಡಿದವನಾಗಿದ್ದರೂ, ಅವನನ್ನು ಗುರು ಎಂದಾಗಲೀ ಅಥವಾ ಆಚಾರ್ಯರೆಂದಾಗಲೀ ಅಂಗೀಕರಿಸಲು ಬರುವುದಿಲ್ಲ. ಪದ್ಮ ಪುರಾಣದಲ್ಲಿ ಹೀಗೆ ಹೇಳಲಾಗಿದೆ :

ಸಂಪ್ರದಾಯ ವಿಹೀನಾ ಯೇ ಮಂತ್ರಾಸ್ತೇ ನಿಷ್ಫಲಾಮತಾಃ ।

“ನೀವು ಸಂಪ್ರದಾಯದಲ್ಲಿ ದೀಕ್ಷಾ ಬದ್ಧರಾದ ಗುರುವಿನಿಂದ ಉಪದೇಶ ಪಡೆದ ಹೊರತು ಮಂತ್ರವು ಫಲಕಾರಿಯಾಗುವುದಿಲ್ಲ.”

ಇದಕ್ಕೆ ಬದಲಾಗಿ, ಗುರುಶಿಷ್ಯ ಪರಂಪರೆಯಲ್ಲಿ ನಿಜವಾದ ಉಪದೇಶಕನಿಂದ ನೇರವಾಗಿ ದಿವ್ಯ ಜ್ಞಾನೋಪದೇಶವನ್ನು ಶ್ರವಣ ಮಾಡಿದವನು ಮತ್ತು ಆಚಾರ್ಯರ ಬಗ್ಗೆ ನಿಜವಾದ ಗೌರವಭಾವ ಹೊಂದಿರುವವನು ಮಾತ್ರ ವೇದಗಳ ನಿಜಾರ್ಥವನ್ನು ತಿಳಿದುಕೊಳ್ಳ ಬಹುದಾಗಿದೆ. ಕೇವಲ ಭೌತವಾದಿಗಳ ಇಂದ್ರಿಯ ಗ್ರಹಣಕ್ಕೆ ಈ ಜ್ಞಾನವು ಎಂದೂ ನಿಲುಕುವುದಿಲ್ಲ. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೀಗೆ ಹೇಳಿದೆ:

ಯಸ್ಯ ದೇವೇ ಪರಾ ಭಕ್ತಿರ್ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹಿ ಅರ್ಥಾಃ ಪ್ರಕಾಶಂತೇ ಮಹಾತ್ಮನಃ ॥

"ಏಕಕಾಲದಲ್ಲಿ ಭಗವಂತನಲ್ಲಿ ಮತ್ತು ಗುರುಗಳಲ್ಲಿ ಅಚಲ ಶ್ರದ್ಧೆಯುಳ್ಳ ಮಹಾತ್ಮರಿಗೆ ಮಾತ್ರ ವೇದಜ್ಞಾನದ ಸಕಲಾರ್ಥವೂ ತಾನಾಗಿಯೇ ವಿದಿತದಾಗುತ್ತದೆ."

ಮಹನೀಯರೇ, ನಮ್ಮ ಇಂದಿನ ಜ್ಞಾನ ಅತ್ಯಂತ ಕ್ಷುದ್ರವಾದದ್ದು. ನಮ್ಮ ಇಂದ್ರಿಯಗಳು ಅತ್ಯಂತ ಅಪರಿಪೂರ್ಣ ಮತ್ತು ನಮ್ಮ ಜ್ಞಾನಮೂಲಗಳೂ ಪರಿಮಿತ ವಾದವುಗಳು. ಹೀಗಾಗಿ, ನಾವು ವೇದವ್ಯಾಸರ ಅಥವಾ ಅವರ ನಿಜಭಕ್ತರಾದ ಪ್ರತಿನಿಧಿಗಳ ಪಾದಾರವಿಂದಗಳಿಗೆ ಶರಣಾಗತರಾಗದ ಹೊರತು ಆ ಪರವ್ಯೋಮದ ಕಿಂಚಿತ್ ಜ್ಞಾನವೂ ನಮಗೆ ದೊರೆಯುವುದು ಅಸಾಧ್ಯ. ಪ್ರತ್ಯಕ್ಷ ಜ್ಞಾನದಿಂದ ನಾವು ಪ್ರತಿ ಗಳಿಗೆಯಲ್ಲಿಯೂ ಮೋಸ ಹೋಗುತ್ತಿದ್ದೇವೆ. ಇವೆಲ್ಲ ಮೋಸಕಾರಕ, ಪರಿವರ್ತನಶೀಲ ಮತ್ತು ಚಂಚಲ ಮನಸ್ಸಿನ ಸೃಷ್ಟಿ ಅಥವಾ ವಿಕಲ್ಪಗಳೇ ಆಗಿವೆ. ನಮ್ಮ ಪರಿಮಿತವಾದ ಮತ್ತು ಅತಿರೋಹಿತವಾದ ಗ್ರಹಣ ಸಾಮರ್ಥ್ಯ ಮತ್ತು ಪ್ರಯೋಗದಿಂದ ನಾವು ದಿವ್ಯಲೋಕದ ಏನನ್ನೂ ಅರಿತುಕೊಳ್ಳುವುದು ಸಾಧ್ಯವಿಲ್ಲ. ಆದರೆ, ಆ ಲೋಕದಿಂದ ಬರುವ ದಿವ್ಯ ಧ್ವನಿಯು ಗುರುದೇವರ ಅಥವಾ ಶ್ರೀ ವೇದವ್ಯಾಸರ ಮೂಲಕ ಯಥಾವತ್ತಾಗಿ ಬರುತ್ತದೆ. ಅದನ್ನು ನಾವೆಲ್ಲ ಶ್ರದ್ಧಾಪೂರ್ವಕ ಶ್ರವಣ ಮಾಡಿ ಗ್ರಹಿಸಬಹುದಾಗಿದೆ. ಆದುದರಿಂದ, ಮಹಾಜನಗಳೇ, ನಮ್ಮ ಅವಿನೀತ ಭಾವದಿಂದ ಉಂಟಾದ ಎಲ್ಲ ಭಿನ್ನಾಭಿಪ್ರಾಯಗಳ ನಿವಾರಣೆಗಾಗಿ ನಾವು ಇಂದೇ ಶ್ರೀ ವೇದ ವ್ಯಾಸ ಪ್ರತಿನಿಧಿಗಳ ಪಾದಾರವಿಂದಗಳಿಗೆ ಶರಣಾಗತರಾಗಬೇಕು. ಗೀತೆಯಲ್ಲಿ (4-34) ಹೀಗೆ ಹೇಳಿದೆ:

ತದ್ ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಮ್ ಜ್ಞಾನಿನಸ್ತತ್ತ್ವದರ್ಶನಃ ॥

"ನೀವು ಕೇವಲ ಒಬ್ಬ ಸದ್ಗುರುವಿನ ಬಳಿಗೆ ಹೋಗಿ ಅವರಿಗೆ ಶರಣಾಗತರಾಗಿರಿ. ಆ ಮೇಲೆ ಪರಿಪ್ರಶ್ನೆಗಳ ಮೂಲಕ ಮತ್ತು ಅವರ ಸೇವೆ ಮಾಡಿ ಅವರಿಂದ ಅರಿತುಕೊಳ್ಳಲು ಪ್ರಯತ್ನಿಸಿರಿ. ಅಂಥ ಗುರು ಪರಮಸತ್ಯವನ್ನು ತಿಳಿದವರಾಗಿರುವುದರಿಂದ ಅವರು ನಿಮಗೆ ದಿವ್ಯಜ್ಞಾನವನ್ನು ನೀಡುತ್ತಾರೆ."

ದಿವ್ಯಜ್ಞಾನ ಪ್ರಾಪ್ತಿಗಾಗಿ ನಾವು ನಿಜವಾದ ಆಚಾರ್ಯರಿಗೆ ಜಿಜ್ಞಾಸಾ ಕುತೂಹಲ ದಿಂದ ಮತ್ತು ಸೇವಾ ಮನೋಭಾವದಿಂದ ಸಂಪೂರ್ಣ ಶರಣಾಗತರಾಗಬೇಕು. ಆಚಾರ್ಯರ ಮಾರ್ಗದರ್ಶನದಲ್ಲಿ ಪರಮಾತ್ಮನ ನಿಜ ಸೇವೆ ಮಾಡುವುದೇ ಜ್ಞಾನಪ್ರಾಪ್ತಿಯ ಏಕೈಕ

ಮಾರ್ಗವಾಗಿದೆ. ಈ ದಿನ ನಾವೆಲ್ಲ ನಮ್ಮ ವಿನಮ್ರ ಸೇವೆ ಮತ್ತು ಪ್ರಣಾಮಗಳನ್ನು ಆಚಾರ್ಯ ದೇವರಿಗೆ ಸಲ್ಲಿಸಲು ಸೇರಿರುವುದರಿಂದ, ಆಚಾರ್ಯದೇವರು ಕರುಣೆಯಿಂದ ಯಾವ ಭೇದ ಭಾವ ಮಾಡದೆ ಎಲ್ಲರಿಗೂ ಬೋಧಿಸಿದ ಜ್ಞಾನವು ನಮಗೂ ದೊರೆಯುವಂತೆ ಅನುಗ್ರಹಿಸುತ್ತಾರೆ.

ಮಹನೀಯರೇ, ಹೆಚ್ಚು ಕಡಿಮೆ ನಾವೆಲ್ಲರೂ ಭಾರತದ ನಮ್ಮ ಪ್ರಾಚೀನ ನಾಗರಿಕತೆಯ ಬಗ್ಗೆ ಹೆಮ್ಮೆಯನ್ನು ಹೊಂದಿದ್ದೇವೆ. ಆದರೆ ನಾವು ಆ ನಾಗರಿಕತೆಯ ನಿಜವಾದ ಸ್ವರೂಪವನ್ನೇ ಅರಿತುಕೊಂಡಿಲ್ಲ. ಈಗ ಅದರ ಸಹಸ್ರ ಪಟ್ಟು ಹೆಚ್ಚಾಗಿರುವ ನಮ್ಮ ಭೌತಿಕ ನಾಗರಿಕತೆಯನ್ನು ಕುರಿತು ಹೆಮ್ಮೆ ಪಟ್ಟು ಫಲವಿಲ್ಲ. ನಾವು ಕತ್ತಲುಯುಗ ಎಂದರೆ ಕಲಿಯುಗದಲ್ಲಿದ್ದೇವೆ ಎಂದು ಹೇಳಲಾಗುತ್ತದೆ. ಈ ಕತ್ತಲು ಎಂದರೇನು ? ನಮಗೆ ಇಂದು ಎಂದಿಗಿಂತ ಹೆಚ್ಚಾದ ಭೌತಿಕ ಜ್ಞಾನವು ಲಭ್ಯವಾಗಿದೆ. ಈ ಕತ್ತಲು ಎಂಬುದು ಭೌತಿಕ ಹಿಂದುಳಿಯುವಿಕೆಯಿಂದ ಬರುವುದಲ್ಲ. ನಮಗೆ ಅಷ್ಟು ಲಭ್ಯವಾಗಿರದಿದ್ದರೂ, ನಮ್ಮ ಅಕ್ಕಪಕ್ಕದ ದೇಶಗಳವರಿಗಂತೂ ಅದು ಸಮೃದ್ಧವಾಗಿ ದೊರಕಿದೆ. ಈ ಯುಗದ ಕತ್ತಲು ಭೌತಿಕ ಪ್ರಗತಿಯ ಕೊರತೆಯಿಂದ ಬಂದದ್ದಲ್ಲ, ಮಾನವ ಜೀವನಕ್ಕೆ ಅತ್ಯುನ್ನತ ಬಗೆಯ ಮಾನವ ನಾಗರಿಕತೆಗೆ ಅತ್ಯವಶ್ಯವಾದ ಆಧ್ಯಾತ್ಮಿಕ ಮುನ್ನಡೆಯ ಸುಳಿವನ್ನೇ ನಾವು ಕಳೆದುಕೊಂಡಿದ್ದೇವೆ–ಕತ್ತಲೆಗೆ ಇದೇ ಕಾರಣ ಎಂದು ನಾವು ನಿರ್ಧಾರಕ್ಕೆ ಬರಬೇಕು. ಅನಾಗರಿಕ ಮಾನವರು ಒಂದು ದೆಶೆಯಲ್ಲಿ ಪರ್ವತ ತುದಿಗಳಲ್ಲಿ ನಿಂತು ದೊಡ್ಡ ಬಂಡೆಗಳನ್ನು ತಮ್ಮ ವೈರಿಗಳ ತಲೆಯ ಮೇಲೆ ಎಸೆಯುತ್ತಿದ್ದರು. ವೈರಿಗಳ ಮೇಲೆ ವಿಮಾನಗಳಿಂದ ಬಾಂಬುಗಳನ್ನು ಎಸೆಯುವ ಮಾತ್ರದಿಂದ ನಾಗರಿಕತೆ ಪ್ರಗತಿಯಾದಂತೆ ಆಗಲಿಲ್ಲ. ಆದಿ ಮಾನವರು ತಮ್ಮ ಬಿಲ್ಲುಬಾಣಗಳಿಂದ ಜನರನ್ನು ಕೊಲ್ಲುವುದಾಗಿ ಹೆಮ್ಮೆ ಪಟ್ಟುಕೊಳ್ಳುತ್ತಿದ್ದರು. ಈಗ ನಮ್ಮ ನೆರೆಹೊರೆಯವರನ್ನು ನಾವು ಮಿಷೀನುಗನ್ನುಗಳಿಂದ ಮತ್ತು ವಿಷವಾಯುಗಳಿಂದ ನಾಶಮಾಡುವುದು ಕೊಲೆ ಮಾಡುವ ಕಲೆಯ ಸುಧಾರಣೆಯೇ ಹೊರತು ಅದು ಖಂಡಿತ ಪ್ರಗತಿಯೆನಿಸಲಾರದು. ಹಾಗೆಯೇ ಹೆಚ್ಚು ಹೆಚ್ಚು ಸ್ವಾರ್ಥಪರ ರಾಗುತ್ತಿರುವುದೂ ಬೌದ್ಧಿಕ ಪಾಶವೀಯತೆಗಿಂತ ಹೆಚ್ಚಿನದೇನೂ ಆಗಲಾರದು. ನಿಜವಾದ ಮಾನವ ನಾಗರಿಕತೆಯೆಂಬುದು ಈ ಎಲ್ಲವುಗಳಿಂದ ಭಿನ್ನವಾಗಿದೆ. ಅಂತೆಯೇ ಕಠೋಪ ನಿಷತ್ತಿನಲ್ಲಿ (1-3-14) ಹೀಗೆ ಆಗ್ರಹಪೂರ್ವಕವಾಗಿ ಕರೆಕೊಡಲಾಗಿದೆ.

ಉತ್ತಿಷ್ಠ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ ॥

"ಎಚ್ಚತ್ತುಕೊಳ್ಳಿ, ಈ ಮಾನವ ಜನ್ಮದ ರೂಪದಲ್ಲಿ ನಿಮಗೆ ದೊರೆತ ವರವನ್ನು ಅರಿತುಕೊಳ್ಳಲು ಯತ್ನಿಸಿ. ಈ ಆಧ್ಯಾತ್ಮಿಕ ಪಥವೆಂಬುದು ದುರ್ಗಮವಾದುದು. ಅದು ಅಸಿಧಾರೆಯಂತೆ ಹರಿತಾಗಿದೆ. ದಿವ್ಯಜ್ಞಾನಿಗಳು ಹೀಗೆ ಅಭಿಪ್ರಾಯಪಟ್ಟಿದ್ದಾರೆ."

ಹೀಗೆ, ಇತರರು ಇನ್ನೂ ಐತಿಹಾಸಿಕ ವಿಸ್ಮರಣೆಯ ಗರ್ಭಾವಸ್ಥೆಯಲ್ಲಿರುವಾಗ, ಭಾರತ ನಾಗರಿಕತೆಯು ಪ್ರಬುದ್ಧಾವಸ್ಥೆಯನ್ನು ತಲ್ಪಿತ್ತು. ಅದು ತಮ್ಮನ್ನು ತಾವೇ ಅರಿತುಕೊಳ್ಳುವಂತೆ ಮಾಡಿತ್ತು. ನಾವು ಕೇವಲ ಭೌತಿಕ ವಸ್ತುಗಳಲ್ಲ, ನಾವು ಆತ್ಮ ಸ್ವರೂಪರು ಮತ್ತು ಪರಮ ಸತ್ಯಸ್ವರೂಪನ ಅವಿನಾಶೀ ದಾಸರು ಎಂಬುದನ್ನು ನಮ್ಮವರು ಅರಿತುಕೊಂಡಿದ್ದರು. ಆದರೆ

ನಾವು ನಮ್ಮ ಶ್ರೇಷ್ಠ ತಿಳಿವಳಿಕೆಗೆ ವಿರುದ್ಧವಾಗಿ ಈ ಭೌತಿಕ ಅಸ್ತಿತ್ವವೇ ನಿಜವೆಂಬ ಭ್ರಾಂತಿಗೆ ಸಂಪೂರ್ಣವಾಗಿ ಮಾರು ಹೋಗಿರುವುದರಿಂದ, ಜನನ ಮರಣಗಳ ಅದಮ್ಯ ನಿಯಮಗಳಿಗನುಸಾರ ಮತ್ತು ತತ್ಪರಿಣಾಮವಾದ ರೋಗ ರುಜಿನಗಳು ಮತ್ತು ಕ್ಷೋಭೆಗಳು ಇವುಗಳಿಂದಾಗಿ ನಮ್ಮ ದುಃಖಗಳು ನೂರ್ಮಡಿಯಾಗಿವೆ. ಭೌತಿಕ ಸುಖ ಸಾಧನಗಳನ್ನು ಹೆಚ್ಚಿಸಿಕೊಂಡ ಮಾತ್ರದಿಂದ ನಿಜವಾಗಿ ಈ ದುಃಖ ನಿವೃತ್ತಿಯಾಗುವುದಿಲ್ಲ. ಕಾರಣವೆಂದರೆ ಪ್ರಕೃತಿ ಮತ್ತು ಆತ್ಮ ಪರಸ್ಪರ ಭಿನ್ನ ವಸ್ತುಗಳಾಗಿವೆ. ಇದು, ನೀವು ಒಂದು ಜಲಚರ ಪ್ರಾಣಿಯನ್ನು ನೀರಿನಿಂದ ತೆಗೆದು ಮೇಲಿಟ್ಟು ಅದಕ್ಕೆ ಭೂಮಿಯ ಮೇಲಿನ ಎಲ್ಲ ಸುಖ ಸಾಧನಗಳನ್ನು ಒದಗಿಸಿದ ಹಾಗೆ ಎಂದು ಹೇಳಬಹುದು. ಅದನ್ನು ಅದಕ್ಕೆ ಪರಕೀಯವೆನಿಸಿದ ವಾತವರಣದಿಂದ ಬಿಡುಗಡೆ ಮಾಡಿ ಮತ್ತು ಮರಣಪ್ರಾಯವಾದ ನೋವಿನಿಂದ ಪ್ರಾಣಿಯನ್ನು ರಕ್ಷಿಸುವುದು ಅಸಾಧ್ಯ. ಆತ್ಮ ಮತ್ತು ಪ್ರಕೃತಿ ಇವು ಸಂಪೂರ್ಣವಾಗಿ ಪರಸ್ಪರ ವಿರುದ್ಧ ವಸ್ತುಗಳು. ನಾವೆಲ್ಲರೂ ಜೀವಾತ್ಮರು. ನಾವು ಪ್ರಾಪಂಚಿಕ ವಸ್ತುಗಳನ್ನು ಎಷ್ಟೇ ಸರಿಹೊಂದಿಸಿಕೊಂಡರೂ ನಮ್ಮ ಜನ್ಮಸಿದ್ಧವಾದ ಪೂರ್ಣಾನಂದವನ್ನು ಪಡೆಯಲಾರೆವು. ನಾವು ಮತ್ತೆ ನಮ್ಮ ಆತ್ಮದ ನಿಜಸ್ವರೂಪಕ್ಕೆ ಮರಳಿದಾಗಲೇ ನಮಗೆ ಪೂರ್ಣಾನಂದ ದೊರೆಯುವುದು. ಇದೇ ನಮ್ಮ ಪ್ರಾಚೀನ ಭಾರತೀಯ ನಾಗರಿಕತೆಯ ವಿಶಿಷ್ಟ ಸಂದೇಶ; ಇದೇ ಭಗವದ್ಗೀತೆಯ ಸಂದೇಶವೂ ಆಗಿದೆ. ಇದು ಸಕಲ ವೇದ ಪುರಾಣಗಳ ಸಂದೇಶವೂ ಆಗಿದೆ. ಇದೇ ನಿಜವಾದ ಎಲ್ಲ ಪೂರ್ವಾಚಾರ್ಯರ ಮತ್ತು ಭಗವಾನ್ ಚೈತನ್ಯರ ಪರಂಪರೆಯಲ್ಲಿ ಬಂದ ನಮ್ಮ ಇಂದಿನ ಆಚಾರ್ಯದೇವರ ಸಂದೇಶವೂ ಆಗಿದೆ.

ಮಹನೀಯರೇ, ಓಂ ವಿಷ್ಣುಪಾದ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮದ್ ಭಕ್ತಿಸಿದ್ಧಾಂತ ಸರಸ್ವತಿ ಗೋಸ್ವಾಮಿಮಹಾರಾಜ ಆಚಾರ್ಯದೇವರ ಕೃಪೆಯಿಂದ ಅವರ ಪವಿತ್ರ ಸಂದೇಶಗಳನ್ನು ಅರಿತುಕೊಳ್ಳಲು ನಾವು ಸಮರ್ಥರಾಗಿರುವುದು ಅಪರಿಪೂರ್ಣವಾಗಿರುವುದಾದರೂ, ಅವರ ಪವಿತ್ರ ವಾಣಿಯಿಂದ ಬಂದ ದಿವ್ಯ ಸಂದೇಶವು ದುಃಖಪಡುತ್ತಿರುವ ಮಾನವ ಕುಲಕ್ಕೆ ಸಾಂತ್ವನ ನೀಡುವ ಸಂದೇಶವಾಗಿದೆ ಎಂಬುದು ನಮಗೆ ಖಂಡಿತ ಮನದಟ್ಟಾಗಿದೆ ಎಂದು ನಾವು ಒಪ್ಪಿಕೊಳ್ಳಲೇಬೇಕು. ನಾವು ಶಾಂತ ಚಿತ್ತದಿಂದ ಅವರು ಹೇಳಿದುದನ್ನು ಶ್ರವಣ ಮಾಡಬೇಕು. ಅನಾವಶ್ಯಕವಾಗಿ ವಿರೋಧಿಸದೆ, ಅವರ ದಿವ್ಯ ಧ್ವನಿಯನ್ನು ಆಲಿಸಿದರೆ, ಅವರು ಖಂಡಿತ ನಮ್ಮ ಮೇಲೆ ಕರುಣೆ ಬೀರುವರು. ಆಚಾರ್ಯರ ಸಂದೇಶವು ಮರಳಿ ನಮ್ಮ ಮೂಲ ಮನೆಗೆ, ಎಂದರೆ ದೇವತ್ವದೆಡೆಗೆ ಕರೆದೊಯ್ಯುವುದಾಗಿದೆ. ಆದುದರಿಂದ ನಾವು ಅವರನ್ನು ಶಾಂತ ಚಿತ್ತದಿಂದ ಆಲಿಸಬೇಕು ಮತ್ತು ನಮ್ಮ ಮನಸಾಕ್ಷಿಯಿಂದ ಅವರನ್ನು ಅನುಸರಿಸಬೇಕು, ಪರಮ ಸತ್ಯಸ್ವರೂಪನನ್ನು ಮತ್ತು ಎಲ್ಲ ಜೀವಾತ್ಮರನ್ನು ಸೇವಿಸುವುದಕ್ಕಾಗಿ, ಸದ್ಯದ ನಮ್ಮ ನಿಷ್ಕಾರಣವಾದ ಅನಿಶ್ಚಿತ ದೆಶೆಯಿಂದ ನಮ್ಮನ್ನು ಬಿಡುಗಡೆ ಮಾಡಲು ಅವರ ಪಾದಾರವಿಂದಗಳಿಗೆ ಶರಣು ಹೋಗಬೇಕು ಎಂಬುದನ್ನು ನಾನು ಮತ್ತೆ ಇಲ್ಲಿ ಹೇಳ ಬಯಸುತ್ತೇನೆ. ಈ ದೇಶವು ನಾಶವಾದ ತರುವಾಯವೂ ಆತ್ಮವು ಅಥವಾ ಜೀವವು ನಾಶಹೊಂದುವುದಿಲ್ಲ. ಜೀವನು ಶಾಶ್ವತವಾಗಿ ಸದಾ ನವಚೇತನ ಹೊಂದಿರುತ್ತಾನೆ. ಬೆಂಕಿಯು ಅವನನ್ನು ಸುಡಲಾರದು, ನೀರು ಅವನನ್ನು ಕರಗಿಸಲಾರದು, ಗಾಳಿಯು ಅವನನ್ನು ಒಣಗಿಸಲಾರದು ಮತ್ತು ಖಡ್ಗವು ಅವನನ್ನು ಕೊಲ್ಲಲಾರದು ಎಂಬುದನ್ನು ನಾವು ಗೀತೆಯಿಂದ

ಅರಿತುಕೊಳ್ಳುತ್ತೇವೆ. ಆವನು ಅನಾದಿ ಮತ್ತು ನಿತ್ಯನು. ಇದು ಕೂಡ ಶ್ರೀಮದ್ಭಾಗವತದಲ್ಲಿ ದೃಢಪಟ್ಟಿದೆ (10-84-13).

ಯಸ್ಯಾತ್ಮ ಬುದ್ಧಿಃ ಕುಣಪೇ ತ್ರಿಧಾತುಕೇ ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ ।
ಯತ್ ತೀರ್ಥ ಬುದ್ಧಿಃ ಸಲಿಲೇ ನ ಕರಹಿಚಿಜ್ ಜನೇಷ್ವ ಅಭಿಜ್ಞೇಷು ಸ ಏವ ಗೋಖರಃ ॥

"ಮೂರು ಅಂಶಗಳಿಂದ (ಪಿತ್ತ, ಆಮ ಮತ್ತು ವಾತ) ಕೂಡಿದ ಶರೀರ ಕವಚವನ್ನು ತನ್ನ ಆತ್ಮವೆಂದೂ ತಿಳಿಯುವವನು ತನ್ನ ಹೆಂಡತಿ ಮಕ್ಕಳೊಂದಿಗೆ ನಿಕಟ ಸಂಬಂಧ ಹೊಂದುವ ಇಚ್ಛೆಯುಳ್ಳವನು, ತನ್ನ ಜನ್ಮಭೂಮಿಯೇ ಪೂಜಾರ್ಹವೆಂದು ತಿಳಿಯುವವನು, ತೀರ್ಥಕ್ಷೇತ್ರಗಳ ಯಾತ್ರೆ ಮಾಡಿ ಅಲ್ಲಿ ಮಿಂದು ಅಲ್ಲಿರುವ ನಿಜವಾದ ಜ್ಞಾನಿಗಳ ಉಪದೇಶ ಲಾಭ ಪಡೆಯದೆ ಇದ್ದರೆ ಆವನು ಒಂದು ಕತ್ತೆ ಅಥವಾ ಗೋವಿಗಿಂತ ಉತ್ತಮನಲ್ಲ."

ದುರ್ದೈವದಿಂದ ನಾವೆಲ್ಲರು ನಮ್ಮ ನಿಜವಾದ ಸುಖವನ್ನು ನಿರ್ಲಕ್ಷಿಸುವಷ್ಟು ಮೂರ್ಖರಾಗಿದ್ದೇವೆ ಮತ್ತು ನಾವೇ ಈ ಭೌತಿಕ ಪಂಜರವೆಂದು ಹೇಳುತ್ತಿದ್ದೇವೆ. ಈ ಪಂಜರದಲ್ಲಿ ಸೆರೆಯಾಗಿರುವ ಆತ್ಮವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಈ ಭೌತಿಕ ಪಂಜರವನ್ನು ಸರಿಯಾಗಿಡಲು ಅರ್ಥಹೀನವಾದ ಪ್ರಯತ್ನಗಳಲ್ಲಿ ನಮ್ಮ ಎಲ್ಲ ಶಕ್ತಿ ಸಾಮರ್ಥ್ಯಗಳನ್ನು ಕೇಂದ್ರೀಕರಿಸಿದ್ದೇವೆ. ಪಂಜರವು ಪಕ್ಷಿಯನ್ನು ಸೆರೆಹಾಕಲು ರಚಿತವಾದುದಾಗಿದೆ. ಆದರೆ ಪಕ್ಷಿಯು ಪಂಜರದ ಕಲ್ಯಾಣಕ್ಕಾಗಿ ಇಲ್ಲ. ಆದುದರಿಂದ ನಾವು ಈ ವಿಷಯವನ್ನು ಆಳವಾಗಿ ಯೋಜಿಸಬೇಕು. ಈಗ ನಮ್ಮ ಎಲ್ಲ ಚಟುವಟಿಕೆಗಳು ಈ ಪಂಜರದ ಪೋಷಣೆಯ ಕಡೆಗೆಯೇ ದೃಷ್ಟಿ ಹೊಂದಿವೆ ಮತ್ತು ಬಹಳ ಹೆಚ್ಚೆಂದರೆ ಕಲೆ ಮತ್ತು ಸಾಹಿತ್ಯ ಅವಲೋಕನದಿಂದ ನಮ್ಮ ಮನಸ್ಸಿಗೆ ಸ್ವಲ್ಪ ಆಹಾರವನ್ನು ಒದಗಿಸುತ್ತಿದ್ದೇವೆ ಅಷ್ಟೆ. ಆದರೆ ಮನಸ್ಸು ಕೂಡ ಅತ್ಯಂತ ಸೂಕ್ಷ್ಮರೂಪದಲ್ಲಿ ಭೌತಿಕ ವಸ್ತುವೇ ಆಗಿದೆ ಎಂಬುದನ್ನು ನಾವು ತಿಳಿದಿಲ್ಲ. ಗೀತೆಯಲ್ಲಿ ಹೀಗೆ ಹೇಳಿದೆ (1-4):

ಭೂಮಿರಾಪೋ ಅನಲೋ ವಾಯುಃ ಖಂ ಮನೋ ಬುದ್ಧಿರ್ ಏವಚ ।
ಅಹಂಕಾರ ಇತೀಯಂ ಮೇ ಭಿನ್ನಾಪ್ರಕೃತಿರ್ ಅಷ್ಟಧಾ ॥

"ಪೃಥ್ವಿ, ಅಗ್ನಿ, ಅಪು, ವಾಯು, ಆಕಾಶ, ಬುದ್ಧಿ, ಮನಸ್ಸು ಮತ್ತು ಅಹಂಕಾರ ಇವು ನನ್ನ ಭಿನ್ನಶಕ್ತಿಗಳಾಗಿವೆ"

ನಾವು ನಮ್ಮ ದೇಹ ಮತ್ತು ಮನಸ್ಸಿನಿಂದ ಸಂಪೂರ್ಣವಾಗಿ ಭಿನ್ನವಾದ ಆತ್ಮಕ್ಕೆ ಆಹಾರವನ್ನೊದಗಿಸಲು ಎಂದೂ ಪ್ರಯತ್ನಿಸಿಲ್ಲ. ಆದುದರಿಂದ ನಿಜವಾದ ಅರ್ಥದಲ್ಲಿ ನಾವೆಲ್ಲರೂ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೇವೆ. ಇಂಥ ತಪ್ಪು ಚಟುವಟಿಕೆಗಳನ್ನು ನಿಲ್ಲಿಸಲು ಎಚ್ಚರಿಕೆಯ ರೂಪವಾಗಿ ಆಚಾರ್ಯ ದೇವರು ಸಂದೇಶ ನೀಡಿದ್ದಾರೆ. ಆದ್ದರಿಂದ ಅವರು ನಮ್ಮ ಮೇಲೆ ತೋರಿದ ಅಪಾರ ಕರುಣೆ ಮತ್ತು ದಯೆಗಳಿಗಾಗಿ ನಾವು ಅವರ ಪಾದಾರವಿಂದಗಳಿಗೆ ನಮಸ್ಕರಿಸೋಣ.

ಸಭಿಕರೆ, ನನ್ನ ಗುರುದೇವರು ಆಧುನಿಕ ನಾಗರಿಕತೆಗೆ ಸಂಪೂರ್ಣ ತಡೆಯೊಡ್ಡಬೇಕೆಂದು ಬಯಸುತ್ತಾರೆಂದೂ ಸರ್ವಥಾ ತಿಳಿಯಬೇಡಿ—ಅದು ಅಸಾಧ್ಯವಾದ ಮಾತು. ಆದರೆ ಇರುವ

ಸ್ಥಿತಿಯಲ್ಲಿಯೇ ಅತ್ಯುತ್ತಮ ಲಾಭ ಪಡೆಯಲು ನಾವು ಅವರಿಂದ ಕಲಿತುಕೊಳ್ಳಬೇಕು ಮತ್ತು ಅತ್ಯುನ್ನತ ನಿಜ ಪ್ರಜ್ಞೆಯ ಬೆಳವಣಿಗೆಗೆ ಅರ್ಹವಾದ ಈ ಮಾನವ ಜನ್ಮದ ಮಹತ್ವವನ್ನು ಅರಿತುಕೊಳ್ಳೋಣ. ಅಮೂಲ್ಯವಾದ ಮತ್ತು ದುರ್ಲಭವಾದ ಈ ಮಾನವ ಜನ್ಮವನ್ನು ನಾವು ನಿರ್ಲಕ್ಷಿಸಕೂಡದು. ಶ್ರೀ ಮದ್ಭಾಗವತದಲ್ಲಿ ಹೀಗೆ ಹೇಳಿದೆ (11-9-29) :

ಲಬ್ಧ್ವಾ ಸುದುರ್ಲಭಂ ಇದಂ ಬಹುಸಂಭವಾಂತೇ
ಮನುಷ್ಯಂ ಅರ್ಥದಂ ಅನಿತ್ಯಂ ಅಪೀಹ ಧೀರಃ ।
ತೂರ್ಣಂ ಯತೇತ ನಪತೇದ್ ಅನು ಮೃತ್ಯು ಯಾವನ್
ನಿಃ ಶ್ರೇಯಸಾಯ ವಿಷಯಃ ಖಲು ಸರ್ವತಃ ಸ್ಯಾತ್ ॥

"ಈ ಮಾನವ ಜನ್ಮವು, ಅದು ಶಾಶ್ವತವಲ್ಲದಾದರೂ ಅನೇಕಾನೇಕ ಜನ್ಮಗಳ ತರುವಾಯ ಲಭ್ಯವಾಗುತ್ತದೆ. ಈ ಜನ್ಮವು ಅತ್ಯುತ್ತಮ ಶ್ರೇಯಸ್ಸನ್ನು ನೀಡಬಲ್ಲುದು. ಆದುದರಿಂದ, ಸಾತ್ವಿಕನೂ ಬುದ್ಧಿವಂತನೂ ಆಗಿರುವ ಮನುಷ್ಯನು ಮತ್ತೊಂದು ಸಲ ಮರಣ ಒದಗುವ ಮುಂಚೆ, ಈ ಜೀವನದಲ್ಲಿಯೇ ಈ ಘನೋದ್ದೇಶವನ್ನು ಪೂರೈಸಿಕೊಳ್ಳಲು ಕೂಡಲೇ ಪ್ರಯತ್ನಿಸಬೇಕು. ಅವನು ಯಾವ ಯೋನಿಯಲ್ಲಾದರೂ ದೊರೆಯಬಹುದಾದ ಇಂದ್ರಿಯ ತೃಪ್ತಿಯನ್ನು ಪರಿತ್ಯಜಿಸಬೇಕು."

ನಿರರ್ಥಕವಾದ ಭೌತಿಕ ಸುಖವನ್ನುಹುಡುಕುತ್ತ ಎಂದರೆ ಕೇವಲ ಆಹಾರ, ನಿದ್ರಾ, ಭಯ ಮತ್ತು ಮೈಥುನಾದಿ ವಿಷಯಾಸಕ್ತನಾಗಿ ಈ ಮಾನವ ಜನ್ಮವನ್ನು ಹಾಳುಮಾಡಿಕೊಳ್ಳ ಬಾರದು. ಆಚಾರ್ಯ ದೇವರ ಸಂದೇಶವನ್ನು ಈ ಕೆಳಕಂಡ ಶಬ್ದಗಳಲ್ಲಿ ರೂಪಗೋಸ್ವಾಮಿ ಅವರು ನಮಗೆ ನೀಡಿದ್ದಾರೆ (ಭಕ್ತಿರಸಾಮೃತ ಸಿಂಧು 1-2-255-256).

14987

ಅನಾಸಕ್ತಸ್ಯ ವಿಷಯಾನ್ ಯಥಾರ್ಹಂ ಉಪಯುಂಜತಃ
ನಿರ್ಬಂಧಃ ಕೃಷ್ಣ ಸಂಬಂಧೇ ಯುಕ್ತಂ ವೈರಾಗ್ಯಂ ಉಚ್ಯತೇ ।
ಪ್ರಾಪಂಚಿಕತಯಾ ಬುದ್ಧ್ಯಾ ಹರಿ ಸಂಬಂಧಿ ವಸ್ತುನಃ
ಮುಮುಕ್ಷುಭಿ ಪರಿತ್ಯಾಗೋ ವೈರಾಗ್ಯಂ ಫಲ್ಗು ಕಥ್ಯತೇ ॥

"ಮನುಷ್ಯನು ಕೃಷ್ಣ ಪ್ರಜ್ಞೆಯಲ್ಲಿ ಜೀವಿಸುತ್ತಿದ್ದರೆ, ಅವನು ಪೂರ್ಣ ವೈರಾಗಿಯೆಂದು ಹೇಳಬಹುದು. ಅವನು ಇಂದ್ರಿಯ ತೋಷಣದ ವ್ಯಾಮೋಹ ರಹಿತನಾಗಿರಬೇಕು ಮತ್ತು ಕೇವಲ ದೇಹ ಪೋಷಣೆಗೆ ಅಗತ್ಯವಾದಷ್ಟನ್ನು ಮಾತ್ರ ಸ್ವೀಕರಿಸಬೇಕು. ಇದಕ್ಕೆ ಬದಲಾಗಿ, ಭೌತಿಕವೆಂದು ನೆಪ ಹೇಳುತ್ತ ಕೃಷ್ಣನ ಸೇವೆಗೆ ಉಪಯೋಗವಾಗುವ ವಸ್ತುಗಳನ್ನು ಅವನು ಪರಿತ್ಯಜಿಸಿದರೆ, ಅವನು ಪೂರ್ಣ ವೈರಾಗ್ಯವನ್ನು ಸಾಧಿಸುವುದಿಲ್ಲ."

ಈ ಶ್ಲೋಕಗಳ ಅರ್ಥವನ್ನು ನಮ್ಮ ಜೀವನದ ಪೂರ್ಣ ವೈಚಾರಿಕ ಬೆಳವಣಿಗೆಯಿಂದ ಅರಿತುಕೊಳ್ಳಬಹುದಾಗಿದೆಯೇ ಹೊರತು ಪಶು ಸಹಜ ಸ್ವಭಾವದಿಂದಲ್ಲ. ನಾವು ಆಚಾರ್ಯ ದೇವರ ಪದತಲದಲ್ಲಿ ಕುಳಿತು ಈ ದಿವ್ಯ ಜ್ಞಾನದ ಮೂಲದಿಂದ, ನಾವು ಏನು, ಈ ವಿಶ್ವ ವೆಂಬುದೇನು- ದೇವರೆಂದರೇನು ಮತ್ತು ನಮಗೂ ದೇವರಿಗೂ ಇರುವ ಸಂಬಂಧವೇನು ಎಂಬುದನ್ನು ಅರಿತುಕೊಳ್ಳಲು ಪ್ರಯತ್ನಿಸೋಣ. ಭಗವಾನ್ ಚೈತನ್ಯರ ಸಂದೇಶವು ಜೀವಾತ್ಮರಿಗಾಗಿ, ಜೀವಕೋಟಿಗಾಗಿ ನೀಡಿದ ಸಂದೇಶವಾಗಿದೆ. ಭಗವಾನ್ ಚೈತನ್ಯರು ಮತ್ತು

ಲೋಕವೆಂದು ಕರೆಸುವ—ಇಲ್ಲಿ ಎಲ್ಲ ವಸ್ತುಗಳೂ ಮೃತಿ ಹೊಂದುವ—ಈ ಲೋಕದ ಉದ್ಧಾರಕ್ಕಾಗಿ ಎಂದೂ ಪ್ರಯತ್ನಿಸಲಿಲ್ಲ. ಅವರು, 450 ವರ್ಷಗಳ ಹಿಂದೆ, ಶಾಶ್ವತವೂ ಮತ್ತು ಪರಮಾತ್ಮನ ಸೇವೆಗಾಗಿಯೂ ಇರುವ ದಿವ್ಯಲೋಕವನ್ನು ಕುರಿತು ನಮಗೆ ಕಿಂಚಿತ್ ಉಪದೇಶ ನೀಡಲು ನಮ್ಮ ಮುಂದೆ ಬಂದರು. ಆದರೆ ಇತ್ತೀಚೆಗೆ ಕೆಲವು ಜನ ಕುಹಕ ವ್ಯಕ್ತಿಗಳು ಭಗವಾನ್ ಚೈತನ್ಯರ ಬಗ್ಗೆ ತಪ್ಪು ಕಲ್ಪನೆಗಳನ್ನು ಉಂಟು ಮಾಡುತ್ತಿದ್ದಾರೆ. ಮತ್ತು ಅವರ ಅತ್ಯಂತ ಉತ್ಕೃಷ್ಟವಾದ ತತ್ವಜ್ಞಾನವನ್ನು ಕೂಡಾ ಕೀಳು ಮಟ್ಟದ ಸಮಾಜದ ಒಂದು ಧರ್ಮವೆಂದು ಕೂಡಾ ಅಪಪ್ರಚಾರ ಮಾಡುತ್ತಿದ್ದಾರೆ. ನಮ್ಮ ಆಚಾರ್ಯ ದೇವರು ತಮ್ಮ ಸ್ವಾಭಾವಿಕ ಕರುಣೆಯಿಂದ ನಮ್ಮನ್ನೆಲ್ಲ ಈ ಭಯಾನಕ ದೌರ್ಜನ್ಯದಿಂದ ರಕ್ಷಿಸಿದ್ದಾರೆಂದು ಇಲ್ಲಿ ಘೋಷಿಸಲು ನಮಗೆ ಸಂತೋಷವೆನಿಸುತ್ತಿದೆ. ಆದ್ದರಿಂದ ನಾವೆಲ್ಲರೂ ವಿನೀತ ಭಾವದಿಂದ ಅವರ ಪಾದ ಪದ್ಮಗಳಿಗೆ ನಮಸ್ಕರಿಸೋಣ.

ಮಹಾಶಯರೇ, ಸುಸಂಸ್ಕೃತ (ಅಥವಾ ಅಸಂಸ್ಕೃತ) ಇಂದಿನ ಸಮಾಜದ ಜನಗಳು ಪರಮ ದೇವೋತ್ತಮ ಪುರುಷನನ್ನು ಕೇವಲ ವ್ಯಕ್ತಿ ಶೂನ್ಯವಸ್ತುವೆಂದು ಹೇಳುವುದು ಮತ್ತು ಅವನಿಗೆ ಇಂದ್ರಿಯಗಳಿಲ್ಲ, ರೂಪವಿಲ್ಲ, ಕ್ರಿಯೆಯಿಲ್ಲ, ತಲೆಕಾಲುಗಳಿಲ್ಲ ಮತ್ತು ಭೋಗಾದಿ ಅನುಭವಗಳಿಲ್ಲ ಎಂದು ನಿರಾಕಾರ ವಾದ ಮಾಡುವುದು ಒಂದು ಬಗೆಯ ಜಾಡ್ಯವಾಗಿದೆ. ಹೀಗೆಯೆ ಆಧುನಿಕ ವಿದ್ವಾಂಸರೂ ಕೂಡ ಸರಿಯಾದ ಮಾರ್ಗದರ್ಶನವಿಲ್ಲದೆ ಮತ್ತು ಆಧ್ಯಾತ್ಮ ಪ್ರಪಂಚದ ಅಂತರ್ ದೃಷ್ಟಿಯಿಲ್ಲದೆ ಹೀಗೆ ವಾದಿಸಲು ಸಂತೋಷಪಡುತ್ತಾರೆ. ಐಹಿಕ ವಾದಿಗಳ ಎಲ್ಲರ ಚಿಂತನೆಯೂ ಹೀಗೆಯೇ. ಭೋಗ ವಸ್ತುಗಳೆಲ್ಲವೂ ಮಾನವ ಸಮಾಜದ ಸ್ವತ್ತು ಅಥವಾ ಅವು ಕೇವಲ ವಿಶಿಷ್ಟ ಜನರಿಗಾಗಿ ಮಾತ್ರ ಇವೆ. ಹೀಗೆ ವ್ಯಕ್ತಿಶೂನ್ಯವಾದ ದೇವರು ಇವರ ಇಷ್ಟ ಬಂದ ಹಾಗೆ ವಸ್ತುಗಳನ್ನು ಪೂರೈಸಲು ಮಾತ್ರ ಇದ್ದಾನೆ ಎಂಬುದು ಅವರ ಮನೋಭಾವವಾಗಿದೆ. ಆದರೆ ಶ್ರೀ ಶ್ರೀಮನ್ ಪರಮಹಂಸ ಪರಿವ್ರಾಜಕಾಚಾರ್ಯ ಭಕ್ತಿ ಸಿದ್ಧಾಂತ ಸರಸ್ವತೀಗೋಸ್ವಾಮಿ ಮಹಾರಾಜರು ಕೃಪೆದೋರಿ, ಈ ದೌರ್ಜನ್ಯದಿಂದ ನಮ್ಮನ್ನು ಪಾರು ಮಾಡಿರುವುದು ನಮಗೆಲ್ಲ ಸಂತೋಷದ ಸಂಗತಿಯಾಗಿದೆ. ಅವರು ನಮಗೆ ಜ್ಞಾನೋದಯ ನೀಡಿದವರು ಅವರು ನಮ್ಮ ಶಾಶ್ವತ ಪಿತೃಗಳು, ನಿತ್ಯಗುರು ಮತ್ತು ನಮ್ಮ ನಿತ್ಯಮಾರ್ಗದರ್ಶಕರು. ಆದುದರಿಂದ ಈ ಮಂಗಲಮಯ ದಿನದಂದು ಅವರ ಪಾದಾಬ್ಜಗಳಿಗೆ ನಮಸ್ಕರಿಸೋಣ.

ಮಹನೀಯರೇ, ದಿವ್ಯ ಜ್ಞಾನದ ವಿಷಯದಲ್ಲಿ ನಾವೆಲ್ಲರೂ ಮುಗ್ಧ ಮಕ್ಕಳಂತೆ ಇರುವೆವಾದರೂ, ನಮ್ಮ ಗುರುದೇವರು, ನಮ್ಮ ಭೌತಿಕ ಜ್ಞಾನದ ಅದಮ್ಯವಾದ ಅಂಧಕಾರವನ್ನು ಹೊಡೆದೋಡಿಸಲು ನಮ್ಮಲ್ಲಿ ಜ್ಞಾನಾಗ್ನಿಯನ್ನು ಪ್ರಜ್ವಲಿಸಿದ್ದಾರೆ. ಇನ್ನು ನಮ್ಮನ್ನು ಯಾವ ಭೌತವಾದೀ ತತ್ವ ಪ್ರತಿಪಾದನೆಗಳೂ ಕೂಡ ಗುರುದೇವರ ಚರಣಗಳಲ್ಲಿ ನಿತ್ಯರತರಾಗಿರುವ ಸ್ಥಿತಿಯಿಂದ ಒಂದು ಅಂಗುಲದಷ್ಟೂ ಕದಲಿಸದ ಮಟ್ಟಿಗೆ ನಾವು ಸುರಕ್ಷಿತರಾಗಿದ್ದೇವೆ. ಅಷ್ಟೆ ಅಲ್ಲ. ನಾವೀಗ ಅತ್ಯಂತ ಪಂಡಿತರಾದ ಮಾಯಾವಾದಿಗಳಿಗೆ ಪಂಥಾಹ್ವಾನ ನೀಡಿ, ಪರಮ ದೇವೋತ್ತಮ ಪುರುಷನು ಮತ್ತು ಗೋಲೋಕ ವೃಂದಾವನದಲ್ಲಿಯ ಅವನ ದಿವ್ಯ ಲೀಲೆಗಳು ಮಾತ್ರ ವೇದಗಳ ಪವಿತ್ರ ಸಾರಸರ್ವಸ್ವವಾಗಿವೆ ಎಂಬುದನ್ನು ಪ್ರಸ್ತಾವಿಸಲು ಕೂಡ

ಶಕ್ತರಾಗಿದ್ದೇವೆ. ಈ ಬಗ್ಗೆ ಛಾಂದೋಗ್ಯ ಉಪನಿಷತ್ತಿನಲ್ಲಿ ಕೂಡ ಸುಸ್ಪಷ್ಟ ಆಧಾರಗಳಿವೆ (8-13-1):

ಶಾಮುಚ್ಛವಲಂ ಪ್ರಪದ್ಯೇ ಶವಲಾಕ್ ಚ್ಛಾಮಂ ಪ್ರಪದ್ಯೇ

"ಕೃಷ್ಣನ ಕೃಪಾ ಪ್ರಾಪ್ತಿಗಾಗಿ ನಾನು ಅವನ ಶಕ್ತಿಗೆ (ರಾಧೆಗೆ) ಶರಣು ಹೋಗುತ್ತಿದ್ದೇನೆ ಮತ್ತು ಅವನ ಶಕ್ತಿಯು ಕೃಪಾ ಪ್ರಾಪ್ತಿಗಾಗಿ ಕೃಷ್ಣನಿಗೆ ಶರಣು ಹೋಗುತ್ತಿದ್ದೇನೆ." ಋಗ್ವೇದದಲ್ಲಿಯೂ ಕೂಡ (1-22-20):

ತದ್ ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ।
ದಿವೀವ ಚಕ್ಷುರ್ ಆತತಮ್ ವಿಷ್ಣೋರ್ ಯತ್ ಪರಮಂ ಪದಮ್ ॥

"ಸಕಲ ದೇವತೆಗಳಿಗೂ ಭಗವಾನ್ ವಿಷ್ಣುವಿನ ಪಾದ ಪದ್ಮಗಳನ್ನು ಸೇರುವುದೇ ಪರಮ ಗುರಿಯಾಗಿದೆ. ಭಗವಂತನ ಈ ಪಾದ ಪದ್ಮಗಳು ಆಕಾಶಗತ ಸೂರ್ಯನಂತೆ ಪ್ರಕಾಶಮಾನ ವಾಗಿವೆ."

ಗೀತೆಯಲ್ಲಿ ಸುಸ್ಪಷ್ಟವಾಗಿ ವಿವರಿಸಿರುವ ಸರಳ ಸತ್ಯವನ್ನು ಲೌಕಿಕ ಘನವಿದ್ವಾಂಸರೆನಿಸಿ ಕೊಂಡವರು ಕೂಡ ಅರಿತುಕೊಂಡಿಲ್ಲ ಅಥವಾ ಅದರ ಸುಳಿವೂ ಅವರಿಗೆ ದೊರೆತಿಲ್ಲವೆಂದು ಹೇಳಬಹುದು. ವ್ಯಾಸಪೂಜೆಯ ರಹಸ್ಯ ಅಡಗಿರುವುದೇ ಇಲ್ಲಿ. ನಾವು ಪರಮ ದೇವೋತ್ತಮನ ದಿವ್ಯ ಲೀಲಾ ವಿನೋದಗಳನ್ನು ಕುರಿತು ಧ್ಯಾನಮಾಡುವಾಗ, ಆತನ ನಿತ್ಯ ದಾಸರಾಗಿದ್ದೇವೆಂದು ಅರಿತು ಹೆಮ್ಮೆ ಪಡುತ್ತೇವೆ ಮತ್ತು ನಾವು ಹರ್ಷಭರಿತರಾಗಿ ಉತ್ಸಾಹದಿಂದ ನರ್ತನ ಮಾಡುತ್ತೇವೆ. ನಮ್ಮ ಗುರುದೇವರು ತಮ್ಮ ನಿರಂತರ ಕರುಣಾ ಪ್ರವಾಹವನ್ನು ನಮ್ಮ ಮೇಲೆ ಹಾಯಿಸಿ ನಮ್ಮ ನಿತ್ಯ ಸ್ವರೂಪದ ಅಸ್ತಿತ್ವವನ್ನು ಜಾಗೃತಗೊಳಿಸಿದ್ದಾರೆ, ಅವರಿಗೆ ಜಯವಾಗಲಿ ಅವರ ಚರಣಕಮಲಗಳಿಗೆ ನಮಸ್ಕರಿಸೋಣ.

ಮಹನೀಯರೇ, ಗುರುವರ್ಯರು, ಪ್ರತ್ಯಕ್ಷವಾಗಿ ನಮ್ಮನ್ನು ಈ ಭವಾಂಬುಧಿಯ ಮಾಯೆಯಿಂದ ರಕ್ಷಿಸಿರದಿದ್ದರೆ, ನಾವು ಖಂಡಿತ ಯುಗಯುಗಾಂತರಗಳ ತನಕ ಗಾಢಾಂಧ ಕಾರದಲ್ಲಿ ಅಸಹಾಯಕ–ಬಂದಿಗಳಾಗಿ ಉಳಿಯಬೇಕಾಗುತ್ತಿತ್ತು. ಅವರು ಬಾರದೆ ಇದ್ದಿದ್ದರೆ, ನಾವು ಭಗವಾನ್ ಚೈತನ್ಯರ ಪವಿತ್ರೋಪದೇಶದ ನಿತ್ಯ ಸತ್ಯವನ್ನು ಅರಿತುಕೊಳ್ಳುತ್ತಿರಲಿಲ್ಲ. ಅವರು ದರ್ಶನ ನೀಡಿರದಿದ್ದರೆ, ನಮಗೆ ಬ್ರಹ್ಮ ಸಂಹಿತೆಯ ಮೊದಲನೆಯ ಶ್ಲೋಕದ ಮಹತ್ವವೂ ಕೂಡ ತಿಳಿಯುತ್ತಿರಲಿಲ್ಲ.

ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನಂದ ವಿಗ್ರಹಃ।
ಅನಾದಿರ್ ಆದಿರ್ ಗೋವಿಂದಃ ಸರ್ವಕಾರಣ ಕಾರಣಮ್ ॥

"ಗೋವಿಂದನೆಂದು ಕರೆಸಿಕೊಳ್ಳುವ ಕೃಷ್ಣನೇ ಪರಮ ದೇವೋತ್ತಮ ಪುರುಷನು. ಅವನು ಚಿದಾನಂದ ದಿವ್ಯ ದೇಹವುಳ್ಳವನು. ಅವನೇ ಸರ್ವಮೂಲನು. ಅವನಿಗೆ ಕಾರಣವಾದುದು ಬೇರೊಂದಿಲ್ಲ, ಅವನೇ ಎಲ್ಲ ಕಾರಣಗಳ ಪ್ರಧಾನ ಕಾರಣನು."

ನನ್ನ ಜೀವನ ಯಾತ್ರೆಯಲ್ಲಿ ಇನ್ನೂ ಕೋಟ್ಯಂತರ ಜನ್ಮಗಳ ಬಳಿಕವೂ ನನಗೆ ದೇವರ ನೇರ ಸೇವೆ ಲಭಿಸೀತೆಂದು ನನಗನಿಸುವುದಿಲ್ಲ. ಇದು ನನ್ನ ವ್ಯಕ್ತಿಗತ ಭಾವನೆ. ಆದರೆ ಒಂದಿಲ್ಲೊಂದು ದಿನ ನಾನು ಈಗ ಆಳವಾಗಿ ಮುಳುಗಿರುವ ಮಾಯಾ ಪಂಕದಿಂದ ವಿಮುಕ್ತಗೊಳಿಸಲ್ಪಡುತ್ತೇನೆಂಬ ನಂಬಿಕೆ ನನಗಿದೆ. ಆದುದರಿಂದ ನನ್ನ ಪ್ರಾರಬ್ಧ ಕರ್ಮಫಲವನ್ನೆಲ್ಲ ಅನುಭವಿಸಿ ಮುಗಿಸಲು ನನಗೆ ಅವಕಾಶ ನೀಡಿರೆಂದು ನನ್ನ ಗುರು ದೇವರ ಪಾದಗಳಿಗೆರಗಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ. ಜೊತೆಗೆ, ನನ್ನ ಪರಮ ಗುರುಗಳ ನಿರಂತರ ಕೃಪೆಯಿಂದ ನಾನು ಪರಮ ದೇವೋತ್ತಮನಾದ, ಸರ್ವ ಶಕ್ತನಾದ ಭಗವಂತನ ಅಲ್ಪ ಭಕ್ತನೆಂಬುದನ್ನು ಅರಿತುಕೊಳ್ಳಲು ಸಾಧ್ಯವಾಗಿರುವ ಈ ಸ್ಮರಣೆಯೂ ನನಗೆ ಸದಾ ಉಳಿಯುವಂತೆ ಅವರು ಕರುಣಿಸಬೇಕೆಂದೂ ಪ್ರಾರ್ಥಿಸುತ್ತೇನೆ. ಆದುದರಿಂದ ನಾನು ಅತ್ಯಂತ ವಿನೀತಭಾವದಿಂದ ಅವರ ಪಾದಪದ್ಮಗಳಿಗೆ ಎರಗುತ್ತೇನೆ.





# ಭಗವದ್ಗೀತಾಮೃತ

**ಶತಮಾನಗಳಿಂದ ಭಾರತದ ಮಹಾ ದಾರ್ಶನಿಕರು ಮತ್ತು ದಿವ್ಯಜ್ಞಾನಿಗಳು ಭಗವದ್ಗೀತೆಯು ಸನಾತನವಾದ ವೇದಜ್ಞಾನದ ಸಾರ ಸರ್ವಸ್ವವಾಗಿದೆಯೆಂದು ಸಾರಿದ್ದಾರೆ. ತಮ್ಮ ಭಗವದ್ಗೀತಾ ಧ್ಯಾನ ಶ್ಲೋಕದಲ್ಲಿ ಆರನೆಯ ಶತಮಾನದ ಮಹಾದಾರ್ಶನಿಕರೆನಿಸಿದ ಶಂಕರಾಚಾರ್ಯರು ಗೀತೆಯನ್ನೂ ಮತ್ತು ದಿವ್ಯ ಗೀತಾಚಾರ್ಯನಾದ ಶ್ರೀ ಕೃಷ್ಣನನ್ನೂ ಕೊಂಡಾಡಿದ್ದಾರೆ. ಶಂಕರಚಾರ್ಯರೂ ನಿರಾಕಾರವಾದಿಗಳೆಂದು ವಿಶ್ವಾದ್ಯಂತ ಖ್ಯಾತರಾಗಿದ್ದರೂ ಇಲ್ಲಿ ಭಗವಾನ್ ಶ್ರೀ ಕೃಷ್ಣನನ್ನು ಸಾಕಾರನೆಂದು ಭಕ್ತಿಪೂರ್ವಕವಾಗಿ ಕಂಡಿರುವುದು ತಿಳಿದು ಬರುತ್ತದೆ. ಶ್ರೀಲ ಪ್ರಭುಪಾದರು ಹೀಗೆ ವಿಶದೀಕರಿಸುತ್ತಾರೆ:**

1

ಓ ಭಗವದ್ಗೀತೆಯೇ ನಿನ್ನ ಹದಿನೆಂಟು ಅಧ್ಯಾಯಗಳ ಮೂಲಕ
ನೀನು ಪರತತ್ತ್ವಜ್ಞಾನದ ಅಮೃತವನ್ನು ಭಕ್ತರ ಮೇಲೆ ಸುರಿಸುವೆ.
ಓ ಮಹಾಗೀತೆಯೇ, ನಿನ್ನ ಮೂಲಕವೇ ಭಗವಾನ್ ಶ್ರೀಕೃಷ್ಣನು ಸ್ವಯಂ
ಅರ್ಜುನನಿಗೆ ದಿವ್ಯ ಜ್ಞಾನೋಪದೇಶ ನೀಡಿದನು. ಆಮೇಲೆ ಪ್ರಾಚೀನ ಋಷಿ ವ್ಯಾಸರು
ನಿನ್ನನ್ನು ಮಹಾ ಭಾರತದಲ್ಲಿ ಸೇರಿಸಿದರು.
ಈ ಮೃತ್ಯುಲೋಕದ ಗಾಢಾಂಧಕಾರದಲ್ಲಿ ಮನುಷ್ಯನ ಪುನರ್ಜನ್ಮ ನಾಶಕಳೇ
ಓಪ್ರೇಮಮಯೀ ಮಾತೆಯೇ, ನಾನು ನಿನ್ನನ್ನು ಕುರಿತು ಧ್ಯಾನಿಸುತ್ತೇನೆ.

2

ಓ ವ್ಯಾಸರೇ ನಿಮಗೆ ನಮಸ್ಕಾರ ನೀವುಮಹಾ ಬುದ್ಧಿಶಾಲಿಗಳು
ನಿಮ್ಮ ವಿಶಾಲ ನಯನಗಳು ಉದ್ಭಿನ್ನವಾದ ಕಮಲದಂತಿವೆ.
ನೀವೇ ಮಹಾಭಾರತದ ತೈಲವನ್ನೆರೆದು ಈ ಜ್ಞಾನ ಜ್ಯೋತಿಯನ್ನು ಬೆಳಗಿಸಿರುವಿರಿ.

### ಭಾ ವಾ ರ್ಥ

ಶ್ರೀಪಾದ ಶಂಕರಾಚಾರ್ಯರು ಭೌತಿಕ ದೃಷ್ಟಿಯಿಂದ ನಿರಾಕಾರ ವಾದಿಗಳಾಗಿದ್ದರು. ಆದರೆ ಅವರು ಭೌತಿಕ ಪ್ರಪಂಚದ ದೃಷ್ಟಿಗಿಂತ ಮುಂಚೆ ಅಸ್ತಿತ್ವದಲ್ಲಿದ್ದ ಸಚ್ಚಿದಾನಂದ ವಿಗ್ರಹ, ಎಂದರೆ ಅನಾದಿ ನಿತ್ಯನಾದ, ಸಕಲ ಜ್ಞಾನಾನಂದರೂಪನಾದ, ಭಗವಂತನನ್ನು ನಿರಾಕರಿಸಿಲ್ಲ. ಅವರು ಪರಬ್ರಹ್ಮನು ನಿರಾಕಾರವೆಂದು ಹೇಳಿದಾಗ, ಭಗವಂತನ ಸಚ್ಚಿದಾನಂದ ರೂಪವನ್ನು

ಭೌತಿಕ ವ್ಯಕ್ತಿತ್ವದ ಕಲ್ಪನೆ ಎಂದು ತಪ್ಪು ಅರ್ಥ ಮಾಡಿಕೊಳ್ಳಬಾರದು ಎಂಬುದೇ ಅವರ ಉದ್ದೇಶವಾಗಿತ್ತು. ಅವರು ತಮ್ಮ ಗೀತಾಭಾಷ್ಯದ ಪ್ರಾರಂಭದಲ್ಲಿಯೇ, ಸರ್ವೇಶ್ವರನಾದ ನಾರಾಯಣನು ಭೌತಿಕ ಸೃಷ್ಟಿಗೆ ಅತೀತನಾದವನು ಎಂದು ಹೇಳಿದ್ದಾರೆ. ಭಗವಂತನು ಸೃಷ್ಟಿಗಿಂತ ಮುಂಚೆಯೇ ಪರಮ ಪುರುಷನಾಗಿ ವಿರಾಜಮಾನನಾಗಿದ್ದನು ಮತ್ತು ಭೌತಿಕ ವ್ಯಕ್ತಿತ್ವಕ್ಕೂ ಅವನಿಗೂ ಯಾವ ಸಂಬಂಧವೂ ಇಲ್ಲ. ಭಗವಾನ್ ಕೃಷ್ಣನು ಯಥಾರೂಪನಾದ ಪರಮ ಪುರುಷನಾಗಿದ್ದಾನೆ, ಮತ್ತು ಅವನಿಗೂ ಭೌತಿಕ ದೇಹಕ್ಕೂ ಯಾವ ಸಂಬಂಧವಿಲ್ಲ. ಅವನು ತನ್ನ ಶಾಶ್ವತ ದೇವೀ ರೂಪದಲ್ಲಿ ಅವತರಿಸುತ್ತಾನೆ. ಆದರೆ ಮೂರ್ಖ ಜನರು ಅವನು ನಮ್ಮಂತೆ ದೇಹವುಳ್ಳವನು ಎಂದು ತಪ್ಪಾಗಿ ಭಾವಿಸುತ್ತಾರೆ. ಕೃಷ್ಣನು ಪ್ರಾಕೃತಿಕ ದೇಹವುಳ್ಳ ಸಾಮಾನ್ಯ ಮನುಷ್ಯನೆಂದು ತಿಳಿಯುವ ಮೂರ್ಖ ಜನರಿಗೆ ವಿಶೇಷವಾಗಿ ಉಪದೇಶಿಸಲೋಸುಗವೇ ಶಂಕರಾಚಾರ್ಯರು ನಿರಾಕಾರವಾದವನ್ನು ಪ್ರತಿಪಾದಿಸಿದ್ದಾರೆ.

ಭಗವದ್ಗೀತೆಯನ್ನು ಸಾಮಾನ್ಯ ಮನುಷ್ಯನು ಉಪದೇಶಿಸಿದ್ದರೆ, ಅದನ್ನು ಯಾರೂ ಗಮನಿಸುತ್ತಿರಲಿಲ್ಲ ಮತ್ತು ಖಂಡಿತ ವೇದವ್ಯಾಸರಂತೂ ಮಹಾಭಾರತದ ಇತಿಹಾಸದಲ್ಲಿ ಅದನ್ನು ಸೇರಿಸುವ ಗೊಡವೆಗೆಯೇ ಹೋಗುತ್ತಿರಲಿಲ್ಲ. ಮೇಲೆ ಹೇಳಿದ ಶ್ಲೋಕಗಳ ಪ್ರಕಾರ ಮಹಾಭಾರತವು ಪ್ರಾಚೀನ ವಿಶ್ವದ ಇತಿಹಾಸವಾಗಿದೆ ಮತ್ತು ವೇದವ್ಯಾಸರು ಈ ಮಹಾಕಾವ್ಯದ ಕರ್ತೃಗಳಾಗಿದ್ದಾರೆ. ಭಗವದ್ಗೀತೆಯು ಕಷ್ಣನೇ ಆಗಿದೆ ಮತ್ತು ಕೃಷ್ಣನು ಪರಮ ದೇವೋತ್ತಮ ಪುರುಷನೇ ಆಗಿರುವುದರಿಂದ ಅವನಿಗೂ ಅವನ ವಚನಗಳಿಗೂ ಯಾವ ವ್ಯತ್ಯಾಸವೂ ಇಲ್ಲ. ಆದುದರಿಂದ ಕೃಷ್ಣನೂ ಭಗವದ್ಗೀತೆಯೂ ಪರತರ ವಸ್ತುಗಳಾಗಿರುವುದರಿಂದ ಭಗವದ್ಗೀತೆಯು ಕೂಡಾ ಕೃಷ್ಣನಂತೆಯೇ ಪೂಜಾರ್ಹವಾಗಿದೆ. ಭಗವದ್ಗೀತೆಯನ್ನು "ಯಥಾರೂಪ" ಶ್ರವಣ ಮಾಡುವವನು ವಾಸ್ತವಿಕವಾಗಿ ಭಗವಂತನ ಮುಖ ಕಮಲದಿಂದಲೇ ನೇರವಾಗಿ ಶ್ರವಣ ಮಾಡುತ್ತಾನೆ. ಆದರೆ ದೇವರ ಬಗ್ಗೆ ಊಹಾಪೋಹ ಮಾಡಿ ಅಥವಾ ಧ್ಯಾನ ಮಗ್ನರಾಗಿ ತಿಳಿಯ ಬಯಸುವ ಇಂದಿನ ಮಾನವರಿಗೆ ಭಗವದ್ಗೀತೆಯು ಅಷ್ಟೊಂದು ಉಪಯುಕ್ತವಲ್ಲದ ಹಳೆಯ ಗ್ರಂಥ ಎಂದು ದುರ್ದೇವೀ ಜನರು ಹೇಳುತ್ತಾರೆ.

3

ಓ ಕೃಷ್ಣ ನಿನಗೆ ನಮಸ್ಕಾರ, ಕ್ಷೀರ ವಾರಿಧಿ ಕನ್ನಿಕೆಯಾದ ಲಕ್ಷ್ಮಿಗೆ
ಮತ್ತು ನಿನ್ನ ಪಾದಾರವಿಂದವನ್ನು ಸೇರ ಬಯಸುವ ಎಲ್ಲರಿಗೂ ನೀನು
ಪರಮಾಶ್ರಯನಾಗಿರುವೆ ನೀನು ನಿಜವಾಗಿ
ನಿನ್ನ ಭಕ್ತರಿಗೆ ಕಲ್ಪವೃಕ್ಷವಾಗಿರುವಿ

ನಿನ್ನ ಒಂದು ಕೈ ಗೋವುಗಳನ್ನು ಕಾಯಲು ಕೋಲು ಹಿಡಿದಿದೆ,
ಮತ್ತೊಂದು ಕೈ ಮೇಲೆತ್ತಿರುವೆ ನಿನ್ನ ಕೈಯ ಹೆಬ್ಬೆರಳು
ಕಿರು ಬೆರಳಿನ ತುದಿಯನ್ನು ಸ್ಪರ್ಶಿಸುತ್ತಿರುವುದು, ದಿವ್ಯ ಜ್ಞಾನ ಸೂಚಕವಾಗಿದೆ,
ಓ ಪರಮಾತ್ಮನೇ, ನಿನಗೆ ನಮಸ್ಕಾರಗಳು, ನೀನು ಗೀತಾಮೃತ ಸುಧೆ ಕರೆಯುವ
ಗೋಪಾಲಕನು,

## ಭಾವಾರ್ಥ

"ಹೇ ಮೂರ್ಖ ಮಾನವರೇ, ನೀವು ಗೋವಿಂದನನ್ನು ಮತ್ತು ನಾರಾಯಣನ ಸ್ವಯಂ ವಚನವಾದ ಭಗವದ್ಗೀತೆಯನ್ನು ಪೂಜಿಸಿರಿ" ಎಂದು ಶ್ರೀಪಾದ ಶಂಕರಾಚಾರ್ಯರು ಸ್ಪಷ್ಟವಾಗಿ ಘೋಷಿಸಿದ್ದಾರೆ. ಆದರೂ ಮೂರ್ಖ ಜನರು ನಾರಾಯಣನನ್ನು ಕುರಿತು ಇನ್ನೂ ಸಂಶೋಧನ ನಡೆಸುತ್ತಲೇ ಇದ್ದಾರೆ, ಅಂತೆಯೇ ಅವರು ತಿರಸ್ಕರಣೀಯರು. ನಿರರ್ಥಕವಾಗಿ ತಮ್ಮ ಸಮಯವನ್ನು ಹಾಳುಮಾಡುತ್ತಿದ್ದಾರೆ. ನಾರಾಯಣನು ಎಂದೂ ತಿರಸ್ಕರಣೀಯನೂ ಅಲ್ಲ, ದರಿದ್ರನೂ ಅಲ್ಲ. ಅವನು ಸಂಪತ್ ಅಭಿಮಾನಿಯಾದ ಲಕ್ಷ್ಮಿಯಿಂದ ಮತ್ತು ಸಕಲ ಜೀವರುಗಳಿಂದ ಪೂಜಿತನಾಗಿದ್ದಾನೆ. ಶಂಕರಾಚಾರ್ಯರು ಸ್ವಯಂ ತಾವೇ "ಬ್ರಹ್ಮನ್" ಎಂದು ಸಾರಿದರು. ಆದರೆ ನಾರಾಯಣ ಅಥವಾ ಕೃಷ್ಣನು ಪರಮ ಪುರುಷನಾಗಿದ್ದಾನೆ ಮತ್ತು ಅವನು ಭೌತಿಕ ಸೃಷ್ಟಿಗೆ ಅತೀತನಾಗಿದ್ದಾನೆ ಎಂಬುದನ್ನು ಒಪ್ಪಿಕೊಂಡಿದ್ದಾರೆ. ಕೃಷ್ಣನು ಸರ್ವರಿಂದಲೂ ಪೂಜಿತನಾಗಿರುವುದರಿಂದ ಶಂಕರಾಚಾರ್ಯರು ಪರಬ್ರಹ್ಮನಾದ ಕೃಷ್ಣನಿಗೆ ನಮಸ್ಕರಿಸಿದ್ದಾರೆ. ಭಗವದ್ಗೀತೆಯನ್ನು ಅರಿಯದ ಮತ್ತು ಕೃಷ್ಣ ದ್ವೇಷಿಗಳಾದ ಮೂರ್ಖರು ಮಾತ್ರ (ಅವರು ಅದಕ್ಕೆ ವ್ಯಾಖ್ಯಾನ ಬರೆಯುತ್ತಿದ್ದರೂ) "ನಾವು ವ್ಯಕ್ತಿ ರೂಪೀ ಕೃಷ್ಣನಿಗೆ ಅಲ್ಲ, ಅನಾದಿಯಾದ ಜನ್ಮರಹಿತವಾದ ಮತ್ತು ಕೃಷ್ಣನ ಮೂಲಕ ಉಪದೇಶ ನೀಡುವ ವ್ಯಕ್ತಿಗೆ ಸಂಪೂರ್ಣವಾಗಿ ಶರಣಾಗತರಾಗಬೇಕು" ಎಂದು ಹೇಳುತ್ತಾರೆ. ದೇವತೆಗಳು ಹೆದರುವಲ್ಲಿ ಮೂರ್ಖರು ನುಗ್ಗುತ್ತಾರೆ. ಮಹಾ ನಿರಾಕಾರವಾದಿಗಳಾದ ಶಂಕರಾಚಾರ್ಯರು ಕೃಷ್ಣನಿಗೆ ಮತ್ತು ಅವನ ಪವಿತ್ರ ಗ್ರಂಥವಾದ ಭಗವದ್ಗೀತೆಗೆ ನಮಸ್ಕರಿಸುತ್ತಿರುವಾಗ. "ನಾವು ಸಾಕಾರ ಕೃಷ್ಣನಿಗೆ ಶರಣಾಗಬೇಕಾಗಿಲ್ಲ" ಎಂದು ಮೂರ್ಖರು ಹೇಳುತ್ತಾರೆ. ಕೃಷ್ಣನು ಸರ್ವೇಶ್ವರನು ಮತ್ತು ಅವನ ಅಂತರ್ ಮತ್ತು ಬಹಿರ್ ರೂಪದಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂಬುದನ್ನು ಮಂದಮತಿಗಳು ಅರಿತುಕೊಳ್ಳುವುದಿಲ್ಲ. ಈ ಅಂತರ್ ಬಹಿರ್ ದ್ವಂದ್ವ ಅನುಭವವು ಭೌತಿಕ ಪ್ರಪಂಚಕ್ಕೆ ಸೇರಿದ್ದಾಗಿದೆ. ದಿವ್ಯ ಲೋಕದಲ್ಲಿ ಈ ಬಗೆಯ ಯಾವ ವ್ಯತ್ಯಾಸವಿಲ್ಲ. ಆ ದಿವ್ಯ ಲೋಕದಲ್ಲಿ ಎಲ್ಲವೂ ಸಚ್ಚಿದಾನಂದ ಸ್ವರೂಪ ವಾದದ್ದು. ನಾರಾಯಣ ಅಥವಾ ಕೃಷ್ಣ ಆ ದಿವ್ಯ ಲೋಕಕ್ಕೆ ಸೇರಿದವನು. ಆ ಪರಲೋಕದಲ್ಲಿ ನಿಜವಾದ ಪುರುಷನೇ ಇರುತ್ತಾನೆ. ಅಲ್ಲಿ ದೇಹ ಮತ್ತು ಆತ್ಮಗಳ ವ್ಯತ್ಯಾಸವಿರುವುದಿಲ್ಲ.

4

ಉಪನಿಷತ್ತುಗಳು ಗೋವುಗಳ ಗುಂಪು, ಭಗವಾನ್ ಕೃಷ್ಣ ಗೋಪಾಲನಂದನ, ಅವುಗಳ ಹಾಲು ಕರೆಯುವವ, ಅರ್ಜುನ ಗೋವತ್ಸ, ಗೀತಾಮೃತವು ಹಾಲು ಮತ್ತು ಪರಿಶುದ್ಧ ಜ್ಞಾನದ ಬುದ್ಧಿವಂತ ಮನುಷ್ಯನ ಕ್ಷೀರಪಾಯಿ.

## ಭಾವಾರ್ಥ

ಮಾನವನು ಆಧ್ಯಾತ್ಮಿಕ ವೈವಿಧ್ಯತೆಯನ್ನು ಅರಿತುಕೊಂಡ ಹೊರತು ಅವನು ಭಗವಂತನ ದಿವ್ಯ ಲೀಲೆಗಳನ್ನು ಅರಿತುಕೊಳ್ಳಲಾರನು. ಕೃಷ್ಣನ ನಾಮ, ರೂಪ, ಗುಣ, ಲೀಲೆಗಳು ಅವತಾರ ಮತ್ತು ಅವನ ಎಲ್ಲ ಪರಿಕರ ಮತ್ತು ಪರಿವಾರ ಆನಂದ ಚಿನ್ಮಯರಸವಾಗಿವೆಯೆಂದು ಬ್ರಹ್ಮ ಸಂಹಿತೆಯಲ್ಲಿ ಹೇಳಿದೆ— ಸಂಕ್ಷಿಪ್ತವಾಗಿ ಹೇಳುವುದಾದರೆ, ಅವನ ದಿವ್ಯ ಸಂಪರ್ಕದ

ಪ್ರತಿಯೊಂದು ಅಂಶವೂ ದಿವ್ಯ ಮತ್ತು ನಿತ್ಯ ಜ್ಞಾನಾನಂದಾದಿಗಳಿಂದ ಕೂಡಿದೆ. ಭೌತಿಕ ಜಗತ್ತಿನಲ್ಲಿ ಎಲ್ಲ ವಸ್ತುಗಳಿಗೂ ಕೊನೆಯಿರುವಂತೆ ಅವನ ನಾಮ ರೂಪಾದಿಗಳಿಗೆ ಕೊನೆ ಎಂಬುದಿಲ್ಲ. ಭಗವದ್ಗೀತೆಯಲ್ಲಿ ಹೇಳಿದಂತೆ ಮೂಢರು ಮಾತ್ರ ಅವನನ್ನು ನಿಂದಿಸುತ್ತಾರೆ. ಆದರೆ ಮಹಾ ನಿರಾಕಾರವಾದಿಗಳಾದ ಶಂಕರಾಚಾರ್ಯರು ಮಾತ್ರ ವಾಸುದೇವ ಪುತ್ರನನ್ನು ಮತ್ತು ದೇವಕಿ ನಂದನನಾದ ಕೃಷ್ಣನನ್ನು, ಅವನ ಗೋವುಗಳನ್ನು ಮತ್ತು ಅವನ ಲೀಲೆಗಳನ್ನು ಆರಾಧಿಸುತ್ತಾರೆ.

5

ವಸುದೇವ ಪುತ್ರನೆ, ನೀನು ಕಂಸ ಮತ್ತು ಚಾಣೂರ ದೈತ್ಯರ ಸಂಹಾರಕನು,
ನೀನು ಮಾತೆ ದೇವಕಿಯ ಅಪರಿಮಿತ ಆನಂದ ರೂಪನು, ಓ ನೀನು ವಿಶ್ವದಗುರು,
ವಿಶ್ವೋಪದೇಶಕನು ಓ ಕೃಷ್ಣ ನಿನಗೆ ನನ್ನ ನಮಸ್ಕಾರ.

## ಭಾವಾರ್ಥ

ಶಂಕರಾಚಾರ್ಯರು ಕೃಷ್ಣನನ್ನು ವಸುದೇವ ದೇವಕಿ ಪುತ್ರನೆಂದು ವರ್ಣಿಸುತ್ತಾರೆ. ಹಾಗೆಂದರೆ ಅವರು ಅವನನ್ನು ಒಬ್ಬ ಸಾಮಾನ್ಯ ಭೌತಿಕ ವ್ಯಕ್ತಿ ಎಂದು ಆರಾಧಿಸುವರೇ ? ಕೃಷ್ಣನ ಜನನ ಮತ್ತು ಕ್ರಿಯೆಗಳು ಎಲ್ಲವೂ ಅಪ್ರಾಕೃತ ಎಂಬುದನ್ನು ಶಂಕರರು ತಿಳಿದವರಾಗಿದ್ದರಿಂದಲೇ ಅವರು ಅವನನ್ನು ಆರಾಧಿಸುತ್ತಾರೆ. ಭಗವದ್ಗೀತೆಯಲ್ಲಿ ಹೇಳಿದಂತೆ (4-9), ಕೃಷ್ಣನ ಹುಟ್ಟು ಮತ್ತು ಕ್ರಿಯೆಗಳು ಅದ್ಭುತವೂ ದಿವ್ಯವೂ ಆಗಿವೆ. ಆದುದರಿಂದ ಕೃಷ್ಣ ಭಕ್ತರು ಮಾತ್ರ ಅವುಗಳನ್ನು ಪೂರ್ಣವಾಗಿ ಅರಿತುಕೊಳ್ಳಬಲ್ಲರು. ಕೃಷ್ಣನು ಒಬ್ಬ ಸಾಮಾನ್ಯ ಮನುಷ್ಯ ಎಂದು ಶಂಕರಾಚಾರ್ಯರು ತಿಳಿದಿರಲಿಲ್ಲ. ಹಾಗಿದ್ದರೆ ವಸುದೇವ ದೇವಕಿ ಪುತ್ರನಾದ ಅವನನ್ನು ಹಾಗೆ ತಿಳಿದು ಪೂಜಿಸುವಷ್ಟು ಅವರು ದಡ್ಡರಾಗಿರಲಿಲ್ಲ. ಭಗವದ್ಗೀತೆಯ ಪ್ರಕಾರ, ಕೃಷ್ಣನ ಅಪ್ರಾಕೃತ ಜನನ ಮತ್ತು ಕ್ರಿಯೆಗಳನ್ನು ಅರಿತವನೇ ಕೃಷ್ಣನಂಥ ದಿವ್ಯ ರೂಪವನ್ನು ಪಡೆದು ಮೋಕ್ಷವನ್ನು ಹೊಂದಬಹುದು. ಮೋಕ್ಷವು ಐದು ಬಗೆಯದಾಗಿದೆ. ಕೃಷ್ಣನ ದಿವ್ಯ ಪ್ರಭಾವಲಯದಲ್ಲಿ ಸೇರಿಹೋಗುವುದು ಬ್ರಹ್ಮ ಜ್ಯೋತಿಯ ವ್ಯಕ್ತಿಶೂನ್ಯ ಮುಕ್ತಿ ಎನಿಸಿದೆ. ಇದರಿಂದ ಆತ್ಮನ ದಿವ್ಯ ದೇಹದ ಪೂರ್ಣ ಬೆಳವಣಿಗೆ ಆಗುವುದಿಲ್ಲ. ಆದರೆ ತನ್ನ ಪೂರ್ಣ ಆಧ್ಯಾತ್ಮಿಕ ಇರುವಿಕೆಯನ್ನು ಬೆಳೆಸಿಕೊಂಡವನು ಕೃಷ್ಣ ಅಥವಾ ನಾರಾಯಣನ ಲೋಕಗಳಲ್ಲಿ ಅವನ ಸಹಚರಿಯಾಗುವನು. ನಾರಾಯಣನ ಲೋಕವನ್ನು ಪ್ರವೇಶಿಸಿದವನು ನಾರಾಯಣನಂತೆ (ಚತುರ್ಭುಜಗಳಿಂದ ಕೂಡಿದ) ದಿವ್ಯರೂಪವನ್ನು ಪಡೆದುಕೊಳ್ಳುವನು, ಗೋಲೋಕ ವೃಂದಾವನವೆನಿಸುವ ಕೃಷ್ಣನ ಅತ್ಯುನ್ನತ ದಿವ್ಯ ಲೋಕವನ್ನು ಪ್ರವೇಶಿಸಿದವನು ಕೃಷ್ಣನಂತೆ ಎರಡು ಕೈಗಳಿಂದ ಕೂಡಿದ ದಿವ್ಯರೂಪವನ್ನು ಹೊಂದುವನು. ಶಂಕರರು ಭಗವಾನ್ ಶಿವನ ಅವತಾರವಾಗಿರುವುದರಿಂದ, ಅವರು ಈ ಎಲ್ಲ ದೈವೀ ಅಸ್ತಿತ್ವಗಳನ್ನು ಬಲ್ಲವರಾಗಿದ್ದಾರೆ. ಆದರೆ ಅವರ ಕಾಲದ ಬೌದ್ಧ ಅನುಯಾಯಿಗಳು ಈ ದಿವ್ಯ ಲೋಕವನ್ನು ಅರಿತುಕೊಳ್ಳುವುದು ಅಸಾಧ್ಯವಾಗಿತ್ತು. ಆದುದರಿಂದ ಶಂಕರರು ಅವರಿಗೆ ಇದನ್ನು ತಿಳಿಸಿಕೊಡಲಿಲ್ಲ. ಭಗವಾನ್ ಬುದ್ಧನು ಶೂನ್ಯವೇ ಕೊನೆಯ ಗುರಿಯೆಂದು ಪ್ರಚಾರಮಾಡಿದನು. ಹೀಗಿರುವಾಗ, ಅವನ ಅನುಯಾಯಿಗಳು ಆಧ್ಯಾತ್ಮಿಕ ವೈವಿಧ್ಯವನ್ನು ಅರಿತುಕೊಳ್ಳುವುದಾದರೂ ಹೇಗೆ ? ಅಂತೆಯೇ ಶಂಕರಾಚಾರ್ಯರು ಬ್ರಹ್ಮ ಸತ್ಯಂ ಜಗನ್‌ಮಿಥ್ಯಾ ಎಂಬರೆ ಭೌತಿಕ ವೈವಿಧ್ಯತೆಯು

ಮಿಥ್ಯೆ. ಆದರೆ ಆಧ್ಯಾತ್ಮಿಕ ವೈವಿಧ್ಯತೆಯು ಸತ್ಯ ಎಂದು ಹೇಳಿದರು. ಭಗವಾನ್ ಶಿವನು ಕಲಿಯುಗದಲ್ಲಿ ಮಾಯಾವಾದವನ್ನು ಬೋಧಿಸಬೇಕಾಗಿದೆ ಎಂಬುದನ್ನು ಪದ್ಮ ಪುರಾಣದಲ್ಲಿ ತಾನೇ ಹೇಳಿದ್ದಾನೆ. ಬುದ್ಧನ "ಶೂನ್ಯ" ವಾದ ಎಂಬುದು ಅದರದೇ ಮತ್ತೊಂದು ಆವೃತ್ತಿ. ಅವನು ವಿಶಿಷ್ಟ ಕಾರಣಗಳಿಗಾಗಿ ದೇವರ ಆಜ್ಞೆಯಿಂದ ಹೀಗೆ ಮಾಡಬೇಕಾಯಿತು. ಕೇವಲ ಕಾಲ್ಪನಿಕ ಊಹಾ ಪೋಹಗಳಿಂದ, ಶಬ್ದಜಾಲಗಳಿಂದ ಮತ್ತು ವ್ಯಾಕರಣ ಚತುರತೆಯಿಂದ ಯಾರೂ ತಮ್ಮನ್ನು ರಕ್ಷಿಸಿಕೊಳ್ಳುವುದು ಸಾಧ್ಯವಿಲ್ಲ. ಆದುದರಿಂದ, ಜನರು ಕೃಷ್ಣನನ್ನು ಆರಾಧಿಸಬೇಕು ಎಂಬುದಾಗಿ ಅವರು ತಮ್ಮ ಹೃದ್ಗತವನ್ನು ಸೂಚಿಸಿದ್ದಾರೆ. ಶಂಕರಾಚಾರ್ಯರು ಮುಂದು ವರೆದು :

ಭಜಗೋವಿಂದಂ ಭಜಗೋವಿಂದಂ ಭಜಗೋವಿಂದಂ ಮೂಢಮತೇ ।
ಸಂಪ್ರಾಪ್ತೇ ಸನ್ನಿಹಿತೇ ಕಾಲೇ ನಹಿ ನಹಿ ರಕ್ಷತಿ ಡುಕುರಂಕರಣೇ ॥

"ಹೇ ಬುದ್ಧಿವಂತ ಮೂಢರೇ, ನೀವು ಕೇವಲ ಗೋವಿಂದನನ್ನು ಭಜಿಸಿ, ಕೇವಲ ಗೋವಿಂದನನ್ನು ಭಜಿಸಿ, ಕೇವಲ ಗೋವಿಂದನನ್ನು ಭಜಿಸಿ, ನಿಮ್ಮ ವ್ಯಾಕರಣ ಜ್ಞಾನವಾಗಲೀ ನಿಮ್ಮ ಶಬ್ದಜಾಲವಾಗಲೀ ಮರಣ ಕಾಲದಲ್ಲಿ ನಿಮ್ಮನ್ನು ರಕ್ಷಿಸಲಾರದು."

6

ಆ ಕುರುಕ್ಷೇತ್ರ ಯುದ್ಧ ಭೂಮಿಯ, ಭಯಾನಕ ನದಿಯನ್ನು ಪಾಂಡವರು ದಾಟಿದರು
ಭೀಷ್ಮದ್ರೋಣರೇ ಎತ್ತರದ ದಂಡೆಗಳು ಜಯದ್ರಥನೇ ನದಿಯ ನೀರು
ಗಾಂಧಾರ ರಾಜನೇ ನೀಲ ಜಲಪುಷ್ಪ, ಶಲ್ಯನೇ ತಿಮಿಂಗಲ, ಕೃಪನೇ ಸುಳಿ,
ಮಹಾ ತರಂಗಗಳೇ ಕರ್ಣ ಅಶ್ವತ್ಥಾಮ ವಿಕರ್ಣರೇ ಭೀಕರ ಮೊಸಳೆ,
ದುರ್ಯೋಧನನೇ ಮಹಾ ಸುಳಿಮಡುವು ಆದರೆ ಹೇ ಕೃಷ್ಣ ನೀನೆ ಅಂಬಿಗ !

7

ವ್ಯಾಸರ ಶಬ್ದ ಜಲದ ಮೇಲೆ ಬೆಳೆಯುವ ನಿಷ್ಕಳಂಕ ಮಹಾಭಾರತ ಕಮಲವು
ಮತ್ತು ಆದರ ಅನ್ಯಾಕರ್ಷಕವಾದ ಸೌಗಂಧವೇ ಭಗವದ್ಗೀತೆಯು
ಭಗವಾನ್ ಹರಿಯ ಮಾತುಗಳಿಂದ ಪೂರ್ಣಕುಸುಮಿತವಾದ
ಹೂವಿನ ಎಸುಳುಗಳಂತಿರುವ ಮಹಾ ಶೂರರ ಶೌರ್ಯಕತೆಗಳು, ಕಲಿಯುಗದ
ಪಾಪನಾಶಕನಾದ ಹರಿಯು. ಅದನ್ನು ಅವಲಂಬಿಸಿರುವ ನಿತ್ಯ ಪ್ರಕಾಶ
ಅಮೃತಾಪೇಕ್ಷಿಗಳಾದ ಜೀವಾತ್ಮರು ಆನಂದದಿಂದ ದುಂಬಿಗಳಂತೆ
ಝೇಂಕರಿಸುತ್ತಿದ್ದಾರೆ. ಈ ಮಹಾ ಭಾರತ ಕಮಲ ಕುಸುಮವು
ನಮಗೆ ಪರಮ ಮಂಗಳವನ್ನುಂಟು ಮಾಡಲಿ,

8

ದಿವ್ಯಾನಂದ ಶರೀರಿಯಾದ ಓ ಭಗವಾನ್ ಕೃಷ್ಣನೆ, ನಿನಗೆ ನಮಸ್ಕಾರ
ಅವನ ಅನುಗ್ರಹ ಮತ್ತು ದಯೆಯಿಂದ ಮೂಕನು ಮಾತುಬಲ್ಲವನಾಗುತ್ತಾನೆ
ಹೆಳವನು ಪರ್ವತವನ್ನೇರುತ್ತಾನೆ ಅಂಥ ಭಗವಾನ್ ಕೃಷ್ಣನಿಗೆ ನನ್ನ ನಮಸ್ಕಾರ

## ಭಾವಾರ್ಥ

ಸಚ್ಚಿದಾನಂದ ಸ್ವರೂಪಿಯಾದ ಭಗವಾನ್ ಕೃಷ್ಣನಿಗೆ ಸಲ್ಲಿಸುವ ಪ್ರಣಾಮಗಳನ್ನು ಕೂಡ ಮೂರ್ಖ ಊಹಾ ಪೋಹಕರು, ಮೂರ್ಖ ಅನುಯಾಯಿಗಳು ಅರಿತುಕೊಳ್ಳಲಾರರು. ತಮ್ಮ ಮಹಾಗುರು ಮತ್ತು ಶಿವನ ಅವತಾರಿಯಾದ ಶಂಕರರ ಉದಾಹರಣೆಯಿಂದಲೇ ಅವರ ಬುದ್ಧಿವಂತ ಅನುಯಾಯಿಗಳು ನಿಜವಾದ ಸಂಗತಿಯನ್ನು ಅರಿತುಕೊಳ್ಳಲೆಂದೇ ಶಂಕರಾಚಾರ್ಯರು ಸ್ವತಃ ಕೃಷ್ಣನಿಗೆ ಪ್ರಣಾಮಗಳನ್ನು ಸಲ್ಲಿಸಿದ್ದಾರೆ. ಆದರೆ ಕೃಷ್ಣನಿಗೆ ಪ್ರಣಾಮಗಳನ್ನು ಸಲ್ಲಿಸಲು ನಿರಾಕರಿಸುವ ಶಂಕರಾಚಾರ್ಯರ ಅನೇಕ ಹಠವಾದೀ ಶಿಷ್ಯರಿದ್ದಾರೆ ಮತ್ತು ಅವರು ಅದಕ್ಕೆ ಪ್ರತಿಯಾಗಿ ಭಗವದ್ಗೀತೆಯಲ್ಲಿ ಭೌತವಾದವನ್ನು ಸೇರಿಸಿ ಅಮಾಯಕ ಜನರ ಮನಸ್ಸಿನಲ್ಲಿ ತಪ್ಪು ಕಲ್ಪನೆಯನ್ನು ಮೂಡಿಸುತ್ತಾರೆ ಮತ್ತು ತಮ್ಮ ವ್ಯಾಖ್ಯಾನಗಳಿಂದ ಅವರನ್ನು ಗೊಂದಲಕ್ಕೀಡು ಮಾಡುತ್ತಾರೆ. ಪರಿಣಾಮವಾಗಿ, ಈ ಅಮಾಯಕ ಓದುಗರು, ಸರ್ವಕಾರಣಗಳ ಪರಮ ಕಾರಣನಾದ ಕೃಷ್ಣ ಭಗವಂತನಿಗೆ ನಮಸ್ಕರಿಸಿ ಧನ್ಯರಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ. ಗೀತೆಗೆ ಅಪಾರ್ಥ ಮಾಡಿ ಕೃಷ್ಣ ವಿಜ್ಞಾನದ ಬಗ್ಗೆ ಮತ್ತು ಕೃಷ್ಣಪ್ರಜ್ಞೆಯ ಬಗ್ಗೆ ಜನರನ್ನು ಅಜ್ಞಾನದಲ್ಲಿಡುವುದೇ ಮಾನವ ಕುಲಕ್ಕೆ ಎಸಗುವ ಮಹಾದ್ರೋಹವಾಗಿದೆ.

9

ಯಾವನನ್ನು ಸೃಷ್ಟಿಕರ್ತನಾದ ಬ್ರಹ್ಮನು, ವರುಣನು, ರುದ್ರನು, ಮರುತ್ ಮತ್ತು
ಎಲ್ಲ ದೇವತೆಗಳು ವೇದ ಋತುಗಳಿಂದ ಸ್ತೋತ್ರ ಮಾಡುತ್ತಾರೋ
ಆ ಪರಮ ಪ್ರಕಾಶ ರೂಪನಿಗೆ ಪ್ರಣಾಮಗಳು, ಸಾಮಗಾನ ಪ್ರಿಯರು
ವೇದ ಋಕ್ಕುಗಳಿಂದ ಅವನ ಗುಣಗಾನ ಮಾಡುತ್ತಾರೆ. ಉಪನಿಷತ್ತುಗಳು
ಪೂರ್ಣಕಂಠದಿಂದ ಅವನನ್ನು ಹೊಗಳುತ್ತವೆ. ಯೋಗಿಗಳು ತಮ್ಮ ಪೂರ್ಣ
ಧ್ಯಾನಾಸಕ್ತ ಮನಸ್ಸಿನಿಂದ ಅವನನ್ನು ನೋಡುತ್ತಾರೆ, ಮತ್ತು ಅವನು
ಅಪರಿಮಿತ ಗುಣಾರ್ಣವನು ಎಂಬುದನ್ನು ಎಲ್ಲ ದೇವ ದಾನವರು ಬಲ್ಲರು.
ಆ ಭಗವಂತನಾದ ಕೃಷ್ಣನಿಗೆ ನಮ್ಮ ಅನಂತ ಪ್ರಣಾಮಗಳು–ಅವನಿಗೆ
ನಮ್ಮ ಪ್ರಣಾಮಗಳು ಅವನಿಗೆ ನಮ್ಮ ಪ್ರಣಾಮಗಳು !
ಅವನಿಗೆ ನಮ್ಮ ಪ್ರಣಾಮಗಳು

## ಭಾವಾರ್ಥ

ಶ್ರೀಮದ್ಭಾಗವತದ ಈ ಒಂಬತ್ತನೆಯ ಧ್ಯಾನ ಶ್ಲೋಕವನ್ನು ಪಠಿಸುವ ಮೂಲಕ, ಭಗವಾನ್ ಕೃಷ್ಣನು ತಮ್ಮಿಂದಲೂ ಮತ್ತು ಸರ್ವರಿಂದಲೂ ಆರಾಧ್ಯನಾಗಿದ್ದಾನೆ-ಎಂಬುದನ್ನು ಶಂಕರಾಚಾರ್ಯರು ಸೂಚಿಸಿದ್ದಾರೆ. ಭೌತವಾದಿಗಳು, ನಿರಾಕಾರವಾದಿಗಳು, ಕಲ್ಪನಾವಾದಿಗಳು, ಶೂನ್ಯವಾದಿಗಳು ಮತ್ತು ಭೌತಿಕ ದುಃಖಗಳಿಗೆ ಗುರಿಯಾದ ಎಲ್ಲ ಇತರರು, ಬ್ರಹ್ಮರುದ್ರ ವರುಣೇಂದ್ರಾದಿ ಸಕಲ ದೇವತೆಗಳಿಂದ ಪೂಜಿತನಾದ ಭಗವಾನ್ ಕೃಷ್ಣನಿಗೆ ಪ್ರಣಾಮಗಳನ್ನು ಸಲ್ಲಿಸುವಂತೆ ಶಂಕರಾಚಾರ್ಯರು ಸೂಚಿಸಿದ್ದಾರೆ. ವಿಷ್ಣುವು ಕೃಷ್ಣನೇ ಆಗಿರುವುದರಿಂದ ಅವರು

ಅಲ್ಲಿ ವಿಷ್ಣುವಿನ ಹೆಸರನ್ನು ಉಚ್ಚರಿಸಿಲ್ಲ. ಎಲ್ಲ ವೇದಗಳು ಮತ್ತು ಉಪನಿಷತ್ತುಗಳು ಕೃಷ್ಣನಿಗೆ ಶರಣಾಗತರಾಗುವ ವಿಧಾನವನ್ನು ತಿಳಿಸಲು ಉದ್ದೇಶಿತವಾಗಿದೆ. ಧ್ಯಾನಮಗ್ನರಾದ ಯೋಗಿಗಳು ತಮ್ಮ ಹೃದಯದಲ್ಲಿಯೇ ಅವನನ್ನು ಕಾಣಲು ಯತ್ನಿಸುತ್ತಾರೆ. ಆತ್ಯಂತಿಕ ವಸ್ತುವು ಎಲ್ಲಿದೆ ಎಂಬುದನ್ನು ಅರಿಯದ ಸಕಲ ದೇವ ದಾನವರಿಗೆ ಶಂಕರಾಚಾರ್ಯರು ಉಪದೇಶಿಸುತ್ತಿದ್ದಾರೆ. ತಮ್ಮ ಹೆಜ್ಜೆಗಳನ್ನೇ ಹಿಂಬಾಲಿಸಿ, ಕೃಷ್ಣನಿಗೂ ಅವನ ಉಪದೇಶವೆನಿಸಿದ ಭಗವದ್ಗೀತೆಗೂ ನಮಸ್ಕರಿಸುವಂತೆ ದಾನವರಿಗೂ ಮೂರ್ಖರಿಗೂ ವಿಶೇಷವಾಗಿ ಶಂಕರಾಚಾರ್ಯರು ಉಪದೇಶ ಮಾಡಿದ್ದಾರೆ. ದಾನವರು ಕೇವಲ ತಮ್ಮ ಕಾಲ್ಪನಿಕ ಊಹಾಪೋಹಗಳಿಂದ ಅಥವಾ ಧ್ಯಾನ ಪ್ರದರ್ಶನಗಳಿಂದ ತಮ್ಮ ಅಮಾಯಕ ಶಿಷ್ಯರನ್ನು ತಪ್ಪು ದಾರಿಗೆ ಎಳೆಯುವುದರಿಂದ ಅವರ ಉದ್ಧಾರವಾಗುವುದಿಲ್ಲ. ಮೇಲೆ ಹೇಳಿದ ಸತ್ಕಾರ್ಯಗಳಿಂದಲೇ ದಾನವರು ಉದ್ಧಾರ ಕಾಣಬಹುದು. ಪ್ರಕಾಶ ಜ್ಯೋತಿಯನ್ನು ಹುಡುಕುತ್ತಿರುವವರಿಗೆ, ಸೂರ್ಯ ಸದೃಶವಾದ ಪ್ರಕಾಶವು ಇಲ್ಲಿದೆ ಎಂಬುದನ್ನು ಮೂರ್ಖರಿಗೆ ತೋರಿಸಿ ಕೊಡಲೆಂದೇ ಶಂಕರಾಚಾರ್ಯರು ಸಾಕ್ಷಾತ್ತಾಗಿ ಕೃಷ್ಣನಿಗೆ ಪ್ರಣಾಮಗಳನ್ನು ಸಲ್ಲಿಸಿದ್ದಾರೆ. ಆದರೆ ಪತಿತರಾದ ದೈತ್ಯರು ಗೂಬೆಗಳಿದ್ದಂತೆ. ಸೂರ್ಯ ಪ್ರಕಾಶದಿಂದ ಭಯಗೊಂಡು ಅವು ತಮ್ಮ ಕಣ್ಣುಗಳನ್ನೇ ತೆರೆಯುವುದಿಲ್ಲ. ಈ ಗೂಬೆಗಳು ಪವಿತ್ರವಾದ ಕೃಷ್ಣಪ್ರಕಾಶವನ್ನು ಮತ್ತು ಭಗವದ್ಗೀತೆಯ ಅವನ ಉಪದೇಶಗಳನ್ನು ನೋಡಲು ಎಂದೂ ಕಣ್ಣು ತೆರೆಯುವುದಿಲ್ಲ. ಬದಲಾಗಿ, ಅವರು ತಮ್ಮ ಹತಭಾಗ್ಯರಾದ ಓದುಗರನ್ನು ಮತ್ತು ಅನುಯಾಯಿಗಳನ್ನು ಗೂಬೆಗಳಂತೆ ತಮ್ಮ ಮುಚ್ಚಿದ ಕಣ್ಣುಗಳಿಂದ ಭಗವದ್ಗೀತೆಗೆ ವ್ಯಾಖ್ಯಾನ ಮಾಡುತ್ತ ಅಡ್ಡದಾರಿಗೆಳೆಯುತ್ತಾರೆ. ಆದರೆ ಶಂಕರಾಚಾರ್ಯರು ಮಂದಮತಿಗಳಾದ ಅನುಯಾಯಿಗಳಿಗೆ ಈ ದಿವ್ಯ ಜ್ಯೋತಿಯ ದರ್ಶನ ನೀಡುತ್ತಾರೆ. ಕೃಷ್ಣ ಮತ್ತು ಭಗವದ್ಗೀತೆ ಇದೇ ಆ ಪರಮ ಪ್ರಕಾಶದ ಮೂಲ ಎಂಬುದನ್ನು ತೋರಿಸಿ ಕೊಡುತ್ತಾರೆ. ಭಗವಂತನಾದ ಕೃಷ್ಣನಿಗೆ ಮೋಹರಹಿತರಾಗಿ, ಶರಣಾಗತರಾಗಿ, ಪ್ರಣಾಮಿಸಬಯಸುವ ಪ್ರಾಮಾಣಿಕ ಸತ್ಯ ಶೋಧಕರಿಗಾಗಿಯೇ ಈ ಎಲ್ಲ ಉಪದೇಶ ಇದೆ. ಇದೇ ಜೀವನದ ಪರಮ ಪರಿಪೂರ್ಣತೆ ಮತ್ತು ಇದೇ ಈ ಮಹಾಜ್ಞಾನ ಭೂಮಿಯಾದ ಭಾರತದಿಂದ ಬುದ್ಧನ ಶೂನ್ಯವಾದವನ್ನು ಹೊಡೆದಟ್ಟಿದ ಮಹಾದಾರ್ಶನಿಕರಾದ ಶಂಕರಾಚಾರ್ಯರ ಮಹೋಪದೇಶವಾಗಿದೆ.

ಓಂ ತತ್ ಸತ್



# ಕೃಷ್ಣಪ್ರಜ್ಞೆಯ ವೈದಿಕ ತಳಹದಿ

ಬರ್ಕ್ಲಿ ಕೇಂದ್ರದ ಹರೇಕೃಷ್ಣ ಚಳವಳಿಯ ಅಧ್ಯಕ್ಷರಾದ ಹ್ಯಾನ್ಸ್‌ಕ್ಯಾರಿ ಅವರು ಬೋಧಿಸಲಿದ್ದ ಹರೇಕೃಷ್ಣ ಪ್ರಯೋಗ ಪಠ್ಯಕ್ರಮಕ್ಕೆ ಸಹಾಯಾನುದಾನ ನೀಡುವ ಕೋರಿಕೆಯನ್ನು, ತತ್ವಜ್ಞಾನ ಮತ್ತು ದಕ್ಷಿಣ ಏಷಿಯಾ ಭಾಷೆಗಳ ಪ್ರೊಫೆಸರಾದ ಡಾ. ಜೆ. ಎಫ್. ಸ್ಟಾಲರೂ ಸೇರಿ ಕೆಲಿಫೋರ್ನಿಯ ವಿಶ್ವವಿದ್ಯಾಲಯದ (ಬರ್ಕ್ಲಿ) ಪಠ್ಯ ವಿಭಾಗದ ಸದಸ್ಯರು ನಿರಾಕರಿಸಿದ್ದರೆಂದು 1970ರ ಜನವರಿ 11 ರಂದು ಲಾಸ್ ಏಂಜಲಿಸ್ ಟೈಮ್ಸ್‌ನಲಿ ಲೇಖನವೊಂದು ವರದಿ ಮಾಡಿತ್ತು. ಈ ಪ್ರಸ್ತಾವವನ್ನು ನಿರಾಕರಿಸುತ್ತ, ಭಕ್ತಾದಿಗಳು "ಒಂದು ದರ್ಶನವನ್ನು ರೂಪಿಸಲು ಕೇವಲ ಕೀರ್ತನ ಜಪದಲ್ಲಿಯೇ ಅತಿಯಾಗಿ ಕಾಲಯಾಪನೆ ಮಾಡಿಬಿಡುತ್ತಾರೆ" ಎಂದು ಹೇಳಿದರು. ಈ ಲೇಖನವು ಹರೇಕೃಷ್ಣ ಆಂದೋಲನದ ಸ್ಥಾಪಕರೂ ಗುರುಗಳೂ ಆಗಿದ್ದ ಶ್ರೀಲ ಪ್ರಭುಪಾದರ ಗಮನಕ್ಕೆ ಬಂದಾಗ, ಅವರು ಆ ಪ್ರಖ್ಯಾತ ಪ್ರೊಫೆಸರರೊಂದಿಗೆ ಒಂದು ಅಸಾಧಾರಣ ಪತ್ರವ್ಯವಹಾರವನ್ನೇ ಪ್ರಾರಂಭಿಸಿದರು.

**ಲಾಸ್ ಏಂಜಲೀಸ್ ಟೈಮ್ಸ್**ಪತ್ರಿಕೆಯಿಂದ ಉದ್ಧರಣ

ಹರೇಕೃಷ್ಣ ಪಂಥವು ಭಾರತದ ಒಂದು ಪ್ರಮಾಣ ಪುರಸ್ಸರವಾದ ಧರ್ಮವಾಗಿದೆ ಮತ್ತು ಅದರ ಅನುಯಾಯಿಗಳು ಪ್ರಾಮಾಣಿಕರಾಗಿದ್ದಾರೆ ಎಂದು ಬರ್ಕ್ಲಿ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ತತ್ವಜ್ಞಾನ ಮತ್ತು ಸಮೀಪ ಪೂರ್ವದ ಭಾಷೆಗಳ ಪ್ರೊಫೆಸರರೂ ಮತ್ತು ಭಾರತೀಯ ದರ್ಶನ ಬೋಧಕರೂ ಆದ ಡಾ. ಜೆ. ಎಫ್. ಸ್ಟಾಲರು ಭಾವಿಸುತ್ತಾರೆ. ಇಂದಿನ ಯುವ ಪೀಳಿಗೆಯವರು ಸುಸಂಘಟಿತ ಚರ್ಚ್‌ಗಳಿಗೆ ಹೋಗುವುದನ್ನು ನಿರಾಕರಿಸುತ್ತಿದ್ದರೂ ಅವರು ತಮ್ಮ ಒಂದು ದಾರ್ಶನಿಕ ನಂಬಿಕೆಯನ್ನು ಪೂರೈಸಿಕೊಳ್ಳುವ ಭಾವನಾತ್ಮಕ ಶೋಧನಾ ಪರರಾಗಿರುವುದರಿಂದ ಕೃಷ್ಣಪ್ರಜ್ಞಾ ಸಂಘದ ತೀವ್ರ ಬೆಳವಣಿಗೆಯು ಸಾಧ್ಯವಾಗಿದೆಯೆಂದು ಅವರು ಅಭಿಪ್ರಾಯ ಪಡುತ್ತಾರೆ.

"ಆದರೆ, ಕ್ರಿಶ್ಚಾನಿಟಿ, ಮಹಮ್ಮದೀಯ ಧರ್ಮ ಮತ್ತು ಜುಡೇಯಿಸಮ್ ಧರ್ಮಗಳಿಂದ ವಿಮುಖರಾದ ವ್ಯಕ್ತಿಗಳು ಅಂಥ ಧರ್ಮಗಳು ಪ್ರತಿಪಾದಿಸುವ ವ್ಯಕ್ತಿ ದೇವತಾವಾದದಲ್ಲಿ ಸಾಮಾನ್ಯವಾಗಿ ಶ್ರದ್ಧೆಯನ್ನು ಕಳೆದುಕೊಂಡವರಾಗಿ **ಪರಮಾತ್ಮಕಲ್ಪನಾ** ರಹಿತವಾದ ಒಂದು ಆಧ್ಯಾತ್ಮ ಧರ್ಮವನ್ನು ಅರಸುತ್ತಿದ್ದಾರೆ ಎಂದು ಅವರು ಹೇಳುತ್ತಾರೆ.

"ಕೃಷ್ಣ ಪ್ರಜ್ಞಾ ಆಂದೋಲನಕ್ಕೆ ಸೇರಿದ ಈ ಜನ, ಹಿಂದೂ ಧರ್ಮದೆಡೆಗೆ ತಿರುಗಿದ್ದಾರೆ. ಆದರೆ, ಕುತೂಹಲಕಾರಕ ಸಂಗತಿಯೆಂದರೆ, ಅದು ಅತ್ಯಂತ ವ್ಯಕ್ತಿದೇವತಾವಾದೀ ಧರ್ಮವಾಗಿದೆ. ಅವರು 'ಕೃಷ್ಣ' ಎಂಬ ವ್ಯಕ್ತಿ ರೂಪೀ ದೇವತೆಯನ್ನು ಒಪ್ಪುತ್ತಾರೆ, ಕ್ರೈಸ್ತ ಧರ್ಮದಲ್ಲಿಯೂ ಅದು ಇದ್ದೇ ಇದೆ. ಅವರು ಕ್ರೈಸ್ತಧರ್ಮದ ತಮ್ಮ ಕೆಲವು ಹಿನ್ನೆಲೆಗಳನ್ನು (ಕಲ್ಪನೆಗಳನ್ನು) ಹಿಂದೂ ಧರ್ಮಕ್ಕೆ ವರ್ಗಾಯಿಸಿಕೊಂಡಿದ್ದಾರೆ ಎಂಬುದು ನನ್ನ ಭಾವನೆ ಎನ್ನುತ್ತಾರೆ ಡಾ. ಸ್ಟಾಲ್ ಅವರು.

ಈ ಜನರು ಒಂದು ದರ್ಶನವನ್ನು ಬೆಳೆಸಿಕೊಳ್ಳಲು ಹೋಗಿ ಕೀರ್ತನ ಜಪದಲ್ಲಿಯೇ ಬಹಳಷ್ಟು ಕಾಲಯಾಪನೆ ಮಾಡಿಬಿಡುತ್ತಾರೆ. ಈ ಕಾರಣದಿಂದಾಗಿ, ಅವರು ಮತ್ತು ಆ ಪಠ್ಯ ವಿಭಾಗದ ಇತರರು, ಆ ವರ್ಷದ ಚಳಿಗಾಲದಲ್ಲಿ ಬರ್ಕ್ಲಿ ಮಂದಿರದ ಕೃಷ್ಣಪಂಥದ ಅಧ್ಯಕ್ಷರಾದ ಹಾನ್ಸ್ ಕ್ಯಾರಿ ಅವರು ನಡೆಸಲಿದ್ದ ಕೃಷ್ಣ ಪ್ರಜ್ಞಾ ಆಂದೋಲನದ ಪ್ರಯೋಗ ಪಠ್ಯಕ್ರಮಕ್ಕೆ ಸಹಾಯಾನುದಾನ ನೀಡುವುದನ್ನು ಕುರಿತ ಕೋರಿಕೆಯನ್ನು ತಳ್ಳಿಹಾಕಿದರು."

**ಲಾಸ್ ಏಂಜಲಿಸ್ ಟೈಮ್ಸ್**ಗೆ ಶ್ರೀಲ ಪ್ರಭುಪಾದರ ಪತ್ರ

ಜನವರಿ 14, 1970

ಸಂಪಾದಕರು, ಲಾಸ್ ಏಂಜಲಿಸ್ ಟೈಮ್ಸ್

ಮಾನ್ಯರೆ,

1970ರ ಜನವರಿ 11, ಭಾನುವಾರ ಲಾಸ್ ಏಂಜಲಿಸ್ ಟೈಮ್ಸ್ ಪತ್ರಿಕೆಯಲ್ಲಿ "ಕೃಷ್ಣ ಜಪ" ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾದ ತಮ್ಮ . ಲೇಖನಕ್ಕೆ ಉತ್ತರ ರೂಪವಾಗಿ ನಾನು ಹೇಳಬಯಸುವುದೇನೆಂದರೆ, ಹಿಂದೂ ಧರ್ಮವು ವ್ಯಕ್ತಿರೂಪೀ ದೇವರು ಎಂದರೆ ವಿಷ್ಣುವಿನ ಕಲ್ಪನೆಯನ್ನು ಸಂಪೂರ್ಣವಾಗಿ ಆಧರಿಸಿದ ಧರ್ಮವಾಗಿದೆ. ವ್ಯಕ್ತಿ ಶೂನ್ಯ ದೇವತಾ ಕಲ್ಪನೆ ಇಲ್ಲಿ ಒಂದು ಗೌಣ ಅಂಶ. ಅದು ದೇವರ ಮೂರು ಕಲ್ಪನೆ (ಲಕ್ಷಣ) ಗಳಲ್ಲಿ ಒಂದು. ಪರಮ ಸತ್ಯ ಎಂಬುದು ಆತ್ಯಂತಿಕವಾಗಿ ಪರಮ ದೇವೋತ್ತಮ ಪುರುಷನ ಇರುವಿಕೆಯನ್ನೇ ಸೂಚಿಸುತ್ತದೆ, ಪರಮಾತ್ಮ ಎಂಬ ಕಲ್ಪನೆಯು ಅವನ ಸರ್ವಾಂತರ್ಯಾಮಿತ್ವದ ಏಕದೇಶ ಅಂಶವನ್ನು ಮತ್ತು ಅವನ ನಿರ್ವ್ಯಕ್ತಿ ಕಲ್ಪನೆಯು ಅವನ ಮಹಾಮಹಿಮೆಯನ್ನೂ ಅನಾದಿ ನಿತ್ಯತ್ವವನ್ನೂ ಸೂಚಿಸುತ್ತವೆ. ಈ ಮೂರು ಲಕ್ಷಣಗಳು ಒಟ್ಟಾಗಿ ಒಂದು ಪೂರ್ಣ ತತ್ವವೆನಿಸುತ್ತವೆ.

ಕೃಷ್ಣ ಪಂಥವು ಕ್ರೈಸ್ತ ಮತ್ತು ಹಿಂದೂ ಧರ್ಮಗಳ ಒಂದು ಸಂಯೋಗ, ಒಂದು ಕಾಲ್ಪನಿಕ ಸೃಷ್ಟಿ ಎಂದು ಡಾ. ಜೆ. ಎಫ್. ಸ್ಟಾಲ್ ಅವರು ಹೇಳಿದುದು ಸರಿಯಲ್ಲ. ಕ್ರೈಸ್ತ, ಮಹಮ್ಮದೀಯ ಅಥವಾ ಬೌದ್ಧ ಧರ್ಮಗಳು ಸಾಕಾರವಾದೀ ಧರ್ಮಗಳಾಗಿದ್ದರೆ ಸ್ವಾಗತಾರ್ಹವೇ ಸರಿ. ಆದರೆ ಕ್ರೈಸ್ತ, ಮಹಮ್ಮದೀಯ ಮತ್ತು ಬೌದ್ಧ ಧರ್ಮಗಳು ಬೆಳಕು ಕಾಣುವ ಮೊದಲೇ ಬಹುದೀರ್ಘಕಾಲಕ್ಕಿಂತ ಹಿಂದೆಯೇ ಕೃಷ್ಣ ಧರ್ಮವು ಸಾಕಾರವಾದಿ ಧರ್ಮವಾಗಿ ಅಸ್ತಿತ್ವದಲ್ಲಿತ್ತು. ವೈದಿಕ ಕಲ್ಪನಾನುಸಾರ, ಧರ್ಮ ಎಂಬುದು ವ್ಯಕ್ತಿರೂಪೀ ದೇವರು ತನ್ನ ನಿಯಮಗಳ ರೂಪದಲ್ಲಿ ರಚಿಸಿದ ಮೂಲ ತತ್ವವೇ ಆಗಿರುತ್ತದೆ. ಧರ್ಮ ಮಾನವ ರಚಿತವಾದುದಲ್ಲ, ಅಥವಾ ಮಾನವನಿಗಿಂತ ಶ್ರೇಷ್ಠನಾದ ದೇವರನ್ನುಳಿದು ಬೇರ್ಯಾರೂ ಅದನ್ನು ರಚಿಸುವುದು ಸಾಧ್ಯವಿಲ್ಲ. ಧರ್ಮ ಎಂಬುದು ದೇವರ ಶಾಸನ ಮಾತ್ರ.

ದುರ್ದೈವದಿಂದಲೋ ಏನೋ, ನನಗಿಂತ ಪೂರ್ವದಲ್ಲಿ ಈ ದೇಶಕ್ಕೆ ಕಾಲಿಟ್ಟ ಎಲ್ಲ ಸ್ವಾಮಿಗಳೂ, ವ್ಯಕ್ತಿಗತ ದೇವರ ಪರ್ಯಾಪ್ತಜ್ಞಾನವಿಲ್ಲದೆ ವ್ಯಕ್ತಿರಹಿತ–ದೇವತಾ ಕಲ್ಪನೆಯನ್ನೇ ಹೆಚ್ಚು ಪ್ರತಿಪಾದಿಸುತ್ತ ಬಂದಿದ್ದಾರೆ. ದೇವರು ಮೂಲತಃ ವ್ಯಕ್ತಿಶೂನ್ಯನು, ಅವನು ಅವತಾರ ವೆತ್ತಿದಾಗ ಮಾತ್ರ ನಿರ್ದಿಷ್ಟ ರೂಪ ತಾಳುತ್ತಾನೆ ಎಂದು ಮಂದಮತಿಗಳು ಭಾವಿಸುತ್ತಾರೆ ಎಂಬುದಾಗಿ ಭಗವದ್ಗೀತೆಯಲ್ಲಿ ಹೇಳಲಾಗಿದೆ. ಕೃಷ್ಣಧರ್ಮವಾದರೋ ಪರಮ ದೇವೋತ್ತಮ ಪುರುಷನೇ ಪರಮ ಸತ್ಯಸ್ವರೂಪನೆಂಬ ವೇದ ಪ್ರಮಾಣವನ್ನು ಆಧರಿಸಿದೆ. ಅವನ ಪೂರ್ಣ ವಿಸ್ತರಣೆಯು ಪ್ರತಿಯೊಬ್ಬರ ಹೃದಯದಲ್ಲಿ ಏಕದೇಶೀಯವಾಗಿ ಸನ್ನಿಹಿತವಾಗಿದೆ, ಅವನ ವ್ಯಕ್ತಿರಹಿತ ಬ್ರಹ್ಮಜ್ಯೋತಿಯು ದಿವ್ಯ ಪ್ರಕಾಶವೂ ಶಾಖವೂ ಆಗಿ ಎಲ್ಲ ಕಡೆಯಲ್ಲಿಯೂ ಹರಡಿಕೊಂಡಿದೆ.

ಪರಮ ಸತ್ಯವನ್ನು ಕಂಡುಕೊಳ್ಳುವ ಶೋಧನೆಯ ವೈದಿಕ ಮಾರ್ಗದ ಗುರಿಯೆಂದರೆ ದೇವರ ವ್ಯಕ್ತಿಗತ ರೂಪವನ್ನು ಕಾಣುವುದೇ ಆಗಿದೆಯೆಂದು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಪರಮ ಸತ್ಯದ ಉಳಿದ ಅಂಶಗಳಿಂದ ಎಂದರೆ, ಪರಮಾತ್ಮ ಅಥವಾ ಬ್ರಹ್ಮ ಎಂಬ ರೂಪಗಳಿಂದ ಮಾತ್ರ ತೃಪ್ತರಾಗುವವರು ಜ್ಞಾನ ದರಿದ್ರರಾಗಿರುತ್ತಾರೆ ಎಂದು ಭಾವಿಸ ಲಾಗಿದೆ. ಇತ್ತೀಚೆಗೆ ಶ್ರೀ ಈಶೋಪನಿಷದ್ ಎಂಬ ನಮ್ಮ ವೈದಿಕ ಸಾಹಿತ್ಯವನ್ನು ಪ್ರಕಟಿ ಸಿದ್ದೇವೆ. ಈ ಗ್ರಂಥದಲ್ಲಿ ಈ ಅಂಶವನ್ನು ಕುರಿತು ಸಾಕಷ್ಟು ಚರ್ಚಿಸಲಾಗಿದೆ.

ಹಿಂದೂ ಧರ್ಮದ ಮಟ್ಟಿಗೆ ಹೇಳುವುದಾದರೆ, ಭಾರತದಲ್ಲಿ ಲಕ್ಷಾಂತರ ಕೃಷ್ಣ ದೇವಾ ಲಯಗಳಿವೆ. ಕೃಷ್ಣನನ್ನು ಪೂಜಿಸದ ಒಬ್ಬ ಹಿಂದೂವೂ ಸಿಕ್ಕುವುದಿಲ್ಲ. ಆದುದರಿಂದ ಈ ಕೃಷ್ಣ ಪಂಥವೆಂಬುದು ಕಪೋಲಕಲ್ಪಿತವಾದುದಲ್ಲ. ವಿದ್ವಾಂಸರು, ತತ್ವಜ್ಞಾನಿಗಳು, ವಿವಿಧ ಧರ್ಮೀಯರು ಮತ್ತು ಸಾರ್ವಜನಿಕರು ಈ ಆಂದೋಲನವನ್ನು ಕುರಿತು ವಿಮರ್ಶಾತ್ಮಕ ಅಧ್ಯಯನ ನಡೆಸಲು ನಾವು ಎಲ್ಲರನ್ನು ಆಹ್ವಾನಿಸುತ್ತೇವೆ. ಇದನ್ನು ಗಂಭೀರವಾಗಿ ಪರಿಶೀಲಿ ಸಿದವರು ಈ ಮಹಾ ಆಂದೋಲನದ ಪಾವಿತ್ರ್ಯವನ್ನು ಅರಿತುಕೊಳ್ಳುತ್ತಾರೆ.

ಕೀರ್ತನ ಜಪ ಕ್ರಮವೂ ಪ್ರಮಾಣ ಪುರಸ್ಕೃತವಾದುದಾಗಿದೆ. ಪ್ರೊ. ಸ್ಟಾಲರು ನಿರಂತರ ಕೃಷ್ಣನ ಪವಿತ್ರ ನಾಮ ಜಪ ಮಾಡುವುದರಲ್ಲಿ ಬೇಸರ ವ್ಯಕ್ತಪಡಿಸಿರುವುದು ಈ ಪ್ರಮಾಣ ಪುರಸ್ಸರವಾದ ಕೃಷ್ಣ ಪ್ರಜ್ಞಾ ಆಂದೋಲನದ ಬಗ್ಗೆ ಅವರ ಜ್ಞಾನಾಭಾವಕ್ಕೆ ಸ್ಪಷ್ಟ ನಿದರ್ಶನ ವಾಗಿದೆ. ಕ್ಯಾರಿ ಅವರ ಪಠ್ಯಕ್ರಮಕ್ಕೆ ಸಹಾಯ ಕೋರಿಕೆಯನ್ನು ತಳ್ಳಿಹಾಕುವ ಬದಲು, ಅವರು ಮತ್ತು ಅವರ ಬರ್ಕ್ಲೀ ವಿಶ್ವವಿದ್ಯಾಲಯದ ಇತರ ಎಲ್ಲ ವಿದ್ವಾಂಸರಾದ ಪ್ರೊಫೆಸರರು, ದೈವಹೀನವಾದ ಇಂದಿನ ಸಮಾಜದಲ್ಲಿ ಅತ್ಯವಶ್ಯವಾಗಿರುವ ಈ ಪ್ರಮಾಣ ಪುರಸ್ಸರ ವಾದ ಆಂದೋಲನದ ಸತ್ಯಾಂಶವನ್ನು ಕುರಿತು ಶಾಂತಚಿತ್ತರಾಗಿ ಆಲಿಸಬೇಕು. (ಅನಂತರ ಈ ಪಠ್ಯಕ್ರಮಕ್ಕೆ ಅನುದಾನ ದೊರೆಯಿತು) ವಿಹ್ವಲಗೊಂಡ ಯುವ ಪೀಳಿಗೆಯನ್ನು ಈ ಆಂದೋಲನವೊಂದೇ ರಕ್ಷಿಸಲು ಸಾಧ್ಯ. ಈ ದೇಶದ ಹೊಣೆಯರಿತ ಎಲ್ಲ ಹಿರಿಯರೂ ಈ ದಿವ್ಯ ಆಂದೋಲನವನ್ನು ಅರಿತುಕೊಳ್ಳುವಂತೆ ಮತ್ತು ಎಲ್ಲರ ಪ್ರಯೋಜನಕ್ಕಾಗಿಯೇ ಇದರ ಪ್ರಚಾರಕ್ಕೆ ನಮಗೆ ಯೋಗ್ಯ ಅನುಕೂಲಗಳನ್ನು ಒದಗಿಸಿಕೊಡುವಂತೆ ನಾನು ಎಲ್ಲರನ್ನೂ ಕೇಳಿ ಕೊಳ್ಳುತ್ತೇನೆ.

**ಎ. ಸಿ. ಭಕ್ತಿ ವೇದಾಂತಸ್ವಾಮಿ**
ಹರೇಕೃಷ್ಣ ಆಂದೋಲನದ ಸ್ಥಾಪನಾಚಾರ್ಯರು

ಶ್ರೀಲ ಪ್ರಭುಪಾದರು ಮತ್ತು ಡಾ. ಸ್ಟಾಲರ ನಡುವೆ ನಡೆದ ಪತ್ರ ವ್ಯವಹಾರ.

ಜನವರಿ 23, 1970
**ಸ್ವಾಮಿ ಎ. ಸಿ. ಭಕ್ತಿ ವೇದಾಂತ**

ಪ್ರಿಯ ಸ್ವಾಮೀಜೀ ಅವರೆ,

ನೀವು ಲಾಸ್ ಏಂಜಲಿಸ್ ಟೈಮ್ಸ್‌ಗೆ ಬರೆದ ಪತ್ರದ ಪ್ರತಿಯನ್ನು ನನಗೂ ಕಳಿಸಿದುದಕ್ಕೆ ಆಭಾರಿ. ಅದು "ಡೇಲಿಕ್ಯಾಲಿಫೋರ್ನಿಯನ್" ದಲ್ಲಿಯೂ ಪ್ರಕಟವಾಗಿದೆ. ಸಂದರ್ಶನಗಳ ಮೂಲಕವಾಗಿಯಾಗಲೀ ಅಥವಾ ಪತ್ರಿಕೆಗಳಲ್ಲಿ ಪತ್ರಗಳನ್ನು ಪ್ರಕಟಿಸುವ ಮೂಲಕವಾಗಿ ಯಾಗಲೀ ಧಾರ್ಮಿಕ ಅಥವಾ ತಾತ್ವಿಕ ವಿಷಯಗಳನ್ನು ಕುರಿತು ಚರ್ಚಿಸುವುದರಿಂದ ಪ್ರಚಾರ ಪ್ರಯೋಜನವೊಂದನ್ನು ಬಿಟ್ಟು ಹೆಚ್ಚಿನ ಲಾಭವೇನೂ ಆಗುವುದಿಲ್ಲ ಎಂಬ ವಿಷಯದಲ್ಲಿ ನೀವೂ ನನ್ನೊಡನೆ ಸಹಮತಿಸುವಿರೆಂದು ಭಾವಿಸುತ್ತೇನೆ. ಆದರೆ ನನ್ನ ಎರಡು ಚಿಕ್ಕ ಅಭಿಪ್ರಾಯ ಗಳನ್ನು ವ್ಯಕ್ತಪಡಿಸಲು ಮಾತ್ರ ದಯವಿಟ್ಟು ಅವಕಾಶ ನೀಡಬೇಕು.

ಮೊದಲನೆಯದಾಗಿ, ಕೃಷ್ಣಭಕ್ತಿ ಎಂಬುದು (ವೇದದಷ್ಟು ಪ್ರಾಚೀನವಲ್ಲವೆಂಬುದು ನಿಶ್ಚಿತವಾಗಿದ್ದರೂ) ಪ್ರಾಚೀನವಾದುದು ಮತ್ತು ಅದು ಕ್ರೈಸ್ತ, ಮುಹಮ್ಮದೀಯ ಅಥವಾ ಜುಡೇಯಿಸಮ್‌ನಿಂದ ಎಂದೂ ಪ್ರಭಾವಿತವಾಗಿಲ್ಲ ಎಂಬುದನ್ನು ನಾನು ಬಲ್ಲೆ. (ನಾನು ಈ ಸಂದರ್ಭದಲ್ಲಿ ಬೌದ್ಧ ಧರ್ಮವನ್ನು ಉಲ್ಲೇಖಿಸಿರಲಿಲ್ಲ.) ವ್ಯಕ್ತಿಗತ ಅಥವಾ ವ್ಯಕ್ತಿ ಶೂನ್ಯ ವಾದಗಳು ಹೆಚ್ಚು ಕಡಮೆ ಅಸ್ಪಷ್ಟವೇ ಆಗಿವೆ. ಆದರೆ ಸರಳತೆಯ ದೃಷ್ಟಿಯಿಂದ ಈ ವ್ಯತ್ಯಾಸ ವನ್ನು ಅಂಗೀಕರಿಸಿದರೂ ವ್ಯಕ್ತಿಗತ ದೇವತಾವಾದವನ್ನು (ಸಾಕಾರ) ಒತ್ತಿಹೇಳುವ ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬೆಳೆದವರು ಅದೇ ಬಗೆಯ ಅಂಶವನ್ನು ಪ್ರತಿಪಾದಿಸುವ ಭಾರತೀಯ ಧರ್ಮದ ಕಡೆಗೆ ತಿರುಗಿದುದನ್ನು ಕಂಡು ಆಶ್ಚರ್ಯ ವ್ಯಕ್ತಪಡಿಸಿದೆ. ಪಾಶ್ಚಾತ್ಯ ಏಕದೇವತಾವಾದದಿಂದ ಅಸಂತೃಪ್ತರಾದ ಜನ ಭಾರತೀಯ ಮೂಲದ ನಿರಾಕಾರವಾದದೆಡೆಗೆ ತಿರುಗುತ್ತಿರುವುದು ನನಗೆ ಅಷ್ಟೊಂದು ಆಶ್ಚರ್ಯವನ್ನೇನೂ ಉಂಟು ಮಾಡಲಿಲ್ಲ.

ಎರಡನೆಯದಾಗಿ, ಕೃಷ್ಣನಾಮ ಕೀರ್ತನೆಯ ಬಗ್ಗೆ ನನಗೆ ಬೇಸರವೂ ಇಲ್ಲ, ಬೇಸರವನ್ನು ನಾನು ವ್ಯಕ್ತಪಡಿಸಿಯೂ ಇಲ್ಲ (ಕೆಲವರ ಹಾಗೆ) ನಾನು ಆ ಬಗ್ಗೆ ಸಿಡಿಮಿಡಿಗೊಂಡಿಲ್ಲವಷ್ಟೇ ಅಲ್ಲ, ಪ್ರಾಯಃ ನಾನು ಅದನ್ನು ಮೆಚ್ಚುತ್ತೇನೆ. ಆದರೆ, (ವೇದಗಳ ಮಾತಂತಿರಲಿ) ಭಗವದ್ಗೀ ತೆಯು ಇಂಥ ನಿರಂತರ ಕೀರ್ತನೆಯನ್ನು ಅಗತ್ಯಪಡಿಸಿಲ್ಲವೆಂಬುದು ಮಾತ್ರ ನಿರ್ವಿವಾದವಾದ ಸಂಗತಿಯಾಗಿದೆ. ಗೀತೆಯು ಇದಕ್ಕಿಂತ ಸಂಪೂರ್ಣ ಭಿನ್ನವಾದ ವಿಷಯಗಳನ್ನು ಕುರಿತದ್ದಾಗಿದೆ. ಈ ವಿಷಯಗಳನ್ನು ನಾನು ಭಾರತೀಯ ತತ್ವಜ್ಞಾನವನ್ನು ಕುರಿತ ಪಠ್ಯಕ್ರಮ ಬೋಧನೆಯಲ್ಲಿ ಸಾಕಷ್ಟು ಸುದೀರ್ಘವಾಗಿ ಪ್ರಸ್ತಾವಿಸಿದ್ದೇನೆ.

ವಂದನೆಗಳೊಡನೆ,

ನಿಮ್ಮ ವಿಶ್ವಾಸಿ,
**ಜೆ. ಎಫ್. ಸ್ಟಾಲ್**
ತತ್ವಜ್ಞಾನ ಮತ್ತು ದಕ್ಷಿಣ ಏಷಿಯಾ ಭಾಷೆಗಳ ಪ್ರಾಧ್ಯಾಪಕ

ಜನವರಿ 30, 1970
**ಜೆ. ಎಫ್. ಸ್ಟಾಲ್,**
ತತ್ವಜ್ಞಾನ ಮತ್ತು ದಕ್ಷಿಣ ಏಷಿಯಾ ಭಾಷೆಗಳ ಪ್ರಾಧ್ಯಾಪಕರು,
ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯ, ಬರ್ಕ್ಲೆ, ಕ್ಯಾಲಿಫೋರ್ನಿಯಾ.

ಪ್ರಿಯ ಪ್ರೊಫೆಸರ್ ಸ್ಟಾಲರೇ,

ನಿಮ್ಮ ಜನವರಿ 23ರ ಪತ್ರಕ್ಕೆ ನಾನು ಋಣಿ. ನಿಮ್ಮ ಪತ್ರದ ಕೊನೆಯ ಪ್ಯಾರಾದಲ್ಲಿ ನೀವು (ಇತರ ಕೆಲವರ ಹಾಗೆ) ಹರೇಕೃಷ್ಣ ಮಂತ್ರ ಜಪದಿಂದ ಸಿಡಿಮಿಡಿಗೊಳ್ಳುವುದಿಲ್ಲ. ಬದಲಾಗಿ ಅದನ್ನು ಮೆಚ್ಚುತ್ತೀರಿ ಎಂದು ಪ್ರಸ್ತಾವಿಸಿದ್ದೀರಿ. ಇದರಿಂದ ನನಗೆ ಬಹಳ ಸಂತೋಷವಾಗಿದೆ. ಈ ಮೂಲಕ ಮರಳಿ ದೇವತ್ವದೆಡೆಗೆ ಎಂಬ ನಮ್ಮ ಪತ್ರಿಕೆಯ 28ನೆಯ ಸಂಚಿಕೆಯ ಪ್ರತಿಯನ್ನು ಕಳಿಸುತ್ತಿದ್ದೇನೆ. (ಓಹಿಯೋ ರಾಜ್ಯ ವಿಶ್ವವಿದ್ಯಾಲಯದ ಕಾರ್ಯಕ್ರಮವೊಂದರಲ್ಲಿ) ವಿದ್ಯಾರ್ಥಿಗಳೆಲ್ಲರೂ ಈ ಮಂತ್ರ ಜಪ ಪದ್ಧತಿಗೆ ತೀರಾ ಹೊಸಬರಾಗಿದ್ದರೂ ಕೂಡ ಅವರು ಈ ಜಪ ವಿಧಾನವನ್ನು ಅದೆಷ್ಟು ಮೆಚ್ಚಿಕೊಂಡರೆಂಬುದನ್ನು ನೀವು ಪತ್ರಿಕೆಯಿಂದ ತಿಳಿದುಕೊಳ್ಳಬಹುದು ನಿಜವಾಗಿಯೂ ಈ ಜಪ ವಿಧಾನವು ಹೃದಯತೋಷಕವಾದುದಾಗಿದೆ ಮತ್ತು ಸರ್ವೇಸಾಮಾನ್ಯವಾಗಿ ಜನರಲ್ಲಿ ಆಧ್ಯಾತ್ಮಿಕ ಪ್ರಜ್ಞೆಯನ್ನು ಅಥವಾ ಕೃಷ್ಣ ಪ್ರಜ್ಞೆಯನ್ನುಂಟುಮಾಡಲು ಅತ್ಯುತ್ತಮ ಸಾಧನವಾಗಿದೆ.

ಇದು ಆಧ್ಯಾತ್ಮ ತಿಳಿವಿಗೆ ಅತ್ಯಂತ ಸುಲಭವಾದ ಮಾರ್ಗ ಮತ್ತು ಇದನ್ನು ವೇದಗಳೂ ಪುರಸ್ಕರಿಸಿವೆ. ಭೌತಿಕ ಅಸ್ತಿತ್ವದ ಸಮಸ್ಯೆಗಳಿಂದ ಮಾನವನನ್ನು ಪಾರುಮಾಡಲು ಹರಿ (ಕೃಷ್ಣ) ನಾಮಜಪವೇ ಏಕೈಕ ಮಾರ್ಗ, ಕಲಿಯುಗದಲ್ಲಿ ಇದನ್ನುಳಿದು ಬೇರೊಂದು ಮಾರ್ಗವಿಲ್ಲ, ಬೇರೊಂದು ಮಾರ್ಗವಿಲ್ಲ, ಬೇರೊಂದು ಮಾರ್ಗವಿಲ್ಲ ಎಂದು ಬೃಹನ್ನಾರದೀಯ ಪುರಾಣದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.

ಪಾಶ್ಚಾತ್ಯ ಸಂಸ್ಕೃತಿಯು ಏಕದೇವತಾನಿಷ್ಠವಾದುದು, ಆದರೆ ನಿರಾಕಾರವಾದೀ ಭಾರತೀಯ ಊಹಾಪೋಷಕರಿಂದ ಪಾಶ್ಚಾತ್ಯರು ದಾರಿತಪ್ಪುತ್ತಿದ್ದಾರೆ. ಪಾಶ್ಚಾತ್ಯರಿಗೆ ಏಕದೇವತಾ ತತ್ವವನ್ನು ಚೆನ್ನಾಗಿ ತಿಳಿಸಿಕೊಡುತ್ತಿಲ್ಲವಾದುದರಿಂದ ಅವರು ಹತಾಶರಾಗುತ್ತಿದ್ದಾರೆ. ಉಪದೇಶ ಮತ್ತು ತಿಳಿವಿನ ಈ ವಿಧಾನದಿಂದ ಅವರಿಗೆ ತೃಪ್ತಿದೊರಕಿಲ್ಲ. ಅವರಿಗೆ ಪಾಶ್ಚಾತ್ಯ ಏಕದೇವತಾವಾದವನ್ನು ಅರಿತುಕೊಳ್ಳಲು ವೈದಿಕ ಪದ್ಧತಿಯ ಮೇರೆಗೆ ನಿಜವಾದ ತರಬೇತಿ ದೊರೆಯುತ್ತಿರುವುದರಿಂದ, ಈ ಕೃಷ್ಣ ಪ್ರಜ್ಞಾ ಆಂದೋಲನವು ಅವರಿಗೊಂದು ವರವಾಗಿ ಪರಿಣಮಿಸಿದೆ. ನಾವು ಕೇವಲ ತಾತ್ವಿಕ ಚರ್ಚೆಗಳನ್ನು ಮಾತ್ರ ಮಾಡದೆ, ವಿಧ್ಯುಕ್ತವಾದ ವೈದಿಕ ಪದ್ಧತಿಯಲ್ಲಿ ಶಿಕ್ಷಣ ಹೊಂದುತ್ತೇವೆ.

ಆದರೆ (ವೇದಗಳ ಮಾತಂತಿರಲಿ) ಭಗವದ್ಗೀತೆಯು ಇಂಥ ನಿರಂತರ ಜಪವನ್ನು ಅಗತ್ಯಪಡಿಸಿಲ್ಲ ಎಂಬುದು ನಿರ್ವಿವಾದವಾದ ಸಂಗತಿ ಎಂದು ನೀವು ನಿಮ್ಮ ಪತ್ರದ ಕೊನೆಯ ಪ್ಯಾರಾದಲ್ಲಿ ಹೇಳಿರುವುದು ನನಗೆ ಆಶ್ಚರ್ಯವನ್ನುಂಟು ಮಾಡಿದೆ. ನೀವು ಅದೇ ಬಗೆಯ ಇನ್ನೂ ಅನೇಕ ಶ್ಲೋಕಗಳಲ್ಲದೆ ಭಗವದ್ಗೀತೆಯ ಈ ಮುಂದಿನ ಶ್ಲೋಕವನ್ನು ಗಮನಿಸಿದಂತೆ ಕಾಣುವುದಿಲ್ಲ.

ಸತತಂ ಕೀರ್ತಯಂತೋ ಮಾಮ್ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ (ಭಗವದ್ಗಿತಾ 9–14)

ಮಾಯಾಪಾಶಮುಕ್ತರಾಗಿ ಭಗವತ್ ಸಾಕ್ಷಾತ್ಕಾರದಲ್ಲಿ ಪರಿಪೂರ್ಣರಾದ ಮಹಾತ್ಮರ ದಿನಚರಿಯನ್ನು ಇಲ್ಲಿ ವರ್ಣಿಸಲಾಗಿದೆ : ಸತತಂ ಕೀರ್ತಯಂತೋಮಾಮ್–ಅವರು ಸದಾ (ಸತತಮ್) ನನ್ನ ಗುಣಕೀರ್ತನ ಮಾಡುತ್ತಿರುತ್ತಾರೆ (ಕೀರ್ತಯಂತಃ) ಮತ್ತು–ನಿತ್ಯಯುಕ್ತಾ ಉಪಾಸತೇ–ಸದಾ ನನ್ನನ್ನು (ಕೃಷ್ಣ) ಪೂಜಿಸುತ್ತಿರುತ್ತಾರೆ.

ಹೀಗಿರುವಾಗ "ನಿರ್ವಿವಾದ" ಎಂದು ನೀವು ಹೇಗೆ ಹೇಳುವಿರಿ ಎಂಬುದು ನನಗೆ ತಿಳಿಯುತ್ತಿಲ್ಲ. ನೀವು ಈ ಬಗ್ಗೆ ವೇದಗಳಿಂದ ಉಲ್ಲೇಖಗಳನ್ನು ಬಯಸುವಿರಾದರೆ ನಾನು ಅಂಥ ಸಾಕಷ್ಟು ಉಲ್ಲೇಖಗಳನ್ನು ನೀಡಬಲ್ಲೆ. ವೇದಗಳಲ್ಲಿ ಮುಖ್ಯವಾಗಿ ದಿವ್ಯ ಸ್ಪಂದನ ಎನಿಸಿಕೊಂಡ ಓಂಕಾರವೆಂಬುದೂ ಕೃಷ್ಣನೇ. ಪ್ರಣವ ಓಂಕಾರವೆಂಬುದು ವೇದಗಳ ದಿವ್ಯ ಸಾರವೆನಿಸಿದೆ. ವೇದಗಳನ್ನು ಅನುಸರಿಸುವುದು ಎಂದರೆ, ವೇದಮಂತ್ರಗಳನ್ನು ಜಪಿಸುವುದು ಮತ್ತು ಯಾವ ವೇದಮಂತ್ರವೂ ಓಂಕಾರವಿಲ್ಲದೆ ಪೂರ್ತಿಯಾಗುವುದಿಲ್ಲ. ಓಂಕಾರ ಎಂಬುದು ಪರಮಾತ್ಮನನ್ನು ಪ್ರತಿನಿಧಿಸುವ ಅತ್ಯಂತ ಮಂಗಲಮಯ ಶಬ್ದವಾಗಿದೆಯೆಂದು ಮಂಡೂಕ್ಯ ಉಪನಿಷತ್ತಿನಲ್ಲಿ ಹೇಳಲಾಗಿದೆ. ಇದು ಅಥರ್ವವೇದದಲ್ಲಿಯೂ ಮತ್ತೆ ದೃಢೀಕರಿಸಲ್ಪಟ್ಟಿದೆ. ಓಂಕಾರವು ಭಗವಂತನ ಶಬ್ದರೂಪವಾಗಿದೆ. ಅಂತೆಯೇ ಅದು ವೇದಗಳಲ್ಲಿ ಪ್ರಧಾನ ಶಬ್ದವೆನಿಸಿಕೊಂಡಿದೆ. ಈ ಬಗ್ಗೆ ಸರ್ವೋತ್ತಮನಾದ ಕೃಷ್ಣನೇ, "ಪ್ರಣವಃ ಸರ್ವವೇದೇಷು" ಸರ್ವವೇದ ಮಂತ್ರಗಳಲ್ಲಿ ಓಂ ಎಂಬ ಅಕ್ಷರವೇ ನಾನು ಎಂದಿದ್ದಾನೆ. (ಭ. ಗೀ. 7-8) ಭಗವದ್ಗೀತೆಯ 15ನೆಯ ಅಧ್ಯಾಯದ 15ನೆಯ ಶ್ಲೋಕದಲ್ಲಿ, "ನಾನು ಎಲ್ಲರ ಹೃದಯದಲ್ಲಿ ಸ್ಥಿತನಾಗಿದ್ದೇನೆ. ಎಲ್ಲ ವೇದಗಳಿಂದಲೂ ನಾನೇ ತಿಳಿಯಲ್ಪಡುವವನು ; ನಾನು ವೇದಾಂತಗಳ ಕರ್ತೃ ಮತ್ತು ನಾನು ವೇದಗಳನ್ನು ಇದ್ದಂತೆ ಬಲ್ಲೆ" ಎಂದು ಕೃಷ್ಣನು ಹೇಳುತ್ತಾನೆ. ಪ್ರತಿಯೊಬ್ಬರ ಹೃದಯದಲ್ಲಿ ತಿಷ್ಠನಾದ ಭಗವಂತವನ್ನು ಮುಂಡ್ವಕ ಮತ್ತು ಶ್ವೇತಾಶ್ವತರ ಉಪನಿಷತ್ತುಗಳಲ್ಲಿ **ದ್ವಾಸುಪರ್ಣ ಸಯುಜಾ ಸಖಾಯಾ** ಎಂದು ವರ್ಣಿಸಲಾಗಿದೆ. ಸರ್ವೋತ್ತಮನಾದ ಭಗವಂತನು ಮತ್ತು ವ್ಯಕ್ತಿಗತವಾದ ಜೀವಾತ್ಮನು ಉಭಯರೂ ಈ ದೇಹದಲ್ಲಿ ಮರದಲ್ಲಿ ಎರಡು ಗೆಳೆಯ ಪಕ್ಷಿಗಳ ಹಾಗೆ ಕುಳಿತಿದ್ದಾರೆ. ಅವುಗಳಲ್ಲಿ ಒಂದು ಪಕ್ಷಿಯು ಆ ಮರದ ಹಣ್ಣುಗಳನ್ನು ಎಂದರೆ ಭೌತಿಕ ಕರ್ಮಫಲಗಳನ್ನು ತಿನ್ನುತ್ತಿದೆ, ಮತ್ತೊಂದು ಪಕ್ಷಿಯು ಎಂದರೆ ಪರಮಾತ್ಮನು ಅದಕ್ಕೆ ಸಾಕ್ಷಿಯಾಗಿ ಕುಳಿತಿದ್ದಾನೆ.

ಆದುದರಿಂದ, ಭಗವಂತನನ್ನು ಎಂದರೆ ಕೃಷ್ಣನನ್ನು ಅರಿತುಕೊಳ್ಳುವುದೇ ವೇದಾಧ್ಯಯನದ ಮುಖ್ಯ ಉದ್ದೇಶವಾಗಿದೆ. ಈ ಅಂಶವನ್ನು ಭಗವದ್ಗೀತೆಯ 8ನೆಯ ಅಧ್ಯಾಯದ 13ನೆಯ ಶ್ಲೋಕದಲ್ಲಿ ಒತ್ತಿ ಹೇಳಲಾಗಿದೆ. ಅದರಲ್ಲಿ ಯೋಗಧ್ಯಾನ ಪದ್ಧತಿಯಿಂದ ಕೊನೆಯಲ್ಲಿ ಪವಿತ್ರ ಓಂಕಾರ ಶಬ್ದೋಚ್ಚಾರದಿಂದ ಮನುಷ್ಯನು ಭಗವಂತನ ಪರಮ ಆಧ್ಯಾತ್ಮ ಲೋಕವನ್ನು ಹೊಂದುತ್ತಾನೆ ಎಂದು ಹೇಳಲಾಗಿದೆ. ನೀವು ಖಂಡಿತವಾಗಿಯೂ ಓದಿರಬಹುದಾದ ವೇದಾಂತ ಸೂತ್ರಗಳಲ್ಲಿ ನಾಲ್ಕನೆಯ ಅಧಿಕರಣದ 22ನೆಯ ಸೂತ್ರವು **ಅನಾವೃತ್ತಿಃ ಶಬ್ದಾತ್** ಎಂದರೆ "**ಶಬ್ದೋಚ್ಚಾರ**ದಿಂದ ಮನುಷ್ಯನು ಮುಕ್ತನಾಗುತ್ತಾನೆ" ಎಂದು ನಿಶ್ಚಯವಾಗಿ ಹೇಳಿದೆ.

ಭಕ್ತಿಯುತ ಸೇವೆಯಿಂದ, ಪರಮ ದೇವೋತ್ತಮ ಪುರುಷನನ್ನು ಅರಿತು ಕೊಳ್ಳುವುದರಿಂದ ಮನುಷ್ಯನು ದೇವರ ಧಾಮವನ್ನು ತಲಪಬಹುದು ಮತ್ತು ಅಲ್ಲಿಂದ ಅವನು ಈ ಭೌತಿಕ ಪ್ರಪಂಚಕ್ಕೆ ಎಂದೂ ಹಿಂದಿರುಗುವುದಿಲ್ಲ. ಇದು ಹೇಗೆ ಸಾಧ್ಯ ? ಸದಾ ಭಗವನ್ನಾಮ ಜಪವೇ ಇದಕ್ಕೆ ಉತ್ತರ.

ಇದನ್ನು ಮಾದರಿ ಶಿಷ್ಯನಾದ ಅರ್ಜುನನು ಒಪ್ಪಿಕೊಂಡಿದ್ದಾನೆ. ಅವನು, ಯೋಗೇಶ್ವರನಾದ ಕೃಷ್ಣನಿಂದ ಆಧ್ಯಾತ್ಮ ವಿದ್ಯೆಯನ್ನು ಪರಿಪೂರ್ಣವಾಗಿ ಮತ್ತು ನಿಶ್ಚಯವಾಗಿ ತಿಳಿದುಕೊಂಡವನಾಗಿದ್ದಾನೆ. ಅರ್ಜುನನು ಕೃಷ್ಣನನ್ನು ಪರಬ್ರಹ್ಮನೆಂದು ಅರಿತು, **ಸ್ಥಾನೇ ಹೃಷಿಕೇಶ** ಎಂದು ಸಂಬೋಧಿಸುತ್ತಾನೆ. "ವಿಶ್ವವು ನಿನ್ನ ನಾಮ ಶ್ರವಣದಿಂದ ಆನಂದಮಯವಾಗಿರುತ್ತದೆ. ಆದರಿಂದ ಎಲ್ಲರೂ ನಿನ್ನಲ್ಲಿ ಅನುರಕ್ತರಾಗುತ್ತಾರೆ" (ಭ. ಗೀ. 11-36). ಜಪವಿಧಾನವು ಪರಮ ಸತ್ಯ ಸ್ವರೂಪನಾದ ದೇವೋತ್ತಮ ಪುರುಷನನ್ನು ಹೊಂದಲು ನೇರ ಸಾಧನವೆಂದು ಇಲ್ಲಿ ಅಧಿಕೃತವಾಗಿ ಹೇಳಲಾಗಿದೆ. ಕೇವಲ ಕೃಷ್ಣನ ನಾಮ ಸಂಕೀರ್ತನೆಯಿಂದಲೇ ಪರಮಾತ್ಮನಾದ ಕೃಷ್ಣನಿಂದ ಜೀವಾತ್ಮನು ಕೃಷ್ಣಧಾಮಕ್ಕೆ ಹಿಂದಿರುಗಲು ಆಕರ್ಷಿತನಾಗುತ್ತಾನೆ.

ನಾರದ ಪಂಚರಾತ್ರದಲ್ಲಿ ಎಲ್ಲ ವೈದಿಕ ಕರ್ಮಗಳು, ಮಂತ್ರಗಳು ಮತ್ತು ಜ್ಞಾನವು ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ಎಂಬ ಎಂಟು ಶಬ್ದಗಳಲ್ಲಿ ಅಡಕವಾಗಿವೆಯೆಂದು ಹೇಳಲಾಗಿದೆ. ಅದೇ ಪ್ರಕಾರ ಕಲಿ ಸಂತರಣ ಉಪನಿಷತ್ತಿನಲ್ಲಿ, ಹರೇಕೃಷ್ಣ ಹರೇಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ, ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂಬ ಈ ಹದಿನಾರು ಶಬ್ದಗಳು ಕಲಿಯುಗದ ಭೌತಿಕ ಪ್ರಭಾವದ ಕಲ್ಮಷವನ್ನು ನಿವಾರಿಸಲು ವಿಶೇಷವಾಗಿ ಉದ್ದೇಶಿತವಾಗಿವೆ ಎಂದು ಹೇಳಲಾಗಿದೆ.

ಈ ಎಲ್ಲ ಅಂಶಗಳನ್ನು ಭಗವಾನ್ ಚೈತನ್ಯರ ಉಪದೇಶಗಳು ಎಂಬ ನನ್ನ ಪುಸ್ತಕದಲ್ಲಿ ಸುದೀರ್ಘವಾಗಿ ವಿವರಿಸಿದ್ದೇನೆ.

ಆದುದರಿಂದ, ಈ ನಾಮ ಜಪ ವಿಧಾನವು ಜೀವನದ ಪರಿಪೂರ್ಣತೆಯನ್ನು ಸಾಧಿಸಲು ಪವಿತ್ರವಾದ ಮಾರ್ಗವಷ್ಟೇ ಅಲ್ಲದೆ, ಅತ್ಯಂತ ಮಹಾ ವೈದಿಕ ವಿದ್ವಾಂಸರಾದ ಮತ್ತು ಭಕ್ತರಾದ ಭಗವಾನ್ ಚೈತನ್ಯರು ಪ್ರಾರಂಭಿಸಿದ ಅಧಿಕೃತ ವೈದಿಕ ವಿಧಾನವಾಗಿದೆ (ಭಗವಾನ್ ಚೈತನ್ಯರನ್ನು ಕೃಷ್ಣನ ಅವತಾರವೆಂದು ನಾವು ಪರಿಗಣಿಸುತ್ತೇವೆ). ನಾವು ಕೇವಲ ಅವರ ಪ್ರಮಾಣವನ್ನು ಅನುಸರಿಸುತ್ತಿದ್ದೇವೆ.

ಕೃಷ್ಣಪ್ರಜ್ಞಾ ಆಂದೋಲನದ ವ್ಯಾಪ್ತಿಯು ವಿಶ್ವವ್ಯಾಪಕವಾಗಿದೆ. ಮನುಷ್ಯನು ಜ್ಞಾನಾನಂದಮಯವಾದ ಅನಾದಿನಿತ್ಯವಾದ ತನ್ನ ಮೂಲ ಆಧ್ಯಾತ್ಮ ಸ್ವರೂಪವನ್ನು ಪಡೆದುಕೊಳ್ಳುವ ವಿಧಾನವು ಶುಷ್ಕ ತತ್ವಬೋಧೆಯಾಗಿಲ್ಲ, ಆಧ್ಯಾತ್ಮ ಜೀವನವನ್ನು ವೇದಗಳಲ್ಲಿ ಎಲ್ಲಿಯೂ ಕೇವಲ ಶುಷ್ಕ ತಾತ್ವಿಕ ವ್ಯಕ್ತಿಶೂನ್ಯವಾದುದೆಂದು ಹೇಳಿಲ್ಲ. ಭಗವಂತನಲ್ಲಿ ಶುದ್ಧ ಪ್ರೇಮವನ್ನು ಬೆಳೆಸಿಕೊಳ್ಳುವುದೇ ವೇದಗಳ ಪರಮ ಧ್ಯೇಯವಾಗಿದೆ. ಈ ಆನಂದ ಸಿದ್ಧಿಯನ್ನು ಕೃಷ್ಣ ಪ್ರಜ್ಞೆಯ ಮೂಲಕ ಎಂದರೆ ಹರೇ ಕೃಷ್ಣ ಮಂತ್ರ ಜಪಿಸುವ ಮೂಲಕ ವಾಸ್ತವಿಕವಾಗಿ

ಪಡೆದುಕೊಳ್ಳಬಹುದಾಗಿದೆ. ಭಗವತ್ಪ್ರೇಮವೇ ಆಧ್ಯಾತ್ಮ ಸಾಕ್ಷಾತ್ಕಾರದ ಏಕೈಕ ಗುರಿ. ಅಂತೆಯೇ ಸಮಗ್ರ ವೇದಗಳು ಈ ದಿವ್ಯ ಜ್ಞಾನದ ವಿಷಯದಲ್ಲಿ ಏಕೈಕ ಉದ್ದೇಶವನ್ನು ಹೊಂದಿವೆ. ವೇದಗಳ ನಿಜವಾದ ಉಪದೇಶವನ್ನು ಬಿಟ್ಟು, ಅನೇಕರು ನೀಡುವ ಅಪರಿಪೂರ್ಣ ಅಭಿಪ್ರಾಯಗಳು ಭಗವದ್ಗೀತೆಯ ಸ್ವರೂಪವನ್ನು ವಿಚ್ಛಿದ್ರ ಗೊಳಿಸಿವೆ. ಆ ಪಾತವು ಕಂಡು ಬರುವ ವೇದಗಳ ಎಲ್ಲ ವಿರುದ್ಧಾರ್ಥಗಳನ್ನು ಸರಿಹೊಂದಿಸಿ ಸಮನ್ವಯಗೊಳಿಸುವುದೇ ವೇದಗಳ ಎಂದರೆ ಕೃಷ್ಣ ಪ್ರಜ್ಞೆಯ (ಭಗವನ್ ಪ್ರೀತಿಯ) ಸಾರಸರ್ವಸ್ವವಾಗಿದೆ.

ನಿಮಗೆ ಮತ್ತೊಮ್ಮೆ ಧನ್ಯವಾದಗಳು,

ನಿಮ್ಮ ವಿಶ್ವಾಸಿ,
**ಎ. ಸಿ. ಭಕ್ತಿವೇದಾಂತಸ್ವಾಮಿ**

ಫೆಬ್ರುವರಿ 8, 1970
ಸ್ವಾಮಿ ಎ. ಸಿ.ಭಕ್ತಿವೇದಾಂತ

ಪ್ರಿಯ ಸ್ವಾಮೀಜಿಯವರೆ,

'ಮರಳಿ ದೇವತ್ವದೆಡೆಗೆ' ಎಂಬ ಪತ್ರಿಕೆಯ ಇತ್ತೀಚಿನ ಸಂಚಿಕೆಯನ್ನು ಕಳಿಸುತ್ತ ನೀವು ನನಗೆ ಬರೆದ ಸುದೀರ್ಘವಾದ ಮತ್ತು ಸೊಗಸಾದ ಜನವರಿ 30ರ ನಿಮ್ಮ ಕೃಪಾಪೂರ್ಣ ಪತ್ರಕ್ಕೆ ನಾನು ಬಹುವಾಗಿ ಋಣಿಯಾಗಿದ್ದೇನೆ. ಈ ತನಕ ಇಲ್ಲಿಯ ನಿಮ್ಮ ಸಂಘದ ಸದಸ್ಯರೊಂದಿಗೆ ನಾನು ಕೆಲವು ಚರ್ಚೆಗಳನ್ನು ನಡೆಸಿದ್ದೇನೆ. ಆದರೆ ಆ ಚರ್ಚೆಗಳು ನನ್ನ ದೃಷ್ಟಿಯಿಂದ ಪೂರ್ಣ ತೃಪ್ತಿಕರವೆನಿಸಿಲ್ಲ. ಈಗ ನಿಮ್ಮ ಬಹು ಪ್ರಮಾಣಭೂತವಾದ ಪತ್ರವು ನನ್ನ ಕೈಸೇರಿದ್ದು, ನನ್ನ ಚರ್ಚೆಯು ಮೇಲ್ಮಟ್ಟಕ್ಕೆ ಸಾಗುತ್ತಿದೆ.

ಆದರೂ, ನೀವು ಉದಾಹರಿಸಿದ ಎಲ್ಲ ವೇದಗಳು ಕೇವಲ ಕೃಷ್ಣ ನಾಮವನ್ನೇ ಜಪಿಸುವಂತೆ ವಿಧಿಸಿವೆಯೆಂಬ ಬಗ್ಗೆ ನನಗಿನ್ನೂ ಸಮಾಧಾನಕರವಾದ ಉತ್ತರ ನಿಮ್ಮಿಂದ ದೊರೆತಿಲ್ಲವೆಂಬುದು ನನ್ನ ಆತಂಕವಾಗಿದೆ. ಕೆಲವು ಮಹತ್ವದ ವೇದಗಳನ್ನು ಮಾತ್ರ ನಾನಿಲ್ಲಿ ಉದಾಹರಿಸ ಬಯಸುತ್ತೇನೆ.

ಭಗವದ್ಗೀತೆಯಲ್ಲಿ (9–14) **ಕೀರ್ತಯಂತಃ** ಎಂಬುದನ್ನು ಕೃಷ್ಣನಾಮ ಜಪವೆಂದೇ ಅರ್ಥ ಮಾಡಬೇಕಾಗಿಲ್ಲ. ಗುಣಗಾನ ಮಾಡುವುದು, ಜಪ ಮಾಡುವುದು, ಪಠನ ಮಾಡುವುದು, ಸಂಭಾಷಿಸುವುದು ಎಂದೂ ಹಾಡುವುದು, ಸ್ತುತಿಸುವುದು, ವರ್ಣಿಸುವುದು ಅಥವಾ ಸಂವಾದ ಮಾಡುವುದು ಎಂದೂ ಅರ್ಥವಾಗಬಹುದು. ವ್ಯಾಖ್ಯಾನಕಾರರು ಈ ರೀತಿಯಾಗಿಯೇ ಅರ್ಥ ಮಾಡಿದ್ದಾರೆ. ಶಂಕರರು ತಮ್ಮ ವ್ಯಾಖ್ಯಾನದಲ್ಲಿ ಕೇವಲ ಈ ಶಬ್ದವನ್ನು ಪುನರುಚ್ಚರಿಸಿದ್ದಾರೆ ಅಷ್ಟೆ. ಆದರೆ ಆನಂದಗಿರಿಯು ತನ್ನ ವ್ಯಾಖ್ಯೆಯಲ್ಲಿ ಕೀರ್ತನ ಎಂಬುದನ್ನು **ವೇದಾಂತ ಶ್ರವಣಂ ಪ್ರಣವ ಜಪಶ್ಚ** ಎಂದರೆ ವೇದಾಂತ ಶ್ರವಣ ಮಾಡುವುದು ಮತ್ತು ಓಂಕಾರ ಪಠನ ಮಾಡುವುದು" ಎಂದಿದ್ದಾನೆ. (ಭಗವದ್ಗೀತೆಯಲ್ಲಿ ಓಂಕಾರ ಎಂದರೆ ಕೃಷ್ಣ ಎಂದಿದ್ದರೂ ಕೃಷ್ಣ ಎಂಬುದು ಇನ್ನೂ ಅನೇಕ ವಸ್ತು ಸೂಚಕವಾಗಿದೆ. ಇದು ಸ್ಮೃತಿಯಾದ ಭಗವದ್ಗೀತೆ

ಯಲ್ಲಿ ಹೇಳಿದೆಯೇ ಹೊರತು ಶ್ರುತಿಯೆನಿಸಿದ ವೇದದಲ್ಲಿ ಇಲ್ಲ. ಹನೂಮಾನ್ ಎಂಬ ಮತ್ತೊಬ್ಬ ವ್ಯಾಖ್ಯಾನಕಾರನು ತನ್ನ ಪೈಶಾಚ ಭಾಷ್ಯದಲ್ಲಿ **ಕೀರ್ತಯಂತಃ** ಎಂದರೆ ಕೇವಲ ಭಾಷಮಾನಃ ಎಂದರೆ (ಕುರಿತು) ಮಾತನಾಡುವುದು ಎಂದು ಹೇಳುತ್ತಾನೆ.

ನನ್ನ ಭಾವನೆಯಲ್ಲಿ, ಈ ಶಬ್ದದ ನಿರ್ದಿಷ್ಟ ಅರ್ಥಕ್ಕಿಂತ ಮಹತ್ವದ್ದೆಂದರೆ, ಪ್ರತಿಯೊಬ್ಬನೂ ಸದಾ ಕೀರ್ತನದಲ್ಲಿಯೇ ತೊಡಗಿರಬೇಕೆಂಬುದು ಇಡೀ ಶ್ಲೋಕಾಭಿಪ್ರಾಯವಾಗಿಲ್ಲ. ಕೆಲವು ಜನ ಮಹಾತ್ಮರು ಹಾಗೆ ಮಾಡುತ್ತಾರೆ ಎಂದು ಮಾತ್ರ ಅದು ಸೂಚಿಸುತ್ತದೆ. "ಅನ್ಯೇ ಜ್ಞಾನ ಯಜ್ಞೇನಯಜಂತೋ ಮಾಮ್" ಎಂದರೆ ಇತರರು ಜ್ಞಾನಾರಾಧನೆಯ ಮೂಲಕ.... ನನ್ನನ್ನು ಆರಾಧಿಸುತ್ತಾರೆ ಎಂಬ ಮುಂದಿನ ಶ್ಲೋಕದಿಂದಲೇ ಈ ಅಂಶವು ಸ್ಪಷ್ಟವಾಗುತ್ತದೆ. ಭಗವದ್ಗೀತೆಯು ವಿಶಾಲಾರ್ಥ ಭೂಮಿಕೆಯನ್ನು ಹೊಂದಿದೆ ಮತ್ತು ವೈವಿಧ್ಯಮಯ ಧರ್ಮ ಮಾರ್ಗ ಸಹಿಷ್ಣುವಾಗಿದ್ದರೂ, ಅದು ಇತರ ಎಲ್ಲ ಅಂಶಗಳನ್ನು ಬಿಟ್ಟು ಸರ್ವ ಫಲತ್ಯಾಗ[1] ವೊಂದನ್ನೇ ಒತ್ತಿ ಹೇಳುತ್ತಿದೆ.

ಕೊನೆಯದಾಗಿ, ವೇದಾಂತ ಸೂತ್ರದ ಕೊನೆಯ ಸೂತ್ರವು ಅನಾವೃತ್ತಿಃ ಶಬ್ದಾತ್.... ಎಂಬಲ್ಲಿ ಶಬ್ದಾತ್ ಎಂಬುದು ಸಂದರ್ಭ ಮತ್ತು ವ್ಯಾಖ್ಯಾನಕಾರರ ದೃಷ್ಟಿಯಿಂದ ನೋಡಿದಾಗ ಸ್ಪಷ್ಟವಾಗುವಂತೆ, ಶ್ರುತಿಗಳನ್ನು ಅಥವಾ ಗೋಚರವಾದ ವೇದಗಳನ್ನು ಸೂಚಿಸುತ್ತದೆ. ಇದನ್ನು ಎಂದರೆ "ವೇದಗಳ ಪ್ರಕಾರ ಪುನರಾವೃತ್ತಿ ಎಂಬುದಿಲ್ಲ" ಎಂಬ ವಾದವನ್ನು ಸಮರ್ಥಿಸಲು (ಇತಿ ಆದಿ ಶಬ್ದೇಭ್ಯಃ, "ಈ ಶಬ್ದಗಳ ಅನುಸಾರ" ಎಂಬುದರಿಂದ ಕೊನೆಗೊಳ್ಳುವ) ಅನೇಕ ಮೂಲ ಪಾಠಗಳನ್ನು ಶಂಕರರು ಉದಾಹರಿಸುತ್ತಾರೆ. "ಮಂತ್ರಾರ್ಥವಾದಾದಿ" "ಮಂತ್ರಗಳು, ವರ್ಣನೆ ಇತ್ಯಾದಿಗಳು" ಎಂದು ಹೇಳಿ, ಅವರು ಈ ಸೂತ್ರದಲ್ಲಿಯ ಶಬ್ದ ಎಂಬುದನ್ನು ಉಲ್ಲೇಖಿಸುತ್ತಾರೆ. ವಾಚಸ್ಪತಿ ಮಿಶ್ರನು 'ಭಾಮತಿ'ಯಲ್ಲಿ ಇದನ್ನು ಸಮರ್ಥಿಸುತ್ತಾನೆ, ಅಷ್ಟೇ ಅಲ್ಲ, ಇದಕ್ಕೆ ವಿರುದ್ಧವಾದ ಅಭಿಪ್ರಾಯವು ಶ್ರುತಿ ಸ್ಮೃತಿ ವಿರೋಧವಾದುದು ಎಂದು ಕೂಡ ಹೇಳುತ್ತಾನೆ.

ನಿಮ್ಮ ಕೃಪೆಗೆ ಮತ್ತೊಮ್ಮೆ ವಂದನೆಗಳು.

ನಿಮ್ಮ, ನಂಬುಗೆಯ,
**ಜೆ. ಎಫ್. ಸ್ಟಾಲ್**

ಫೆಬ್ರುವರಿ, 15, 1970
ಜೆ. ಎಫ್. ಸ್ಟಾಲ್
ತತ್ವಜ್ಞಾನ ಮತ್ತು ದಕ್ಷಿಣ ಏಷಿಯಾ ಭಾಷೆಗಳ, ಪ್ರಾಧ್ಯಾಪಕರು

ಪ್ರಿಯ ಡಾ. ಸ್ಟಾಲ್ ಅವರೆ,

ನಿಮ್ಮ ಭಾನುವಾರದ ದಿನಾಂಕ 8 ನೆಯ ಫೆಬ್ರುವರಿ, 1970 ಪತ್ರ ತಲಪಿ ಸಂತೋಷ ವಾಯಿತು. ಪತ್ರದ ವಿಷಯವನ್ನು ಓದಿ ಮತ್ತಷ್ಟು ಸಂತೋಷವಾಯಿತು.

[1] ಸರ್ವ ಫಲತ್ಯಾಗ ಎಂದರೆ "ತನ್ನ ಸ್ವಕರ್ಮದ ಎಲ್ಲ ಫಲಗಳನ್ನೂ ಪರಿತ್ಯಜಿಸುವುದು."

ಎಲ್ಲ ವೇದಗಳೂ ಕೃಷ್ಣನಾಮ ಜಪವನ್ನೇ ವಿಧಿಸಿವೆಯೆಂಬ ಬಗ್ಗೆ ನಿಮಗೆ ಸಮಾಧಾನವನ್ನೊದಗಿಸಲು ಭಗವಾನ್ ಚೈತನ್ಯರ ಪ್ರಮಾಣ ವಚನಗಳನ್ನೇ ನಾನು ನಿಮ್ಮ ಮುಂದಿಡಬಹುದಾಗಿದೆ. ಭಗವಾನ್ ಚೈತನ್ಯರು ಕೀರ್ತನೀಯಃ ಸದಾ ಹರಿಃ (ಹರಿ, ಕೃಷ್ಣನನ್ನು ನಿರಂತರ ಸ್ತುತಿಸಬೇಕು ಶಿಕ್ಷಾಷ್ಟಣ) ಎಂದು ಉಪದೇಶಿಸಿದ್ದಾರೆ. ಅದೇ ರೀತಿಯಲ್ಲಿ ಮಧ್ವಾಚಾರ್ಯರೂ ವೇದೇರಾಮಾಯಣೇ ಚೈವ ಹರಿಃ ಸರ್ವತ್ರಗೀಯತೆ (ಹರಿಯನ್ನು ವೇದಗಳಲ್ಲಿ ಮತ್ತು ರಾಮಾಯಣದಲ್ಲಿ ಸರ್ವತ್ರದಲ್ಲಿಯೂ ಸ್ತುತಿಸಲಾಗಿದೆ) ಎಂದು ಉಲ್ಲೇಖಿಸಿದ್ದಾರೆ. ಅದೇ ಪ್ರಕಾರ ಭಗವದ್ಗೀತೆಯಲ್ಲಿಯೂ (15– 15) ಭಗವಂತನು **ವೇ ದೈಶ್ಚ ಸರ್ವೈರ್ ಅಹಮ್ ಏವ ವೇದ್ಯಃ** (ಎಲ್ಲ ವೇದಗಳಿಂದಲೂ ನಾನೇ ತಿಳಿಯಲ್ಪಡುವವನು ) ಎಂದಿದ್ದಾನೆ.

ಹೀಗೆ ಎಲ್ಲ ಶಾಸ್ತ್ರಗಳಿಗೂ ಪರಮ ಪ್ರುರುಷನೇ ಗಮ್ಯನಾಗಿದ್ದಾನೆ. ಋಗ್ವೇದ ಮಂತ್ರವು (1-22-20) **ಓಂ ತದ್ ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ** (ದೇವತೆಗಳು ಸದಾ ಆ ವಿಷ್ಣುಧಾಮವನ್ನೇ ಕುರಿತು ಚಿಂತಿಸುತ್ತಿರುತ್ತಾರೆ) ಎಂದು ಹೇಳಿದೆ. ಹೀಗೆ ಭಗವಾನ್ ವಿಷ್ಣುವನ್ನು ಅರಿತುಕೊಳ್ಳುವುದೇ ಇಡೀ ವೇದಗಳ ಪ್ರಕ್ರಿಯೆಯಾಗಿದೆ. ಯಾವ ವೇದವೇ ಆಗಲಿ ನೇರವಾಗಿ ಅಥವಾ ಪರೋಕ್ಷವಾಗಿ ಭಗವಾನ್ ವಿಷ್ಣುವಿನ ಗುಣಗಾನವನ್ನೇ ಮಾಡಿದೆ.

ಭಗವದ್ಗೀತೆಯ ಶ್ಲೋಕ 9–14 ರಲ್ಲಿ **ಕೀರ್ತಯಂತಃ** ಎಂಬುದು ಖಂಡಿತವಾಗಿಯೂ ನೀವು ಹೇಳಿದಂತೆ ಗುಣಗಾನ ಮಾಡುವುದು, ಜಪಿಸುವುದು, ಪಠಿಸುವುದು, ಸಂಭಾಷಿಸುವುದು ಎಂದು ಅರ್ಥಕೊಡುತ್ತದೆ. ಆದರೆ, ಗುಣಗಾನ ಮಾಡುವುದು, ಜಪಿಸುವುದು ಅಥವಾ ಪಠಿಸುವುದು ಯಾರನ್ನು ಕುರಿತು ? ಕೃಷ್ಣನನ್ನು ಕುರಿತೇ ಅಲ್ಲವೆ ? ಈ ಸಂಬಂಧದಲ್ಲಿ ಮಾಮ್ (ನನ್ನನ್ನು) ಎಂಬ ಪದವನ್ನು ಉಪಯೋಗಿಸಲಾಗಿದೆ. ಆದುದರಿಂದ ಶ್ರೀಮದ್ಭಾಗವತದಲ್ಲಿ ಶುಕಾಚಾರ್ಯರು ಮಾಡಿದಂತೆ ಯಾರಾದರೂ ಕೃಷ್ಣನ ಗುಣಗಾನ ಮಾಡಿದರೆ ನಮಗೆ ಯಾವ ಆಕ್ಷೇಪವೂ ಇಲ್ಲ. ಅದೂ ಕೀರ್ತನವೇ ತಾನೇ ? ಸಕಲ ವೈದಿಕ ಸಾಹಿತ್ಯದಲ್ಲಿ ಪರಮ ಪುರುಷನಾದ ಕೃಷ್ಣನ ಆ ಬಗೆಯ ಗುಣಗಾನ ಮಾಡುವುದಕ್ಕೆಯೇ, ಅತ್ಯಂತ ಹೆಚ್ಚಿನ ಸ್ಥಾನ ಪ್ರಾಪ್ತವಾಗಿದೆ. ಇದನ್ನು ಈ ಮುಂದಿನ ಶ್ಲೋಕದಿಂದ ಚೆನ್ನಾಗಿ ಮನವರಿಕೆ ಮಾಡಿಕೊಳ್ಳಬಹುದಾಗಿದೆ.

ನಿಗಮ ಕಲ್ಪ ತರೋರ್ ಗಲಿತಂ ಫಲಮ್ ಶುಕ ಮುಖಾದ್ ಅಮೃತ-ದ್ರವ ಸಂಯುತಮ್।
ಪಿಬತ ಭಾಗವತಂ ರಸಂ ಆಲಯಮ್ ಮುಹುರ್ ಅಹೋ ರಸಿಕಾ ಭುವಿ ಭಾವುಕಾಃ॥

"ಓ ವಿಚಾರವಂತರಾದ ರಸಿಕ ಮಹಾಜನರೆ, ವೇದ ಸಾಹಿತ್ಯವೆಂಬ ಕಲ್ಪತರುವಿನ ಪಕ್ವವಾದ ಫಲವೆನಿಸಿದ ಶ್ರೀಮದ್ಭಾಗತವನ್ನು ಆಸ್ವಾದಿಸಿರಿ. ಅದು ಮೊದಲೇ ಮುಕ್ತರೂ ಸೇರಿ ಸರ್ವರಿಂದಲೂ ಆಸ್ವಾದ್ಯಮಾನವಾದ ಅಮೃತರಸವೆನಿಸಿದ್ದರೂ, ಅದು ಶುಕಾಚಾರ್ಯರ ಮುಖದಿಂದ ಬಂದದ್ದರಿಂತ ಮತ್ತಷ್ಟು ರುಚಿಕರವಾಗಿದೆ." (ಶ್ರೀಮದ್ಭಾಗವತಮ್ 1-1-3)

ಪರೀಕ್ಷಿತ ಮಹಾರಾಜನು ಕೇವಲ ಶ್ರವಣ ಮಾತ್ರದಿಂದ ದೋಷವನ್ನು ಹೊಂದಿದನು

ಮತ್ತು ಅದೇ ಪ್ರಕಾರ ಗೋಸ್ವಾಮಿ ಶುಕಾಚಾರ್ಯರು ಕೀರ್ತಿಸಿ ಮೋಕ್ಷವನ್ನು ಪಡೆದು ಕೊಂಡರು ಎಂದು ಹೇಳಲಾಗಿದೆ. ಈ ಏಕಮೇವ ಗುರಿಯನ್ನು ಅಂದರೆ ಭಗವತ್ಪ್ರೀತಿಯನ್ನು ಹೊಂದಲು ಒಂಬತ್ತು ಬಗೆಯ ವಿಧಾನಗಳಿವೆ: ಮೊದಲನೆಯದೇ ಶ್ರವಣ. ಶ್ರವಣ ವಿಧಾನವೇ ಶ್ರುತಿ ಎನಿಸಿಕೊಂಡಿದೆ. ಅನಂತರದ್ದು ಕೀರ್ತನೆ. ಅದೇ ಸ್ಮೃತಿ ಎನಿಸಿಕೊಂಡಿದೆ. ನಾವು ಶ್ರುತಿ ಸ್ಮೃತಿಗಳೆರಡನ್ನೂ ಏಕಕಾಲದಲ್ಲಿ ಒಪ್ಪುತ್ತೇವೆ. ನಾವು ಶ್ರುತಿಯನ್ನು ತಾಯಿಯೆಂದೂ ಸ್ಮೃತಿ ಯನ್ನು ಭಗಿನಿಯೆಂದೂ ಗ್ರಹಿಸುತ್ತೇವೆ. ಮಗು ಮೊದಲು ತಾಯಿಯಿಂದ ಕೇಳುತ್ತದೆ. ಆಮೇಲೆ ಭಗಿನಿಯಿಂದ ವರ್ಣನೆಯ ಮೂಲಕ ತಿಳಿದುಕೊಳ್ಳುತ್ತದೆ.

ಶ್ರುತಿ ಸ್ಮೃತಿಗಳೆರಡೂ ಸಮಗಾಮಿಗಳು. ಅಂತೆಯೇ ಶ್ರೀಲ ರೂಪಾಗೋಸ್ವಾಮಿ ಯವರು :

ಶ್ರುತಿ-ಸ್ಮೃತಿ–ಪುರಾಣಾದಿ ಪಂಚಾರಾತ್ರ ವಿಧಿಂ ವಿನಾ
ಐಕಾಂತಿಕೀ ಹರೇರ್ ಭಕ್ತಿರ್ ಉತ್ಪಾತಾಯೈವ ಕಲ್ಪತೇ
(ಭಕ್ತಿರಸಾಮೃತ ಸಿಂಧು 1-2-101)

ಎಂದರೆ ಶ್ರುತಿ, ಸ್ಮೃತಿ, ಪುರಾಣಗಳು ಮತ್ತು ಪಂಚರಾತ್ರ ಇವುಗಳನ್ನು ಅವಲೋಕಿಸದೆ ಶುದ್ಧವಾದ ಭಕ್ತಿಯುತ ಸೇವೆಯು ಎಂದೂ ಸಿದ್ಧಿಸುವುದಿಲ್ಲ. ಆದುದರಿಂದ ಶಾಸ್ತ್ರಗಳನ್ನು (ವೇದಗಳನ್ನು) ನೋಡದೆಯೇ ಕೇವಲ ಭಕ್ತಿಯುತ ಸೇವೆಯ ಪರಮಾನಂದವನ್ನು ವ್ಯಕ್ತ ಪಡಿಸುವವನು ಗೊಂದಲವನ್ನುಂಟು ಮಾಡುತ್ತಾನೆಂದು ಹೇಳಬಹುದು. ಇವಕ್ಕೆ ಬದಲಾಗಿ, ನಾವು ಕೇವಲ ಶ್ರುತಿಗಳನ್ನು ಮಾತ್ರ ಅನುಸರಿಸಿದರೆ, ಆಗ ನಾವು ಗೀತೆಯು ಅಷ್ಟೊಂದು ಮೆಚ್ಚಿಕೊಳ್ಳದ ವೇದವಾದ ರತಾಃ[1] ಆಗುತ್ತೇವೆ.

ಆದುದರಿಂದ ಭಗವದ್ಗೀತೆಯು ಸ್ಮೃತಿ ಎನಿಸಿಕೊಂಡಿದ್ದರೂ ಕೂಡ ಅದು ಸರ್ವ ವೇದಗಳ ಸಾರವಾಗಿದೆ. ಸರ್ವೋಪನಿಷದೋ ಗಾವ[2]. ಅದು ಹಾಲು ಕರೆಯುವ ಒಂದು ಹಸುವಿನಂತಿದೆ, ಅಥವಾ ಸಕಲ ವೇದೋಪನಿಷತ್ತುಗಳ ಸಾರಭೂತವಾಗಿದೆ. ಶಂಕರಾ ಚಾರ್ಯರು ಸೇರಿ ಎಲ್ಲ ಆಚಾರ್ಯರು ಭಗವದ್ಗೀತೆಯನ್ನು ಹಾಗೆಂದು ಒಪ್ಪಿಕೊಂಡಿದ್ದಾರೆ. ಅಂತೆಯೇ ಭಗವದ್ಗೀತೆಯು ಸ್ಮೃತಿ ಎಂದು ಹೇಳಿ ನೀವು ಅದರ ಪ್ರಾಮಾಣವನ್ನು ನಿರಾಕರಿಸಬರುವುದಿಲ ಹಾಗೆ ಹೇಳುವುದು ನೀವೇ ಸರಿಯಾಗಿ ಹೇಳಿರುವಂತೆ ಸ್ಮೃತಿಗೂ ಶ್ರುತಿಗೂ ವಿರೋಧವಾದುದಾಗಿರುವುದು. **(ಶ್ರುತಿ ಸ್ಮೃತಿ ವಿರೋಧಃ.)**

**ವೇದಾಂತ ಶ್ರವಣಮ್ ಪ್ರಣವ ಜಪಶ್ಚ** (ವೇದಾಂತ ಶ್ರವಣ ಮಾಡುವುದು ಮತ್ತು ಓಂಕಾರವನ್ನು ಜಪಿಸುವುದು) ಎಂಬ ಅರ್ಥಕೊಡುವ ಕೀರ್ತನ ಎಂಬ ಆನಂದಗಿರಿಯು ಉಲ್ಲೇಖದ ಪ್ರಕಾರ ಹೇಳುವುದಾದರೆ, ವೇದಾಂತವನ್ನು ಬಲ್ಲವನು ಕೃಷ್ಣನೇ ಮತ್ತು ಅವನೇ ವೇದಾಂತ ಕರ್ತೃವಾಗಿದ್ದಾನೆ. ಅವನೇ ವೇದವಿತ್ ಮತ್ತು ವೇದಾಂತ ಕೃತ್. ಹೀಗಿರು ವಾಗ, ಕೃಷ್ಣನ ಅದನ್ನು ಕೇಳುವುದಕ್ಕೆ ಮಿಗಿಲಾದ ವೇದಾಂತ ಶ್ರವಣಕ್ಕೆ ಅವಕಾಶವೆಲ್ಲಿ ?

[1] (ಭ. ಗೀ. 2-48) ಕೇವಲ ವೇದಗಳ ಶಬ್ದವನ್ನು ಉಚ್ಚರಿಸುವಲ್ಲಿ ರತರಾಗಿ ಅವುಗಳ ಜ್ಞಾನವಿಲ್ಲದ ಅಥವಾ ಅದರಂತೆ ಆಚರಿಸದವರು.

[2] ಶಂಕರಾಚಾರ್ಯರ ನಾಲ್ಕನೆಯ ಧ್ಯಾನ ಶ್ಲೋಕವನ್ನು ನೋಡಿ (ಈ ಹಿಂದಿನ ಅಧ್ಯಾಯ ವನ್ನು).

**ಜ್ಞಾನಯಜ್ಞೇನ . . . . ಯಜಂತೋಮಾಮ್** ಎಂದು ಹೇಳಿರುವ ಮುಂದಿನ ಶ್ಲೋಕದ ವಿಷಯವೇಂದರೆ, **ಮಾಮ್** ಎಂಬ ಶಬ್ದದಿಂದ ಸೂಚಿತನಾದ ಕೃಷ್ಣನೇ ಪೂಜಾವಸ್ತು. ಈ ವಿಧಾನವನ್ನು ಈಶೋಪನಿಷತ್ತಿನ 11ನೆಯ ಮಂತ್ರದಲ್ಲಿ ವರ್ಣಿಸಲಾಗಿದೆ:

ವಿದ್ಯಾಂ ಚ ವಿದ್ಯಾಂ ಚ ಯಸ್ ತದ್ ವೇದೋಭಯಂ ಸಹ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಾಯಾಂಽಮೃತಂ ಅಶ್ನುತೇ ॥

"ಅವಿದ್ಯೆಯ ಪ್ರಕ್ರಿಯೆಯನ್ನೂ ದಿವ್ಯಜ್ಞಾನವನ್ನೂ ಜೊತೆ ಜೊತೆ ತಿಳಿಯ ಬಹುದಾದವನೇ ಜನನ ಮರಣಗಳ ಪುನರಾವೃತ್ತಿಯ ಪರಿಣಾಮವನ್ನು ಗೆಲ್ಲಬಲ್ಲನು ಮತ್ತು ಅಮೃತತ್ವದ ಪೂರ್ಣಾನಂದವನ್ನು ಅನುಭವಿಸಬಲ್ಲನು."

ಮಾನವನಿಗೆ ವಿದ್ಯೆ ಅಥವಾ ದಿವ್ಯಜ್ಞಾನದ ಸಂಸ್ಕಾರವು ಅತ್ಯಗತ್ಯ. ಇಲ್ಲದಿದ್ದರೆ, ಅವಿದ್ಯಾಸಂಸ್ಕಾರವು ಮನುಷ್ಯನನ್ನು ಭೌತಿಕ ಲೋಕದಲ್ಲಿ ಬದ್ಧ ಸ್ಥಿತಿಗೆ ಗುರಿಪಡಿಸುತ್ತದೆ. ಭೌತಿಕ ಅಸ್ತಿತ್ವ ಎಂದರೆ ಇಂದ್ರಿಯ ತೋಷಣದ ಬೆನ್ನುಹತ್ತುವುದು ಅಥವಾ ಸಂಸೃತಿಗೆ ಒಳಗಾಗುವುದು. ಇಂಥ ಇಂದ್ರಿಯಾರ್ಥಗಳ ತೋಷಣವೇ (ಅವಿದ್ಯಾ) ಜನನ ಮರಣಗಳ ಪುನರಾವೃತ್ತಿಗೆ ದಾರಿಯಾಗುತ್ತದೆ. ಈ ಅವಿದ್ಯೆಯಲ್ಲಿ ಮಗ್ನರಾದವರು ಪ್ರಕೃತಿ ನಿಯಮದಿಂದ ಯಾವ ಪಾಠವನ್ನೂ ಕಲಿಯುವುದಿಲ್ಲ. ಮತ್ತು ಅವರು ಮಿಥ್ಯಾ ವಸ್ತುಗಳ ಸೌಂದರ್ಯಕ್ಕೆ ಮಾರು ಹೋಗಿ ಮತ್ತೆ ಮತ್ತೆ ಅದೇ ಕರ್ಮಗಳನ್ನು ಮಾಡುತ್ತಾರೆ. ಇದಕ್ಕೆ ಬದಲಾಗಿ ವಿದ್ಯಾ ಅಥವಾ ನೈಜ ಜ್ಞಾನವೆಂದರೆ ದಿವ್ಯ ಜ್ಞಾನ ಓಂಕಾರವನ್ನು ಪಠಿಸುತ್ತ ಅವಿದ್ಯೆಯ ವಿಧಾನಗಳನ್ನು ಚೆನ್ನಾಗಿ ಅರಿತು ಕೊಳ್ಳುವುದು ಮತ್ತು ಆ ಮೂಲವಿಚಲಿತ ವಾಗದೆ ಮೋಕ್ಷ ಮಾರ್ಗವನ್ನು ಅನುಸರಿಸುವುದೇ ಆಗಿದೆ.

ಮೋಕ್ಷ ಎಂದರೆ ಅಮೃತತ್ವದ ಪೂರ್ಣಾನಂದವನ್ನು ಅನುಭವಿಸುವುದು. ಈ ಅಮೃತತ್ವ ವನ್ನು ದೇವರ ನಿತ್ಯ ಸಾಮ್ರಾಜ್ಯದಲ್ಲಿ (ಸಂಭೂತ್ಯಮೃತಂ ಅಶ್ನುತೇ) ಎಂದರೆ ಪರಮ ದೇವೋತ್ತಮ ಪುರುಷನ ದಿವ್ಯ ಧಾಮದಲ್ಲಿ ಅನುಭವಿಸಬಹುದಾಗಿದೆ ಮತ್ತು ಆ ಪರಮ ಪುರುಷನನ್ನು ಸರ್ವಕಾರಣಗಳ ಕಾರಣನನ್ನು (ಸಂಭವಾತ್) ಅರ್ಚಿಸುವ ಫಲವಾಗಿದೆ. ಹೀಗೆ ಪರಮ ದೇವೋತ್ತಮ ಪುರುಷನನ್ನು ಎಂದರೆ ಕೃಷ್ಣನನ್ನು ಅರ್ಚಿಸುವುದು ಎಂದರೆ ಜ್ಞಾನ ಯಜ್ಞ ಮಾಡುವುದು ನಿಜವಾದ ವಿದ್ಯೆಯೆನಿಸಿಕೊಂಡಿದೆ.

**ಜ್ಞಾನಯಜ್ಞೇನ ಯಜಂತೋ ಮಾಮ್** ಎಂಬುದು ಭಗವದ್ಗೀತೆಯಲ್ಲಿ ಹೇಳಿದಂತೆ (7-19) ಜ್ಞಾನದ ಪರಿಪೂರ್ಣತೆ ಎನಿಸಿದೆ.

ಬಹೂನಾಂ ಜನ್ಮನಾಂ ಅಂತೇಜ್ಞಾನ ವಾನ್ ಮಾಂ ಪ್ರಪದ್ಯತೇ ।
ವಾಸುದೇವಃ ಸರ್ವಂ ಇತಿ ಸ ಮಹಾತ್ಮಾ ಸುದುರ್ಲಭಃ॥

"ಅನೇಕ ಜನನ ಮರಣಗಳ ತರುವಾಯ ಯಾವನು ನಿಜವಾದ ಜ್ಞಾನದಲ್ಲಿರುತ್ತಾನೋ ಅವನು ನಾನೇ (ಕೃಷ್ಣ) ಸರ್ವ ಕಾರಣಗಳ ಕಾರಣನು ಮತ್ತು ಅಸ್ತಿತ್ವದ ಎಲ್ಲದರ ಮೂಲ ವಸ್ತು ಎಂದು ತಿಳಿದು ನನಗೆ ಶರಣಾಗತನಾಗುತ್ತಾನೆ. ಅಂಥ ಮಹಾತ್ಮನು ಅತಿ ವಿರಳ".

ಮನುಷ್ಯನು ಈ ನಿಶ್ಚಯವಾದ ಜ್ಞಾನವನ್ನು ಹೊಂದದೆ ಸಿ ಕೃಷ್ಣನನ್ನು ಕುರಿತು

ಶುಷ್ಕ ಊಹಾಪೋಹದಲ್ಲಿ ತೊಡಗಿದರೆ, ಅವನ ಈ ಊಹಾಪೋಹದ ಕಠಿಣ ಪರಿಶ್ರಮವು ಹೊಟ್ಟು ಕುಟ್ಟಿದಂತೆಯೇ ಸರಿ. ಅಕ್ಕಿ ಇರುವ ಬತ್ತವು ಮತ್ತು ಅದರ ಹೊಟ್ಟು ಒಂದೇ ತೆರನಾಗಿ ಕಾಣುತ್ತವೆ. ಹೊಟ್ಟುತೆಗೆಯದ ಬತ್ತದಿಂದ ಅಕ್ಕಿಯನ್ನು ಹೇಗೆ ಪಡೆದುಕೊಳ್ಳಬೇಕೆಂಬುದನ್ನು ಬಲ್ಲವನೇ ನಿಜವಾದ ಜ್ಞಾನಿ. ಅಕ್ಕಿ ಇಲ್ಲದ ಬರೀ ಹೊಟ್ಟನ್ನು ಕುಟ್ಟಿ ಫಲ ಪಡೆಯ ಬಯಸು ವವನ ಶ್ರಮವು ವ್ಯರ್ಥವಾಗುತ್ತದೆ. ಹಾಗೆಯೇ ವೇದಗಳ ಗುರಿಯಾದ ಕೃಷ್ಣನನ್ನು ತಿಳಿಯದೇ ವೇದಾಧ್ಯಯನ ಮಾಡಿದರೆ ಹಾಗೆ ಮಾಡುವವನು ತನ್ನ ಅಮೂಲ್ಯ ಸಮಯವನ್ನು ಹಾಳು ಮಾಡಿಕೊಳ್ಳುತ್ತಾನೆ ಅಷ್ಟೆ.

ಕೃಷ್ಣನ ಆರಾಧನೆಗಾಗಿ ಸಂಪಾದನೆ ಮಾಡಿದ ಜ್ಞಾನವು ಅನೇಕ ಜನನ ಮರಣಗಳ ತರುವಾಯ, ಒಬ್ಬನು ನಿಜವಾದ ಜ್ಞಾನಿಯಾದಾಗ ಸಿದ್ಧಿಸುತ್ತದೆ. ಹೀಗೆ ಒಬ್ಬನು ಜ್ಞಾನವಂತ ನಾದ ಮೇಲೆ ಕೃಷ್ಣನು ಸರ್ವಕಾರಣಗಳ ಕಾರಣನು ಮತ್ತು ಅವನೇ ಸರ್ವಸ್ವನೆಂದು ಅರಿತು ಅವನಿಗೆ ಶರಣಾಗತನಾಗುತ್ತಾನೆ. ಅಂಥ ಮಹಾತ್ಮನು ಅತಿ ಸರಳ, ಹೀಗೆ ತಮ್ಮ ಸರ್ವಸ್ವ ವನ್ನು ಕೃಷ್ಣನಿಗೆ ಅರ್ಪಣ ಮಾಡಿದವರು ಸುದುರ್ಲಭರಾದ ಮಹಾತ್ಮರಾಗಿರುತ್ತಾರೆ. ಅವರು ಸಾಮಾನ್ಯ ಮಹಾತ್ಮರಾಗಿರುವುದಿಲ್ಲ.

ಭಗವಾನ್ ಚೈತನ್ಯರ ಕೃಪೆಯಿಂದ ಜೀವನದ ಈ ಅತ್ಯುನ್ನತ ಪರಿಪೂರ್ಣಾವಸ್ಥೆಯನ್ನು ಮುಕ್ತವಾಗಿ ಎಲ್ಲರಿಗೂ ಹಂಚಲಾಗುತ್ತಿದೆ. ಪರಿಣಾಮವೂ ಕೂಡ ಪ್ರೋತ್ಸಾಹದಾಯಕವಾಗಿದೆ; ಹಾಗಿಲ್ಲದಿದ್ದರೆ, ಯಾವ ವೈದಿಕ ಸಂಸ್ಕೃತಿಯ ಹಿನ್ನೆಲೆ ಇಲ್ಲದ ಹುಡುಗ ಹುಡುಗಿಯರು ಈ ದಿವ್ಯ ಶ್ರೀಕೃಷ್ಣ ನಾಮೋಚ್ಚಾರದ ಸ್ಪಂದನದಿಂದ ಇಷ್ಟು ತೀವ್ರ ಇಂಥ ಮಹಾತ್ಮರ ಸ್ಥಾನಕ್ಕೆ ತಲಪುವುದು ಹೇಗೆ ಸಾಧ್ಯವಾಗಬಹುದಿತ್ತು ? ಕೇವಲ ಈ ಮಂತ್ರ ಜಪದ ಆಧಾರದಿಂದಲೇ ಅವರಲ್ಲಿ ಅನೇಕರು (ಪ್ರಾಮಾಣಿಕರಾಗಿರುವವರು) ಭಕ್ತಿಯುತ ಸೇವೆಯಲ್ಲಿ ನಿಶ್ಚಲರಾಗಿ ದ್ದಾರೆ ಮತ್ತು ಅವರು ಮಾಂಸಾಹಾರ, ನಿಷಿದ್ಧ ಸಂಭೋಗ, ಕಾಫಿ, ಟೀ, ತಂಬಾಕು ಸೇರಿ ಮದ್ಯಪಾನ ಮತ್ತು ಜೂಜಾಟ ಈ ನಾಲ್ಕು ಬಗೆಯ ಪಾಪಕರ್ಮಗಳಿಗೆ ಎಂದೂ ಬಲಿಯಾಗದೆ ಉಳಿದಿದ್ದಾರೆ. ಇದೇ ವೇದಾಂತ ಸೂತ್ರದ ಕೊನೆಯ ಸೂತ್ರವಾದ ಅನಾವೃತ್ತಿ ಶಬ್ದಾತ್ ಆಗಿದೆ. (ಈ ನಾಮೋಚ್ಚಾರದಿಂದ ಮನುಷ್ಯನು ಮುಕ್ತನಾಗುತ್ತಾನೆ)

ಇದನ್ನು ಮಾನವನು ಫಲಪ್ರಾಪ್ತಿಯಿಂದ ಅರಿತುಕೊಳ್ಳಬೇಕು. (**ಫಲೇನ ಪರಿಚೀಯತೇ**) ನಮ್ಮ ವಿದ್ಯಾರ್ಥಿಗಳು ಹೀಗೆಯೇ ನಡೆದುಕೊಳ್ಳಬೇಕೆಂದು ಆದೇಶಿಸುತ್ತೇವೆ ಮತ್ತು ಅವರು ಮಟ್ಟದಿಂದ ಪತನ ಹೊಂದುವುದಿಲ್ಲ. ಆ ವಿದ್ಯಾರ್ಥಿಗಳು ಮೇಲೆ ಹೇಳಿದ ನಾಲ್ಕು ಬಗೆಯ ಇಂದ್ರಿಯ ತೋಷಣದ ಅವಿದ್ಯಾ ಸಂಸ್ಕೃತಿಯ ಬೆನ್ನು ಹತ್ತದೆ ಶುದ್ಧ ಜೀವನ ನಡೆಸುತ್ತಿರುವುದು ಅವರ ವೇದಜ್ಞಾನದ ಪರೀಕ್ಷಣವಾಗಿದೆ. ಈ ವಿದ್ಯಾರ್ಥಿಗಳು ಭಗವತ್ಪ್ರೀತಿಯ ಅಮೃತ ಫಲವನ್ನು ಸವಿದಿರುವುದರಿಂದ ಅವರು ಈ ಭೌತಿಕ ಮಟ್ಟಕ್ಕೆ ಮತ್ತೆ ಹಿಂದಿರುಗುವುದಿಲ್ಲ.

**ಸರ್ವ ತ್ಯಾಗ** ಎಂಬುದನ್ನು ಭಗವದ್ಗೀತೆಯಲ್ಲಿ ಭಗವಂತನು "ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂವ್ರಜ" ಎಂಬ ಶಬ್ದಗಳಲ್ಲಿ ಎಂದರೆ ಎಲ್ಲವನ್ನು ಪರಿತ್ಯಜಿಸಿ ನನ್ನಲ್ಲಿ (ಕೃಷ್ಣನಲ್ಲಿ) ಶರಣಾಗಿರಿ ಎಂದು ವಿವರಿಸಿದ್ದಾನೆ. ಹರೇ ಕೃಷ್ಣ ಮಂತ್ರ ಎಂದರೆ, "ಓ

ಕೃಷ್ಣನ ಪರಮಶಕ್ತಿಯೇ, ಓ ಭಗವಾನ್ ಕೃಷ್ಣನೇ, ದಯವಿಟ್ಟು ನನ್ನನ್ನು ನಿನ್ನ ನಿತ್ಯ ಸೇವೆಯಲ್ಲಿ ತೊಡಗಿಸು," ಎಂದು ಪ್ರಾರ್ಥಿಸುವುದು. ಅಂತೆಯೇ ನಾವು ಎಲ್ಲವನ್ನು ಪರಿತ್ಯಜಿಸಿ ಭಗವಂತನ ಸೇವೆಯಲ್ಲಿ ತೊಡಗಿದ್ದೇವೆ. ಭಗವಾನ್ ಕೃಷ್ಣನು ಏನನ್ನು ಮೊದಲು ನಮಗೆ ಆದೇಶಿಸುತ್ತಾನೋ ಅದೇ ನಮ್ಮ ಕಾರ್ಯ. ನಾವು ಕರ್ಮ ಜ್ಞಾನ ಮತ್ತು ಯೋಗ ಇವುಗಳ ಸರ್ವಫಲಗಳನ್ನು ಪರಿತ್ಯಜಿಸಿದ್ದೇವೆ. ಅದೇ ಶುದ್ಧ ಭಕ್ತಿಯುತ ಸೇವೆಯ ಘಟ್ಟವಾಗಿದೆ; **ಭಕ್ತಿರ್ ಉತ್ತಮೊ.**

ನಿಮ್ಮ ನಂಬುಗೆಯ,

**ಎ. ಸಿ. ಭಕ್ತಿವೇದಾಂತಸ್ವಾಮಿ**

ಫೆಬ್ರುವರಿ 25, 1970

ಎ. ಸಿ. ಭಕ್ತಿವೇದಾಂತಸ್ವಾಮಿ
ಸ್ಥಾಪನಾಚಾರ್ಯ
ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾಸಂಘ

ಪ್ರಿಯ ಸ್ವಾಮೀಜಿ,

ಅಡಕದೊಂದಿಗಿರುವ ಫೆಬ್ರುವರಿ 15, 1970ರ ನಿಮ್ಮ ಸೊಗಸಾದ ಪತ್ರಕ್ಕಾಗಿ ನಾನು ಬಹಳ ಋಣಿ.

ಕೃಷ್ಣನಾಮ ಜಪವೊಂದೇ ಅಗತ್ಯವೆಂದು ತೋರಿಸಲು ನೀವು ಯಾವುದೇ ಉಲ್ಲೇಖನ ನೀಡಿದಾಗಲೆಲ್ಲ, ಮತ್ತೊಂದೂ ಅಗತ್ಯವಾಗಿದೆ ಎಂದು ತೋರಿಸಲು ನಾನು ಬೇರೊಂದನ್ನು ಉದಾಹರಿಸಬಹುದಾಗಿದೆ. **ಯದಿಶ್ಲೋಕೋಪಿ ಪ್ರಮಾಣಮ್ ಅಯಂ ಅಶ್ಲೋಕಹಃ ಪ್ರಮಾಣಮ್ ಭವಿತುಮ್ ಅರ್ಹತಿಃ.**"ಕೇವಲ ಶ್ಲೋಕಗಳೇ ಪ್ರಮಾಣವಾದರೆ,ಈ ಶ್ಲೋಕವನ್ನು ಕೂಡ ಪ್ರಮಾಣವೆಂದು ಗ್ರಹಿಸಬಹುದಾಗಿದೆ." ಪತಂಜಲಿಯು ಕೂಡ **ಮಹಾನ್ ಹಿ ಶಬ್ದಶ್ಯ ಪ್ರಯೋಗ ವಿಷಯು"** ಶಬ್ದಗಳ ಪ್ರಯೋಗ ವ್ಯಾಪ್ತಿಯು ಬಹು ವಿಸ್ತೃತವಾದುದಾಗಿದೆ ಎಂದು ಹೇಳಿರುವುದರಿಂದ, ಈ ನಮ್ಮ ಪತ್ರವ್ಯವಹಾರವು ತೀವ್ರ ಊನೆಗಾಣುವಂತೆ ಕಾಣುವುದಿಲ್ಲ.

ನಿಮ್ಮ ನಂಬುಗೆ

**ಜೆ. ಎಫ್. ಸ್ಟಾ**

3763ವೆತ್ಸೇಕ ಅವೆನ್ಯೂ,
ಲಾಸ್ ಏಂಜಲೀಸ್ ಕ್ಯಾಲಿಫೋರ್ನಿಯ 90034,
ಏಪ್ರಿಲ್ 24,70

ಪ್ರಿಯ ಡಾ॥ ಸ್ಟಾಲ್‌ರವರೇ,

1970ರ ಫೆಬ್ರುವರಿ 25ನೇ ದಿನಾಂಕದ ನಿಮ್ಮ ಪತ್ರಕ್ಕಾಗಿ ನಾನು ಆಭಾರಿ.

ಮೋಲ್ಕಂಡ ಸ್ಥಳದಲ್ಲಿ ನಾನು ಒಂದು ಚರ್ಚ್ ಜಾಗವನ್ನು ಕೊಂಡುಕೊಳ್ಳುವ ವ್ಯವಹಾರದಲ್ಲಿ ತೊಡಗಿದ್ದೆನಾದ ಕಾರಣ ಬೇಗ ನಿಮ್ಮ ಪತ್ರಕ್ಕೆ ಉತ್ತರಿಸಲಾಗಲಿಲ್ಲ. ಕ್ಷಮೆ ಕೋರುತ್ತೇನೆ. ನಾವು ಒಂದು ಪ್ರತ್ಯೇಕ ಮಂದಿರಕ್ಕಾಗಿ ಮತ್ತು ಉಪನ್ಯಾಸ ಕೊಠಡಿ, ನನ್ನ ನಿವಾಸ ಮತ್ತು ಭಕ್ತರ ನಿವಾಸದ ಕೋಣೆಗಳು ಈ ಎಲ್ಲಕ್ಕೂ ಎಲ್ಲ ಆಧುನಿಕ ಅನುಕೂಲಗಳಿರುವ ಒಂದು ಸೊಗಸಾದ ಸ್ಥಳವನ್ನು ಒಂದೇ ಕಡೆಯಲ್ಲಿ ದೊರಕಿಸಿಕೊಂಡಿದ್ದೇವೆ. ನೀವು ನಿಮಗೆ ಅನುಕೂಲವಾದಾಗ ಈ ಸ್ಥಳಕ್ಕೆ ಭೇಟಿ ನೀಡಬೇಕೆಂದು ಕೋರುತ್ತೇನೆ. ನೀವು ಬರುವುದನ್ನು ದಯವಿಟ್ಟು ಒಂದು ದಿನ ಮುಂಚಿತವಾಗಿ ತಿಳಿಸಿದರೆ ನನ್ನ ಶಿಷ್ಯರು ನಿಮ್ಮನ್ನು ಯಥೋಚಿತವಾಗಿ ಬರಮಾಡಿಕೊಳ್ಳಲು ಸಿದ್ಧರಾಗಿರುತ್ತಾರೆ.

ನಮ್ಮ ಪತ್ರ ವ್ಯವಹಾರದ ಮಟ್ಟಿಗೆ ಹೇಳುವುದಾದರೆ, ಈ ಉಲ್ಲೇಖ ಪ್ರತ್ಯುಲ್ಲೇಖಗಳು ಸಮಸ್ಯೆಯನ್ನು ಪರಿಹರಿಸಲಾರವು. ನ್ಯಾಯಾಲಯದಲ್ಲಿ ಉಭಯ ನ್ಯಾಯವಾದಿಗಳು ಕಾನೂನು ಗ್ರಂಥಗಳಿಂದ ಕಾನೂನನ್ನು ಉದ್ಧರಿಸುತ್ತಾರೆ. ಆದರೆ ಅದು ಪ್ರಕರಣದ ಪರಿಹಾರವೆಂದೆನಿಸು ವುದಿಲ್ಲ. ನ್ಯಾಯಾಧೀಶನ ತೀರ್ಪೇ ಆ ಪ್ರಕರಣದ ನಿರ್ಣಯವಾಗಿರುತ್ತದೆ. ಆದುದರಿಂದ ವಾದವಿವಾದದಿಂದ ನಾವು ಯಾವ ನಿರ್ಣಯಕ್ಕೂ ಬರಲು ಸಾಧ್ಯವಾಗುವುದಿಲ್ಲ.

ವೇದಗಳ ಶ್ಲೋಕಗಳು ಅನೇಕ ಸಲ ಪರಸ್ಪರ ವಿರುದ್ಧವಾಗಿರುತ್ತವೆ. ಪ್ರತಿಯೊಬ್ಬ ದಾರ್ಶನಿಕನು ತನ್ನದೇ ಆದ ಅಭಿಪ್ರಾಯವನ್ನು ಹೊಂದಿರುತ್ತಾನೆ. ಹಾಗೆ ಅವನು ತನ್ನದೇ ಆದ ಪ್ರತ್ಯೇಕ ತತ್ವ ಮಂಡನೆ ಮಾಡದಿದ್ದರೆ ಅವನು ಪ್ರಖ್ಯಾತ ದಾರ್ಶನಿಕನಾಗುವುದು ಹೇಗೆ ಸಾಧ್ಯ ? ಆದುದರಿಂದಲೇ ಒಂದು ಸರಿಯಾದ ನಿರ್ಣಯಕ್ಕೆ ಬರುವುದು ಬಹಳ ಕಷ್ಟ" ನಿರ್ಣಯ ಎಂದರೆ, ಮೇಲೆ ಹೇಳಿದಂತೆ ಪ್ರಮಾಣಯುತ ಅಧಿಕಾರಿಯ ತೀರ್ಪನ್ನು ಒಪ್ಪಿಕೊಳ್ಳು ವುದು. ನಾವು, ಕೃಷ್ಣಾಭಿನ್ನರಾದ ಭಗವಾನ್ ಚೈತನ್ಯ ಮಹಾಪ್ರಭುಗಳ ಪ್ರಮಾಣವನ್ನು ಅನುಸರಿಸುತ್ತೇವೆ ಮತ್ತು ವೇದಾನುಸಾರವಾದ ಅವರ ಅಭಿಪ್ರಾಯವೆಂದರೆ ಈ ಕಲಿಯುಗದಲ್ಲಿ ಜೀವನದ ಎಲ್ಲ ಸಮಸ್ಯೆಗಳಿಗೆ ಈ ಜಪವೇ ಏಕೈಕ ಪರಿಹಾರ. ಇದನ್ನೇ ಕಾರ್ಯತಃ ಸಾಧಿಸಿ ತೋರಿಸಲಾಗುತ್ತಿದೆ.

ಇತ್ತೀಚೆಗೆ ಶ್ರೀ ಚೈತನ್ಯರ ಅವತಾರದ ದಿನ ಬರ್ಕ್ಲಿಯಲ್ಲಿ ಭಾರಿ ಮೆರವಣಿಗೆ ನಡೆಯಿತು. ಅದನ್ನು ಕಂಡ ಜನ "ಈ ಜನ ಸಂದಣಿಯು ಇತರ ಸಂದಣಿಯಂತಲ್ಲ. ಅವರು ಕಿಟಕಿಗಳನ್ನೆಲ್ಲ ಒಡೆದುಹಾಕಿ ಗಲಾಟೆ ಮಾಡಿ ಬಿಡುತ್ತಾರೆ" ಎಂದು ಉದ್ಗಾರವೆತ್ತಿದರು. ಪೊಲೀಸರು ಕೂಡ "ಕೃಷ್ಣ ಪ್ರಜ್ಞಾ ಆಂದೋಲನದ ಜನರು ಪೊಲೀಸರೊಂದಿಗೆ ತುಂಬಾ ಸಹಕರಿಸಿದರು. ಹೀಗಾಗಿ ಮೆರವಣಿಗೆಯುದ್ದಕ್ಕೂ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವ ತಮ್ಮ ಪ್ರಯತ್ನವು ಬಹಳ ಯಶಸ್ವಿಯಾಯಿತು. ಹೆಚ್ಚು ಪೊಲೀಸರೇ ಬೇಕಾಗಲಿಲ್ಲ" ಎಂದು ಹೇಳಿದರು.

ಇದೇ ರೀತಿಯಲ್ಲಿ ಡಿಟ್‌ರಾಯಿಟ್‌ನಲ್ಲಿಯೂ ಕೂಡ ಒಂದು ಬಹು ದೊಡ್ಡ ಶಾಂತಿ ಪಾದಯಾತ್ರೆ ನಡೆಯಿತು. ಅಲ್ಲಿಯೂ ಕೂಡ ಆ ಜನಸಂದಣಿಯು ನಮ್ಮವರನ್ನು "ದೇವತೆಗಳು. ಎಂದು ಬಣ್ಣಿಸಲಾಯಿತು. ಅಂತೆಯೇ ಇಂದಿನ ಮಾನವ ಸಮಾಜದ ಎಲ್ಲ ಬಗೆಯ ಸಮಸ್ಯೆ ಗಳಿಗೆ ಪರಿಹಾರವಾದ ಈ ಕೃಷ್ಣಪ್ರಜ್ಞಾ ಆಂದೋಲನವು ಹೆಚ್ಚು ಅಗತ್ಯವಾಗಿದೆ.

ಇನ್ನಿತರ ಉಲ್ಲೇಖಗಳು ಈ ಸಮಯದಲ್ಲಿ ಹೆಚ್ಚು ಫಲಕಾರಿಯಾಗಲಿಕ್ಕಿಲ್ಲ. ಒಂದು ಔಷಧದ ಅಂಗಡಿಯಲ್ಲಿ ಅನೇಕ ಬಗೆಯ ಔಷಧಗಳಿರಬಹುದು ಮತ್ತು ಆ ಎಲ್ಲ ಔಷಧಗಳು ಒಳ್ಳೆಯ ಖಾತ್ರಿ ಔಷಧಗಳಾಗಿರಬಹುದು. ಆದರೆ ಒಬ್ಬ ವಿಶಿಷ್ಟರೋಗಿಗೆ ಅನುಭವೀ ವೈದ್ಯನೇ ಔಷಧವನ್ನು ನೀಡಬೇಕಾಗುವುದು. ಈ ಸಂದರ್ಭದಲ್ಲಿ "ಇದು ಕೂಡ ಔಷಧ ಮತ್ತು ಇದು ಕೂಡ ಔಷಧ" ಎಂದು ನಾವು ಹೇಳಲು ಬರುವುದಿಲ್ಲ. ಒಬ್ಬನಿಗೆ ಪರಿಣಾಮಕಾರಿ ಎನಿಸುವ ಔಷಧವೇ ಅವನಿಗೆ ಔಷಧವೆನಿಸುವುದು–ಫಲೇನ ಪರಿಚೀಯತೇ.

ನಿಮ್ಮ ನಂಬುಗೆಯ,
**ಎ. ಸಿ. ಭಕ್ತಿವೇದಾಂತಸ್ವಾಮಿ**

ಶ್ರೀಲಾ ಪ್ರಭುಪಾದರ ಕೊನೆಯ ಟಿಪ್ಪಣಿ

ನ್ಯಾಯಾಲಯದಲ್ಲಿ ಇಬ್ಬರು ವಕೀಲರು, ವಾದಾಂಶದ ನಿರ್ಣಯಕ್ಕಾಗಿ ಅಧಿಕೃತ ಕಾನೂನು ಪುಸ್ತಕಗಳಿಂದ ತಮ್ಮ ತಮ್ಮ ಸುಸಂಗತ ವಾದಗಳನ್ನು ಮುಂದಿಡುತ್ತಾರೆ. ಆದರೆ ಪಕ್ಷಕಾರರಲ್ಲಿ ಯಾರೊಬ್ಬರ ಪರವಾಗಿ ತೀರ್ಮಾನಿಸುವುದು ನ್ಯಾಯಾಧೀಶನಿಗೆ ಸೇರಿದ್ದು. ಪ್ರತ್ಯರ್ಥೀ ವಕೀಲರು ತಮ್ಮ ತಮ್ಮ ವಾದಗಳನ್ನು ಮುಂದಿಟ್ಟಾಗ, ಅವರೀರ್ವರೂ ಸದ್ಭಾವ ದಿಂದ ಮತ್ತು ಕಾನೂನು ಬದ್ಧವಾಗಿಯೇ ವಾದ ಮಂಡನೆ ಮಾಡಿರುತ್ತಾರೆ. ಆದರೆ ಆ ವಿಶಿಷ್ಟ ಸಂದರ್ಭದಲ್ಲಿ ಆ ವಾದವು ಯಾವ ಅಂಶಕ್ಕೆ ಅನ್ವಯಿಸುವುದು ಎಂಬ ಬಗ್ಗೆ ತೀರ್ಪು ನೀಡಲಾಗು ತ್ತದೆ.

ಭಗವಂತನ ನಾಮ ಸಂಕೀರ್ತನೆಯೇ ಮನುಷ್ಯನನ್ನು ದಿವ್ಯ ಮಟ್ಟಕ್ಕೆ ಕೊಂಡೊಯ್ಯುವ ಏಕೈಕ ಸಾಧನವಾಗಿದೆ ಎಂದು ಶಾಸ್ತ್ರ ಪ್ರಮಾಣಗಳನ್ನು ಕುರಿತು ಶ್ರೀ ಚೈತನ್ಯರು ತಮ್ಮ ತೀರ್ಪನ್ನು ನೀಡಿದ್ದಾರೆ. ಮತ್ತು ಅದು ಪರಿಣಾಮಕಾರಿಯಾಗಿದೆಯೆಂಬುದು ವಾಸ್ತವಿಕವಾಗಿ ನಮಗೆ ಕಂಡು ಬರುತ್ತದೆ. ಈ ಕ್ರಮವನ್ನು ಆಸಕ್ತಿಯಿಂದ ಅನುಸರಿಸಿದ ನಮ್ಮ ಪ್ರತಿಯೊಬ್ಬ ಶಿಷ್ಯನನ್ನೂ ಪರೀಕ್ಷಿಸಿ ನೋಡಬಹುದಾಗಿದೆ. ಮತ್ತು ಅವರು ದಿವ್ಯ ಸಾಕ್ಷಾತ್ಕಾರದ ಹಾದಿಯಲ್ಲಿ ತತ್ವಜ್ಞಾನಿಗಳು, ಧರ್ಮಸಾಧಕರು, ಯೋಗಿಗಳು, ಕರ್ಮಿಗಳು ಮೊದಲಾದವರಿಗಿಂತ ಬಹು ಮುಂದೆ ಹೋಗಿದ್ದಾರೆಂಬುದನ್ನು ನಿಷ್ಪಕ್ಷಪಾತವಾಗಿ ಯಾರಾದರೂ ಮನಗಾಣಬಹುದಾಗಿದೆ.

ನಾವು ಸನ್ನಿವೇಶಾನುಕೂಲವಾದ ಎಲ್ಲವನ್ನೂ ಅಂಗೀಕರಿಸಬೇಕಾಗುತ್ತದೆ. ಕೆಲವೊಂದು ಸಂದರ್ಭದಲ್ಲಿ ಇತರ ವಿಧಾನವನ್ನು ಒಪ್ಪದ ಮಾತ್ರದಿಂದ ಅವು ನಿಜವಾದುವಲ್ಲ ಎಂದು ಅರ್ಥ ವಲ್ಲ. ಆದರೆ ಆಯಾಕಾಲದಲ್ಲಿ, ವಯಸ್ಸು, ಸಮಯ ಮತ್ತು ಉದ್ದೇಶಗಳನ್ನು ಗಮನಿಸಿ, ಇತರ ವಿಧಾನಗಳು ಸರಿಯಾಗಿದ್ದರೂ ಕೆಲವು ಸಲ ಅವುಗಳನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಪ್ರತಿ ಯೊಂದನ್ನೂ ನಾವು ಅದರ ಫಲದಿಂದ ಪರೀಕ್ಷಿಸಬೇಕಾಗುತ್ತದೆ. ಈ ಪರೀಕ್ಷಣದ ಪ್ರಕಾರ, ಈ ಯುಗದಲ್ಲಿ ಹರೇ ಕೃಷ್ಣ ಮಂತ್ರ ಜಪವೇ ನಿಸ್ಸಂಶಯವಾಗಿ ಬಹು ಪರಿಣಾಮಕಾರಿಯಾಗಿದೆ.

**ಎ. ಸಿ. ಭಕ್ತಿವೇದಾಂತಸ್ವಾಮಿ**



# ಕೃಷ್ಣಪ್ರಜ್ಞೆ
## ಹಿಂದೂ ಮತವೇ ಅಥವಾ ದೈವೀಸಂಸ್ಕೃತಿಯೇ ?

**ಕೃಷ್ಣಪ್ರಜ್ಞಾ ಆಂದೋಲನವನ್ನು ಅನುಕೂಲಕರವಾದ ಒಂದು ಐತಿಹಾಸಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬಿಂಬಿಸಲು ಪ್ರಯತ್ನಿಸಿದಾಗ, ಅನೇಕರು ಅದನ್ನು ಹಿಂದೂಧರ್ಮವೆಂದು ತಿಳಿದುಕೊಳ್ಳುತ್ತಾರೆ. ಇದು ಅಪಾರ್ಥಕರ. ಆಧುನಿಕ ಹಿಂದೂ ಧರ್ಮದಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿರುವ ವಿಶ್ವದೇವತಾ ವಾದ, ಬಹು ದೇವತಾವಾದ, ಜಾತಿ ಪದ್ಧತಿ ಇವುಗಳನ್ನು ಶ್ರೀಲ ಪ್ರಭುಪಾದರು ಮನ್ನಿಸುವುದಿಲ್ಲ. ಕೃಷ್ಣಪ್ರಜ್ಞೆಯೂ ಆಧುನಿಕ ಹಿಂದೂಧರ್ಮವೂ ಒಂದೇ ಬಗೆಯ ಪ್ರಾಚೀನ ವೈದಿಕ ಸಂಸ್ಕೃತಿಯ ಐತಿಹಾಸಿಕ ಮೂಲದಿಂದ ಬಂದಿದ್ದರೂ, ಹಿಂದೂ ಧರ್ಮವೂ ಇನ್ನಿತರ "ಮಹಾಧರ್ಮ"ಗಳಂತೆ, ಒಂದು ಮತೀಯ ವ್ಯವಸ್ಥೆ ಯಾಗಿದೆ. ಆದರೆ ಕೃಷ್ಣಪ್ರಜ್ಞೆಯು ವಿಶ್ವಧರ್ಮವಾಗಿದ್ದು ಅದು ಸಾಪೇಕ್ಷ ಮತ್ತು ಮತೀಯ ಉಪಾಧಿಗಳಿಂದ ಅತೀತವಾಗಿದೆ.**

ಕೃಷ್ಣಪ್ರಜ್ಞಾ ಆಂದೋಲನವು ಹಿಂದೂ ಧರ್ಮವನ್ನು ಪ್ರತಿನಿಧಿಸುತ್ತದೆ ಎಂಬ ತಪ್ಪು ಕಲ್ಪನೆ ಇದೆ. ವಸ್ತುತಃ, ಕೃಷ್ಣಪ್ರಜ್ಞೆಯು ಇತರ ಶ್ರದ್ಧೆ ಅಥವಾ ಧರ್ಮಗಳನ್ನು ನಿರಾಕರಿಸುವ ಯಾವ ಶ್ರದ್ಧೆಯೂ ಧರ್ಮವೂ ಆಗಿಲ್ಲ. ಪ್ರಾಯಃ ಅದು ಇಡೀ ಮಾನವ ಸಮಾಜವನ್ನು ಉದ್ದೇಶಿಸಿದ ಅವಶ್ಯವಾಗಿಯೂ ಒಂದು ಸಾಂಸ್ಕೃತಿಕವಾದ ಆಂದೋಲನವಾಗಿದೆ ಮತ್ತು ಅದು ಯಾವುದೇ ವಿಶಿಷ್ಟ ಮತೀಯ ಶ್ರದ್ಧೆಯನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಜನರು ದೇವರನ್ನು ಹೇಗೆ ಪ್ರೀತಿಸಬೇಕೆಂಬುದನ್ನು ವಿಶೇಷವಾಗಿ ತಿಳಿಸಿಕೊಡುವುದೇ ಈ ಸಾಂಸ್ಕೃತಿಕ ಆಂದೋಲನದ ಗುರಿಯಾಗಿದೆ.

ಭಾರತದ ಒಳಗೂ ಹೊರಗೂ ಇರುವ ಭಾರತೀಯರು ನಾವು ಹಿಂದೂಧರ್ಮ ಪ್ರಚಾರ ಮಾಡುತ್ತಿದ್ದೇವೆ. ಎಂದು ಕೆಲವು ಸಲ ಭಾವಿಸುತ್ತಾರೆ. ನಾವು ಹಾಗೆ ಸರ್ವಥಾ ಮಾಡುತ್ತಿಲ್ಲ. ಭಗವದ್ಗೀತೆಯಲ್ಲಿ ಹಿಂದೂ ಎಂಬ ಪದವೇ ಇಲ್ಲ. ವಾಸ್ತವಿಕವಾಗಿ ಇಡೀ ವೇದ ಸಾಹಿತ್ಯದಲ್ಲಿ ಎಲ್ಲಿಯೂ ಹಿಂದೂ ಎಂಬ ಪದ ಪ್ರಯೋಗವಿಲ್ಲ. ಈ ಪದವನ್ನು ಭಾರತದ ಅಕ್ಕ ಪಕ್ಕದ ಆಫ್‌ಘಾನಿಸ್ತಾನ್, ಬಲೂಚಿಸ್ತಾನ್ ಮತ್ತು ಪರ್ಶಿಯಾ ದೇಶದ ಮುಸ್ಲಿಮರು ಬಳಕೆಗೆ ತಂದಿದ್ದಾರೆ. ಭಾರತದ ವಾಯುವ್ಯಗಡಿಯಲ್ಲಿ ಸಿಂಧೂನದಿ ಇದೆ. ಅಲ್ಲಿರುವ ಮುಸ್ಲಿಮರಿಗೆ ಸಿಂಧು ಎಂದು ಸರಿಯಾಗಿ ಉಚ್ಚರಿಸಲು ಬಾರದೆ ಅದನ್ನು ಹಿಂದೂ ನದಿ ಎಂದು ಕರೆದರು. ಭಾರತ

ದಲ್ಲಿ ವೇದ ಭಾಷೆಯ ಪ್ರಕಾರ ಐರೋಪ್ಯರನ್ನು ಮ್ಲೇಚ್ಛರು ಅಥವಾ ಯವನರು ಎಂದು ಕರೆಯಲಾಗುತ್ತದೆ. ಹೀಗೆಯೇ ಹಿಂದೂ ಎಂಬುದು ಕೂಡ ಮುಸ್ಲಿಮರು ಕೊಟ್ಟ ಒಂದು ಹೆಸರಾಗಿದೆ.

ಯಥಾವತ್ತಾದ ಭಾರತೀಯ ಸಂಸ್ಕೃತಿಯನ್ನು ಭಗವದ್ಗೀತೆಯಲ್ಲಿ ವಿವರಿಸಲಾಗಿದೆ. ಪ್ರಕೃತಿ ಗುಣಗಳಿಗನುಸಾರವಾಗಿ ವಿವಿಧ ಬಗೆಯ ಮಾನವರಿದ್ದಾರೆ. ಅವರನ್ನು ಸಾಮಾನ್ಯವಾಗಿ ನಾಲ್ಕು ಸಾಮಾಜಿಕವಾದ ವರ್ಗಗಳಲ್ಲಿ ಮತ್ತು ನಾಲ್ಕು ಆಧ್ಯಾತ್ಮವರ್ಗಗಳಲ್ಲಿ ವಿಂಗಡಿಸಲಾಗಿದೆ ಎಂದು ಗೀತೆಯಲ್ಲಿ ಹೇಳಿದೆ. ಈ ಸಾಮಾಜಿಕ ಮತ್ತು ಆಧ್ಯಾತ್ಮಿಕ ವಿಭಾಗವನ್ನು ವರ್ಣಾಶ್ರಮ ಧರ್ಮವೆಂದು ಕರೆಯುತ್ತಾರೆ. ನಾಲ್ಕು ವರ್ಣಗಳು ಅಥವಾ ಸಾಮಾಜಿಕ ವಿಭಾಗಗಳೆಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ. ನಾಲ್ಕು ಆಶ್ರಮಗಳೆಂದರೆ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ. ಈ ವರ್ಣಾಶ್ರಮ ಧರ್ಮಗಳನ್ನು ಪುರಾಣಗಳೆಂಬ ವೈದಿಕ ಶಾಸ್ತ್ರಗಳಲ್ಲಿ ವಿವರಿಸಲಾಗಿದೆ. ಪ್ರತಿಯೊಬ್ಬನೂ ಕೃಷ್ಣಜ್ಞಾನವನ್ನು ಹೊಂದುವ ಮಾರ್ಗದಲ್ಲಿ ಪ್ರಗತಿಸಾಧಿಸುವಂತೆ ಶಿಕ್ಷಣ ನೀಡುವುದೇ ಈ ವೇದ ಸಂಸ್ಕೃತಿಯ ಸಾಂಸ್ಥಿಕ ಗುರಿಯಾಗಿದೆ. ಇದೇ ಇಡೀ ವೈದಿಕ ಕಾರ್ಯಕ್ರಮ.

ಶ್ರೀ ಚೈತನ್ಯರು ರಾಮಾನಂದ ರಾಯನೆಂಬ ಮಹಾಭಕ್ತನೊಡನೆ ಮಾತನಾಡುತ್ತಿದ್ದಾಗ, "ಮಾನವ ಜೀವನದ ಮೂಲ ತತ್ವವೇನು? " ಎಂದು ಪ್ರಶ್ನಿಸಿದರು. ವರ್ಣಾಶ್ರಮ ಧರ್ಮವನ್ನು ಅಂಗೀಕರಿಸಿದಾಗಲೇ ಮಾನವ ನಾಗರಿಕತೆಯು ಪ್ರಾರಂಭವಾಗುತ್ತದೆ ಎಂದು ರಾಮಾನಂದ ರಾಯ್ ಉತ್ತರಿಸಿದರು. ವರ್ಣಾಶ್ರಮ ಧರ್ಮದ ಹಂತಕ್ಕೆ ತಲಪುವ ಮೊದಲು ಮಾನವ ನಾಗರಿಕತೆಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಂತೆಯೇ ಕೃಷ್ಣ ಪ್ರಜ್ಞೆಯೆಂದರೆ ದೈವೀ ವರ್ಣಾಶ್ರಮವೆಂದೂ ದೈವೀ ಸಂಸ್ಕೃತಿಯೆಂದೂ ಪ್ರಸಿದ್ಧವಾದ ಸರಿಯಾದ ಮಾನವ ನಾಗರಿಕತೆಯನ್ನು ಸ್ಥಾಪಿಸಲು ಕೃಷ್ಣಪ್ರಜ್ಞಾ ಆಂದೋಲನವು ಯತ್ನಿಸುತ್ತಿದೆ.

ಭಾರತದಲ್ಲಿ ವರ್ಣಾಶ್ರಮ ಧರ್ಮ ಪದ್ಧತಿಯನ್ನು ವಿಕೃತಗೊಳಿಸಲಾಗಿದೆ. ಹೀಗಾಗಿ ಬ್ರಾಹ್ಮಣ (ಅತ್ಯುನ್ನತ ಸಮಾಜ ವರ್ಗವಾದ) ಕುಟುಂಬದಲ್ಲಿ ಜನಿಸಿದವನನ್ನು ಬ್ರಾಹ್ಮಣನೆಂದೇ ಅಂಗೀಕರಿಸಬೇಕೆಂದು ಹೇಳಲಾಗುತ್ತದೆ. ಆದರೆ ಈ ಮಾತನ್ನು ಶಾಸ್ತ್ರವು ಅಂಗೀಕರಿಸುವುದಿಲ್ಲ. ಗೋತ್ರ ಅಥವಾ ಕುಟುಂಬದ ಆನುವಂಶಿಕ ವರ್ಣದ ಪ್ರಕಾರ ಒಬ್ಬನ ಪೂರ್ವಜನು ಬ್ರಾಹ್ಮಣನಾಗಿದ್ದಿರಬಹುದು, ಆದರೆ ವಾರ್ಣಾಶ್ರಮ ಧರ್ಮವೆಂಬುದು ಮನುಷ್ಯನು ಹೊಂದಿರುವ ನೈಜ ಗುಣಗಳನ್ನು ಆಧರಿಸಿರುವುದೇ ಹೊರತು, ಅವನ ಹುಟ್ಟು ಅಥವಾ ವಂಶವನ್ನಲ್ಲ. ಆದುದರಿಂದ, ವಿಶೇಷವಾಗಿ ಶಂಕರಾಚಾರ್ಯರಿಂದ ಪ್ರಭಾವಿತರಾದ ಹಿಂದೂಗಳ ಈಗಿನ ಹಿಂದೂ ಧರ್ಮವನ್ನು ನಾವು ಪ್ರಚಾರ ಮಾಡುತ್ತಿಲ್ಲ. ಶಂಕರಾಚಾರ್ಯರೂ ಪರಮ ಸತ್ಯ ಸ್ವರೂಪನು ವ್ಯಕ್ತಿ ಶೂನ್ಯನೆಂದು ಬೋಧಿಸಿದರು. ಪರೋಕ್ಷವಾಗಿ ಅವರು ದೇವರ ಅಸ್ತಿತ್ವವನ್ನೇ ನಿರಾಕರಿಸಿದಂತಾಯಿತು.

ಶಂಕರಾಚಾರ್ಯರು ವಿಶೇಷ ಉದ್ದೇಶ ಹೊಂದಿದ್ದರು; ಅವರು, ಬೌದ್ಧ ಧರ್ಮದ ಪ್ರಭಾವದ ಅನಂತರ ಮತ್ತೆ ವೈದಿಕ ಪ್ರಭಾವವನ್ನು ಪುನಃ ಸ್ಥಾಪಿಸಲು ಜನ್ಮವೆತ್ತಿದರು. ಸಾಮ್ರಾಟ ಅಶೋಕನು ಇಪ್ಪತ್ತಾರು ಶತಮಾನಗಳ ಹಿಂದೆ ಬೌದ್ಧ ಧರ್ಮಕ್ಕೆ ರಾಜಾಶ್ರಯ

ನೀಡಿದ್ದನು. ಅಂತೆಯೇ ಅದು ಇಡೀ ಭಾರತವನ್ನು ವ್ಯಾಪಿಸಿಕೊಂಡಿತು. ವೇದಸಾಹಿತ್ಯದ ಪ್ರಕಾರ, ಬುದ್ಧನು ವಿಶಿಷ್ಟ ಉದ್ದೇಶಕ್ಕಾಗಿ ವಿಶೇಷ ಶಕ್ತಿಹೊಂದಿ ಜನ್ಮವೆತ್ತಿದ ಕೃಷ್ಣನ ಅವತಾರವೇ ಎಂದು ಹೇಳಲಾಗಿದೆ. ಆತನ ವಿಚಾರ ಪ್ರಣಾಲಿಯನ್ನು ಧರ್ಮವನ್ನು ವ್ಯಾಪಕ ವಾಗಿ ಸ್ವೀಕರಿಸಲಾಯಿತು. ಆದರೆ ಬುದ್ಧನು ವೇದ ಪ್ರಾಮಾಣ್ಯವನ್ನು ನಿರಾಕರಿಸಿದನು. ಬೌದ್ಧ ಧರ್ಮವು ಪ್ರಸರಿಸುತ್ತಿದ್ದಂತೆ, ಭಾರತದಲ್ಲಿಯೂ ಇತರ ಕಡೆಗಳಲ್ಲಿಯೂ ವೈದಿಕ ಸಂಸ್ಕೃತಿಯು ಸ್ಥಗಿತಗೊಂಡಿತು. ಈ ಬೌದ್ಧದರ್ಶನ ವಿಧಾನವನ್ನು ಹೊಡೆದಟ್ಟುವುದೇ ಶಂಕರಾಚಾರ್ಯರ ಏಕಮೇವ ಗುರಿಯಾಗಿದ್ದುದರಿಂದ, ಅವರು ಮಾಯಾವಾದವೆಂಬ ಮತವನ್ನು ಬಳಕೆಗೆ ತಂದರು.

ನಿಜ ಹೇಳುವುದಾದರೆ, ಮಾಯಾವಾದ ತತ್ವವು ನಾಸ್ತಿಕ ತತ್ವವಾಗಿದೆ, ಈ ವಿಧಾನದಲ್ಲಿ ದೇವರೊಬ್ಬನಿದ್ದಾನೆ ಎಂದು ಊಹಿಸಲಾಗುತ್ತದೆ. ಈ ಮಾಯಾವಾದ ತತ್ವವೂ ಅನಾದಿ ಕಾಲದಿಂದ ಸಾಗಿ ಬಂದಿದೆ. ಇಂದಿನ ಭಾರತೀಯ ಧರ್ಮ ಪದ್ಧತಿಯು, ಬೌದ್ಧ ತತ್ವಗಳೊಂದಿಗೆ ಹೊಂದಾಣಿಕೆಗೊಂಡು ಶಂಕರಾಚಾರ್ಯರ ಮಾಯಾವಾದ ತತ್ವವನ್ನೇ ಆಧರಿಸಿದೆಯೆಂದು ಹೇಳ ಬಹುದು. ಮಾಯಾವಾದ ತತ್ವದ ಪ್ರಕಾರ ನಿಜವಾಗಿ ದೇವರೇ ಇಲ್ಲ. ಇದ್ದರೂ ಅವನು ವ್ಯಕ್ತಿ ಶೂನ್ಯನು (ನಿರಾಕಾರ) ಮತ್ತು ಸರ್ವವ್ಯಾಪ್ತಿ ಅವನನ್ನು ಯಾವ ರೂಪದಲ್ಲಾದರೂ ಕಲ್ಪಿಸಿ ಕೊಳ್ಳಬಹುದು. ಈ ಸಿದ್ಧಾಂತವು ವೇದ ಸಾಹಿತ್ಯಕ್ಕೆ ಸಮ್ಮತವಾದುದಲ್ಲ. ಈ ಸಾಹಿತ್ಯದಲ್ಲಿ ಬೇರೆ ಬೇರೆ ಉದ್ದೇಶಗಳಿಗಾಗಿ ಆರಾಧಿಸಲ್ಪಡುವ ಅನೇಕ ದೇವತೆಗಳನ್ನು ಕುರಿತು ಹೇಳಲಾಗಿದೆ. ಆದರೆ ಎಲ್ಲ ಸಂದರ್ಭದಲ್ಲಿಯೂ ಪರಮ ದೇವೋತ್ತಮ ಪುರುಷನಾದ ವಿಷ್ಣುವೇ ಪರಮ ನಿಯಾಮಕನೆಂದು ಅಂಗೀಕರಿಸಲಾಗಿದೆ. ಇದೇ ನಿಜವಾದ ವೇದ ಸಂಸ್ಕೃತಿ.

ಕೃಷ್ಣಪ್ರಜ್ಞಾ ತತ್ವವು ದೇವರ ಅಥವಾ ದೇವತೆಗಳ ಅಸ್ತಿತ್ವವನ್ನು ನಿರಾಕರಿಸುವುದಿಲ್ಲ. ಆದರೆ ಮಾಯಾವಾದ ತತ್ವವು ಎರಡನ್ನೂ ನಿರಾಕರಿಸುತ್ತದೆ; ದೇವರೂ ಇಲ್ಲ, ದೇವತೆಗಳೂ ಇಲ್ಲ ಎಂಬುದೇ ಅದರ ವಾದ. ಮಾಯಾವಾದಿಗಳ ಮಟ್ಟಿಗೆ ಕೊನೆಗೆ ಎಲ್ಲವೂ ಶೂನ್ಯವೇ. ಸಮಾಜದಲ್ಲಿ ಸಾಮಾನ್ಯವಾಗಿ ಆರಾಧಿಸಲ್ಪಡುವ ವಿಷ್ಣು, ದುರ್ಗಾ, ಶಿವ, ಅಥವಾ ಸೂರ್ಯ ದೇವ–ಇವರೆಲ್ಲ ದೇವತೆಗಳಾಗಿದ್ದು--ಯಾರನ್ನಾದರೂ ಪ್ರಮಾಣವೆಂದು ಕಲ್ಪಿಸಿಕೊಳ್ಳಬಹು ದೆಂದು ಅವರು ಹೇಳುತ್ತಾರೆ. ಆದರೆ ನಿಜವಾಗಿ ಮಾಯಾವಾದ ದರ್ಶನವು ಯಾವ ದೇವತೆಯ ಅಸ್ತಿತ್ವವನ್ನು ಒಪ್ಪುವುದಿಲ್ಲ. ಒಬ್ಬ ವ್ಯಕ್ತಿಗತ ಬ್ರಹ್ಮನಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದು ಅಸಾಧ್ಯವಾಗಿರುವುದರಿಂದ. ಇವುಗಳಲ್ಲಿ ಯಾವುದಾದರೊಂದು ರೂಪವನ್ನು ಚಿಂತಿಸಬಹು ದೆಂದು ಮಾಯಾವಾದಿಗಳು ಹೇಳುತ್ತಾರೆ. ಇದೊಂದು ಹೊಸ ಪದ್ಧತಿ. ಇದನ್ನು ಪಂಚೋ ಪಾಸವ ಎಂದು ಕರೆಯುವುದುಂಟು. ಇದನ್ನು ಶಂಕರಾಚಾರ್ಯರೇ ಪ್ರಚಾರಕ್ಕೆ ತಂದರು. ಭಗವದ್ಗೀತೆಯು ಇಂಥ ಯಾವ ತತ್ವಗಳನ್ನು ಬೋಧಿಸಿಲ್ಲ. ಆದುದರಿಂದ ಇವು ಪ್ರಮಾಣ ಭೂತವಾದುವಲ್ಲ.

ಭಗವದ್ಗೀತೆಯು ದೇವತೆಗಳ ಅಸ್ತಿತ್ವವನ್ನು ಅಂಗೀಕರಿಸುತ್ತದೆ. ದೇವತೆಗಳನ್ನು ಕುರಿತು ವೇದಗಳು ಪ್ರಸ್ತಾವಿಸಿವೆ. ಕಾರಣ, ಅವರ ಅಸ್ತಿತ್ವವನ್ನು ಅಲ್ಲಗಳೆಯಲು ಬರುವುದಿಲ್ಲ. ಆದರೆ ಶಂಕರಾಚಾರ್ಯರು ಹೇಳುವ ರೀತ್ಯಾ ಈ ದೇವತೆಗಳನ್ನು ಅರಿಯಲು ಅಥವಾ ಆರಾಧಿಸಲು

ಬರುವುದಿಲ್ಲ. ಉಪದೇವತೆಗಳ ಆರಾಧನೆಯನ್ನು ಭಗವದ್ಗೀತೆಯು ತಿರಸ್ಕರಿಸಿ ಅದನ್ನು ಹೀಗೆ ಸ್ಪಷ್ಟವಾಗಿ ನಿರೂಪಿಸಿದೆ (7-20):

ಕಾಮೈಸ್ತೈಸ್ತೈರ್ ಹೃತಜ್ಞಾನಾಃ ಪ್ರಪದ್ಯಂತೇ ಅನ್ಯದೇವತಾಃ ।
ತಂ ತಂ ನಿಯಮಮಂ ಆಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥

"ಯಾರ ಮನಸ್ಸುಗಳು ಭೌತಿಕ ಆಶಯಗಳಿಂದ ವಿಚಲಿತವಾಗಿವೆಯೋ ಅವರು ಉಪದೇವತೆಗಳಿಗೆ ಶರಣು ಹೋಗಿ ವಿಶಿಷ್ಟ ನೀತಿ ನಿಯಮಗಳನ್ನು ಅನುಸರಿಸಿ ತಮ್ಮ ತಮ್ಮ ಸ್ವಭಾವಾನುಗುಣವಾಗಿ ಆರಾಧಿಸುತ್ತಾರೆ." ಮುಂದುವರಿದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ಹೇಳುತ್ತಾನೆ (2-44):

ಭೋಗೈಶ್ವರ್ಯ-ಪ್ರಸಕ್ತಾನಾಮ್ ತಯಾಪಹೃತ ಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥

"ಇಂದ್ರಿಯ ಭೋಗದಲ್ಲಿ ಮತ್ತು ಭೌತಿಕ ಐಶ್ವರ್ಯದಲ್ಲಿ ಆಸಕ್ತ ಮನಸ್ಕರಾದವರಿಗೆ, ಅಂಥ ವಸ್ತುಗಳಿಂದ ವಿಸ್ಮಯರಾದವರಿಗೆ ಭಕ್ತಿಯುತ ಸೇವೆಯ ದೃಢನಿರ್ಧಾರವು ಉಂಟಾಗುವುದೇ ಇಲ್ಲ". ಅನೇಕ ಉಪದೇವತೆಗಳನ್ನು ಆರಾಧಿಸುವವರನ್ನು **ಹೃತ-ಜ್ಞಾನರು** ಎಂದರೆ "ಜ್ಞಾನ ಹೀನರು" ಎಂದು ಕರೆಯಲಾಗಿದೆ. ಇದನ್ನು ಭಗವದ್ಗೀತೆಯಲ್ಲಿ ಮತ್ತಷ್ಟು ವಿವರಿಸಲಾಗಿದೆ (7-23):

ಅಂತವತ್‌ತು ಫಲಂ ತೇಷಾಮ್ ತದ್ ಭವತ್ಯಲ್ಪ ಮೇಧಸಾಮ್ ।
ದೇವಾನ್ ದೇವ ಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಂ ಅಪಿ ॥

"ಅಲ್ಪಬುದ್ಧಿಯ ಮಾನವರು ಉಪದೇವತೆಗಳನ್ನು ಪೂಜಿಸುತ್ತಾರೆ. ಅವರಿಗೆ ದೊರೆಯುವ ಫಲಗಳೂ ಪರಿಮಿತ ಮತ್ತು ಅನಿತ್ಯ. ಉಪದೇವತೆಗಳನ್ನು ಪೂಜಿಸುವವರು ಆಯಾ ದೇವತಾ ಲೋಕಗಳಿಗೆ ಹೋಗುತ್ತಾರೆ. ಆದರೆ ನನ್ನ ಭಕ್ತರು ಮಾತ್ರ ನನ್ನ ಪರಂಧಾಮವನ್ನೇ ಸೇರುತ್ತಾರೆ". ಯಾವುದೇ ಭೌತಿಕ ಅನುಕೂಲವಾದರೂ ಅನಿತ್ಯ ದೇಹ ಸಂಬಂಧವುಳ್ಳದ್ದಾಗಿರುವುದರಿಂದ, ಉಪದೇವತೆಗಳು ನೀಡುವ ಪ್ರತಿಫಲಗಳೆಲ್ಲವೂ ಅನಿತ್ಯವಾಗಿರುವುವು. ಆಧುನಿಕ ವೈಜ್ಞಾನಿಕ ವಿಧಾನಗಳಿಂದಲಾಗಲೀ ಅಥವಾ ಉಪದೇವತೆಗಳ ಅನುಗ್ರಹ ಬಲದಿಂದಾಗಲೀ ದೊರೆಯುವ ಭೌತಿಕ ಫಲಗಳೆಲ್ಲವೂ ದೇಹದೊಂದಿಗೆ ಕೊನೆಗೊಳ್ಳುತ್ತವೆ. ಆದರೆ ಆಧ್ಯಾತ್ಮ ಸಾಧನೆ ಮಾತ್ರ ಎಂದೂ ಕೊನೆಗೊಳ್ಳುವುದಿಲ್ಲ.

ನಾವು ಮತೀಯ ಧರ್ಮ ಪ್ರಚಾರ ಮಾಡುತ್ತಿದ್ದೇವೆ ಎಂದು ಜನ ಭಾವಿಸಬಾರದು. ಕೇವಲ ದೇವರನ್ನು ಹೇಗೆ ಪ್ರೀತಿಸಬೇಕೆಂಬುದನ್ನು ಮಾತ್ರ ನಾವು ಉಪದೇಶಿಸುತ್ತಿದ್ದೇವೆ. ದೇವರ ಅಸ್ತಿತ್ವವನ್ನು ಕುರಿತಂತೆ ಅನೇಕ ವಾದಗಳಿವೆ. ಉದಾಹರಣೆಗೆ: ನಾಸ್ತಿಕನು ದೇವರ ಅಸ್ತಿತ್ವವನ್ನು ನಂಬುವುದೇ ಇಲ್ಲ. ನೊಬೆಲ್ ಪಾರಿತೋಷಿಕ ಪಡೆದ ಪ್ರೊಫೆಸರ್ ಜಾಕ್ವೆಸ್ ಮೊನಾಡ್‌ನಂಥ ನಾಸ್ತಿಕರು ಎಲ್ಲವೂ ಆಕಸ್ಮಿಕ ಎಂದು ಹೇಳಿಬಿಡುತ್ತಾರೆ. (ಭಾರತದ ಚಾರ್ವಾಕರಂಥ ನಾಸ್ತಿಕರು ಈ ತತ್ವವನ್ನು ಎಂದೋ ಪ್ರತಿಪಾದಿಸಿದ್ದಾರೆ.) ಕರ್ಮ-

ಮೀಮಾಂಸಿಗಳಂಥ ಇತರ ಕೆಲವು ದಾರ್ಶನಿಕರು ಹೇಳುವುದೆಂದರೆ, ಮನುಷ್ಯನು ತನ್ನ ಕಾರ್ಯವನ್ನು ಸೊಗಸಾಗಿ ಮತ್ತು ಪ್ರಾಮಾಣಿಕವಾಗಿ ಮಾಡುತ್ತ ಹೋದರೆ, ಫಲವು ತಾನಾಗಿಯೇ ಒದಗಿಬರುತ್ತದೆ. ದೇವರನ್ನು ಯಾಚಿಸಬೇಕಾಗಿಲ್ಲ. ಇದಕ್ಕೆ ಸಾಕ್ಷ್ಯವಾಗಿ, ಈ ತತ್ವ ಪ್ರತಿಪಾದಕರು ಮನುಷ್ಯನಿಗೆ ಕಾಯಿಲೆ ಬಂದರೆ, ಅದನ್ನು ಪ್ರತಿರೋಧಿಸಲು ಅವನು ಔಷಧ ಸೇವಿಸಿದರೆ ಸಾಕು, ಕಾಯಿಲೆ ವಾಸಿಯಾಗುತ್ತದೆ ಎಂದು ವಾದಿಸುತ್ತಾರೆ. ಅತ್ಯುತ್ತಮ ಔಷಧ ನೀಡಿದರೂ ರೋಗಿಯು ಸಾಯಬಹುದು ಎಂಬುದು ನಮ್ಮ ನಿಲುವು. ಪರಿಣಾಮಗಳು ಸದಾ ನಿರೀಕ್ಷಿತವಲ್ಲ. ಪರಮನಿಯಾಮಕನಾದ ಒಬ್ಬ ಸ್ವಾಮಿ ಇದ್ದಾನೆ, **ದೈವ ನೇತ್ರೇಣ.** ಹಾಗಿಲ್ಲದಿದ್ದರೆ, ಒಬ್ಬ ಸಿರಿವಂತನ ಮತ್ತು ಪುಣ್ಯವಂತನ ಮಗ ಬೀದಿಯಲ್ಲಿ ಅಲೆಯುವ ಹಿಪ್ಪಿ ಏಕೆ ಆಗಬೇಕು ಅಥವಾ ಬಹು ಶ್ರಮಪಟ್ಟು ಸಿರಿವಂತನಾದವನಿಗೆ, "ನೀನು ಈಗ ಯಾವ ಆಹಾರವನ್ನೂ ತೆಗೆದುಕೊಳ್ಳಬೇಡ, ಕೇವಲ ಬಾರ್ಲಿ ನೀರನ್ನು ಮಾತ್ರ ಸೇವಿಸು" ಎಂದ ವೈದ್ಯನು ಏಕೆ ಹೇಳಬೇಕು ?

ಪರಮ ನಿಯಾಮಕನಾದ ಭಗವಂತನಿಲ್ಲದೆಯೇ ಈ ಜಗತ್ತು ಸಾಗಿದೆಯೆಂದು ಕರ್ಮ ಮೀಮಾಂಸಾ ತತ್ವವು ಹೇಳುತ್ತದೆ. ಎಲ್ಲವೂ ಮೋಹಾನುವರ್ತೀ(**ಕಾಮ ಹೈತುಕಮ್** ಎಂದು ಈ ತತ್ವಗಳು ಪ್ರತಿಪಾದಿಸುತ್ತವೆ. ಮೋಹವಶನಾಗಿ ಮನುಷ್ಯನು ಸ್ತ್ರೀಯಿಂದ ಆಕರ್ಷಿತನಾಗುತ್ತಾನೆ. ಅದೃಷ್ಟವಶಾತ್ ಅವರು ಲೈಂಗಿಕ ಸಂಪರ್ಕ ಮಾಡುತ್ತಾರೆ. ಆ ಸ್ತ್ರೀ ಗರ್ಭಿಣಿಯಾಗುತ್ತಾಳೆ. ಅವಳು ಗರ್ಭಿಣಿಯಾಗಬೇಕೆಂದು ಯಾರೂ ಪೂರ್ವ ಯೋಜನೆ ಮಾಡಿರುವುದಿಲ್ಲ. ಆದರೆ ಸ್ತ್ರೀಪುರುಷ ಸಮಾಗಮದ ಸ್ವಾಭಾವಿಕ ಪರಿಣಾಮವಾಗಿ ಅದು ಸಂಭವಿಸುತ್ತದೆ. ಭಗವದ್ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ಆಸುರೀಯವೆಂದು ವರ್ಣಿಸಿದ ನಾಸ್ತಿಕ ವಾದವು, ಎಲ್ಲವೂ ವಾಸ್ತವಿಕವಾಗಿ ಹೀಗೆಯೇ ನಡೆದಿದೆ, ಇದೆಲ್ಲವೂ ಸ್ವಾಭಾವಿಕ ಆಕರ್ಷಣೆಯಿಂದುಂಟಾಗುವ ಆಕಸ್ಮಿಕ ಎಂದು ಹೇಳುತ್ತದೆ. ಮಕ್ಕಳು ಬೇಡವಾದರೆ ಗರ್ಭನಿರೋಧಕಗಳನ್ನು ಬಳಸಬಹುದೆಂಬ ವಿಚಾರಕ್ಕೆ ಈ ಆಸುರೀ ತತ್ವವು ಸಮರ್ಥನೆ ನೀಡುತ್ತದೆ.

ಹೀಗಿದ್ದರೂ, ನಿಜವಾಗಿ ಪ್ರತಿಯೊಂದಕ್ಕೂ ಸಂಬಂಧಿಸಿದಂತೆ; ಒಂದು ಮಹಾ ಯೋಜನೆ ಇದೆ–ಅದೇ ವೈದಿಕ ಯೋಜನೆ. ಸ್ತ್ರೀ ಪುರುಷರು ಹೇಗೆ ಸಮಾಗಮ ಮಾಡಬೇಕು. ಮಕ್ಕಳನ್ನು ಹೇಗೆ ಹೆರಬೇಕು. ಲೈಂಗಿಕ ಜೀವನದ ಉದ್ದೇಶವೇನು ಇತ್ಯಾದಿ ವಿಷಯಗಳನ್ನು ಕುರಿತು ವೈದಿಕ ಸಾಹಿತ್ಯವು ನಿರ್ದೇಶಗಳನ್ನು ನೀಡಿದೆ. ವೇದಶಾಸ್ತ್ರಗಳಿಗೆ ಮತ್ತು ತದನುಗುಣವಾದ ನೀತಿ ನಿಯಮಗಳಿಗೆ ಅನುಸಾರವಾದ ಲೈಂಗಿಕ ಜೀವನವು ಶುದ್ಧವಾದುದು ಮತ್ತು ತನಗೆ ಒಪ್ಪಿತ ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಆದರೆ ಮನಬಂದಂತೆ ಕಾಮಿಸುವುದು ಅಗ್ರಾಹ್ಯ. ಆಕಸ್ಮಿಕ ಲೈಂಗಿಕ ಆಕರ್ಷಣೆಯಿಂದ ಸಂಪರ್ಕವುಂಟಾಗಿ ಮಕ್ಕಳು ಹುಟ್ಟಿದರೆ, ಆ ಮಕ್ಕಳನ್ನು ವರ್ಣಸಂಕರ ಮಕ್ಕಳು ಎಂದರೆ ಅನಾವಶ್ಯಕ ಮಕ್ಕಳು ಎಂದು ಕರೆಯಲಾಗುತ್ತದೆ. ಇದು ಪ್ರಾಣಿಲೋಕದಲ್ಲಿ ಸರಿ. ಮಾನವ ಸಮಾಜಕ್ಕೆ ಒಗ್ಗುವುದಲ್ಲ. ಮನುಷ್ಯನು ಯೋಜನಾಬದ್ಧನು. 'ಮಾನವ ಜೀವಿತವು ಯೋಜನಾಬದ್ಧವಲ್ಲ, ಎಲ್ಲವೂ ಒಂದು ಆಕಸ್ಮಿಕ ಅಥವಾ ಭೌತಿಕ ಆವಶ್ಯಕತೆಯ ಫಲ,' ಎಂಬ ತತ್ವವನ್ನು ನಾವು ಒಪ್ಪಲಾರೆವು.

ದೇವರೇ, ಇಲ್ಲ, ಮನುಷ್ಯನು ತನ್ನ ಕೆಲಸವನ್ನು ತಾನು ಎಂದಿನಂತೆ ಮಾಡುತ್ತಿರಬೇಕು, ಸಮಾಜದಲ್ಲಿ ಶಾಂತಿ ಸುವ್ಯವಸ್ಥೆಯಿರಲು ಅವನು ಯಾವುದೋ ರೂಪದಲ್ಲಿ ದೇವರನ್ನು ಊಹಿಸಿಕೊಳ್ಳಬಹುದು ಎಂಬ ಶಂಕರಾಚಾರ್ಯರ ತತ್ವವು ಕೂಡ ಸರಿಸುಮಾರು ಈ ಆಕಸ್ಮಿಕ ಮತ್ತು ಆವಶ್ಯಕತಾ ತತ್ವವನ್ನೇ ಆಧರಿಸಿದೆಯೆಂದು ಹೇಳಬಹುದು. ಆದರೆ ಇದರಿಂದ ಸಂಪೂರ್ಣ ಭಿನ್ನವಾದ ನಮ್ಮ ನೀತಿಯು ಪ್ರಮಾಣ ಪುರಸ್ಸರವಾದುದಾಗಿದೆ. ಕೃಷ್ಣನು ಈ ದಿವ್ಯ ವರ್ಣಾಶ್ರಮ ಧರ್ಮವನ್ನೇ ಸೂಚಿಸಿದ್ದಾನೆ. ಅವನು ಸೂಚಿಸಿದ್ದು ಇಂದಿನ ಜಾತಿ ಪದ್ಧತಿಯನ್ನಲ್ಲ. ಈಗಿರುವ ಜಾತಿ ಪದ್ಧತಿಯನ್ನು ಈಗ ಭಾರತದಲ್ಲಿಯೇ ಖಂಡಿಸಲಾಗುತ್ತಿದೆ. ಅದು ಖಂಡನೀಯವೇ ಸರಿ. ಮಾನವರನ್ನು ಹುಟ್ಟಿನ ಆಧಾರದ ಮೇಲೆ ಬಗೆಬಗೆಯಾಗಿ ವರ್ಗೀಕರಿಸುವುದು ವೇದ ಸಮ್ಮತವಾಗಿಲ್ಲ.

ಸಮಾಜದಲ್ಲಿ ಮಾನವರು ಅನೇಕ ವರ್ಗವಾಗಿದ್ದಾರೆ. ಕೆಲವರು ಇಂಜಿನಿಯರರು, ಕೆಲವರು ವೈದ್ಯರು, ಮತ್ತೆ ಕೆಲವರು ಔಷಧ ವ್ಯಾಪಾರಿಗಳು, ವ್ಯಾಪಾರಿಗಳು, ವರ್ತಕರು, ಹೀಗೆಯೇ ಈ ಎಲ್ಲ ವರ್ಗ ವೈವಿಧ್ಯಗಳನ್ನು ಹುಟ್ಟಿನ ಆಧಾರದ ಮೇಲೆ ನಿರ್ಧರಿಸಲು ಬರುವುದಿಲ್ಲ, ಇವೆಲ್ಲವೂ ಗುಣ ಕರ್ಮಗಳನ್ನು ಆಧರಿಸಿವೆ.

ಜನ್ಮಾಧಾರಿತ ಜಾತಿ ಪದ್ಧತಿ ವೇದ ಸಮ್ಮತವಾದುದೇ ಅಲ್ಲ. ನಾವು ಅದನ್ನು ಒಪ್ಪುವುದೂ ಇಲ್ಲ. ಈಗ ಭಾರತದ ಜನಕೋಟಿಯು ನಿರಾಕರಿಸುತ್ತಿರುವ ಜಾತಿ ಪದ್ಧತಿಗೂ ನಮಗೂ ಯಾವ ನಂಟೂ ಇಲ್ಲ. ಇದಕ್ಕೆ ಪ್ರತಿಯಾಗಿ ಬ್ರಾಹ್ಮಣತ್ವವನ್ನು ಸಂಪಾದಿಸಿ ಜೀವನದ ಅತ್ಯುನ್ನತ ಸ್ಥಾನವನ್ನು ಪಡೆದುಕೊಳ್ಳಲು ನಾವು ಪ್ರತಿಯೊಬ್ಬನಿಗೂ ಅವಕಾಶ ನೀಡುತ್ತೇವೆ.

ಈಗ ಬ್ರಾಹ್ಮಣರ ಎಂದರೆ ಆಧ್ಯಾತ್ಮ ಮಾರ್ಗದರ್ಶಿಗಳ ಮತ್ತು ಕ್ಷತ್ರಿಯರ ಎಂದರೆ ಒಳ್ಳೆಯ ಆಡಳಿತಗಾರರ ಕೊರತೆಯಿರುವುದರಿಂದ ಜಗತ್ತಿನ ಆಡಳಿತ ಕ್ರಮವನ್ನು ಶೂದ್ರರು ಎಂದರೆ ಕಾರ್ಮಿಕರು (ಶ್ರಮ ಜೀವಿಗಳು) ವಹಿಸಿಕೊಂಡಿದ್ದಾರೆ. ಹೀಗಾಗಿ ಸಮಾಜದಲ್ಲಿ ಅನೇಕ ಲೋಪದೋಷಗಳು ತಲೆದೋರಿವೆ. ಈ ಲೋಪದೋಷಗಳನ್ನು ಸರಿಪಡಿಸಲೆಂದೇ ನಾವೀಗ ಈ ಕೃಷ್ಣ ಪ್ರಜ್ಞಾ ಆಂದೋಲನವನ್ನು ಪ್ರಾರಂಭಿಸಿದ್ದೇವೆ. ಬುದ್ಧಿ ಎಂದರೆ ಮಿದುಳು ಸರಿಯಾಗಿದ್ದಾಗ ದೇಹದ ಇತರ ಅಂಗಗಳು ಕಾಲು, ಕೈ, ಹೊಟ್ಟೆ ಎಲ್ಲವೂ ಹೇಗೆ ಚೆನ್ನಾಗಿ ಕೆಲಸ ಮಾಡುವುವೋ ಹಾಗೆಯೇ ಬ್ರಾಹ್ಮಣ ವರ್ಗವು ವಾಸ್ತವ ಸ್ಥಿತಿಯಲ್ಲಿ ಪುನಃಸ್ಥಾಪಿತವಾದರೆ, ಸಾಮಾಜಿಕ ಸುಸ್ಥಿತಿಯ ಇತರ ಕ್ರಮಗಳೂ ತಾವಾಗಿಯೇ ಸರಿಹೊಂದಿಕೊಳ್ಳುತ್ತವೆ.

ಭಗವಂತನನ್ನು ಹೇಗೆ ಪ್ರೀತಿಸಬೇಕೆಂದು ಬೋಧಿಸುವುದೇ ನಮ್ಮ ಈ ಆಂದೋಲನದ ಅಂತಿಮ ಗುರಿ. ದೇವರನ್ನು ಹೇಗೆ ಪ್ರೀತಿಸಬೇಕೆಂಬುದನ್ನು ಕಲಿಯುವುದೇ ಮಾನವ ಜೀವಿತದ ಪರಮ ಪೂರ್ಣಾವಸ್ಥೆಯಾಗಿದೆ ಎಂಬ ನಿಶ್ಚಯ ತತ್ವವನ್ನು ಚೈತನ್ಯ ಮಹಾ ಪ್ರಭುಗಳು ಒಪ್ಪಿದ್ದಾರೆ. ಕೃಷ್ಣಪ್ರಜ್ಞಾ ಆಂದೋಲನಕ್ಕೂ ಹಿಂದೂ ಧರ್ಮಕ್ಕೂ ಅಥವಾ ಬೇರೆ ಯಾವುದೇ ಧರ್ಮಕ್ಕೂ ಯಾವ ಸಂಬಂಧವಿಲ್ಲ. ಯಾವ ಕ್ರೈಸ್ತ ಧರ್ಮೀಯನೂ ಹಿಂದೂ ಆಗಬಯಸುವುದಿಲ್ಲ. ಹಾಗೆಯೇ ಹಿಂದೂ ಸಂಸ್ಕೃತಿಯ ಯಾವ ನಾಗರಿಕನೂ ಕ್ರೈಸ್ತ ಧರ್ಮೀಯನಾಗ

ಬಯಸುವುದಿಲ್ಲ. ತಮಗೆ ಸಮಾಜದಲ್ಲಿ ಯಾವ ಸ್ಥಾನಮಾನವಿಲ್ಲದವರೇ ಹೀಗೆ ಮತಾಂತರ ಹೊಂದುತ್ತಾರೆ. ಆದರೆ ಎಲ್ಲರೂ ದೇವರ ವಿಷಯವನ್ನೂ, ತತ್ತ್ವವನ್ನೂ ತಿಳಿದುಕೊಳ್ಳಬಯಸು ತ್ತಾರೆ ಮತ್ತು ಈ ವಿಷಯಗಳಲ್ಲಿ ತೀವ್ರಾಸಕ್ತಿಯನ್ನು ಹೊಂದಿರುತ್ತಾರೆ. ಕೃಷ್ಣಪ್ರಜ್ಞಾ ಆಂದೋಲನವು ಈಗಿರುವಂತೆ ಹಿಂದೂ ಧರ್ಮವನ್ನು ಬೋಧಿಸುತ್ತಿಲ್ಲ ಎಂಬುದನ್ನು ಎಲ್ಲರೂ ಸರಿಯಾಗಿ ತಿಳಿದುಕೊಳ್ಳಬೇಕು. ಜೀವನದ ಎಲ್ಲ ಸಮಸ್ಯೆಗಳಿಗೆ ಪರಿಹಾರ ಒದಗಿಸುವ ಒಂದು ದಿವ್ಯ ಸಂಸ್ಕೃತಿಯನ್ನು ನಾವು ಜಗತ್ತಿಗೆ ನೀಡುತ್ತಿದ್ದೇವೆ. ಅಂತೆಯೇ ಇದು ಜಗದಗಲವೂ ಜನಪ್ರಿಯವಾಗುತ್ತಿದೆ.



# ಕೃಷ್ಣನನ್ನೂ ಕ್ರೈಸ್ತನನ್ನೂ ಅರಿತುಕೊಳ್ಳುವುದು

## ಕೃಷ್ಣ, ಕೃಷ್ಟೋಸ್, ಕ್ರೈಸ್ಟ್

**1974ರಲ್ಲಿ ಪಶ್ಚಿಮ ಜರ್ಮನಿಯ ಫ್ರ್ಯಾಂಕಫರ್ಟ್ ಆ್ಯಮ್ ಮೇನ್‌ನ ಇಸ್ಕಾನ್ ಕೇಂದ್ರದ ಸಮೀಪದಲ್ಲಿ ಶ್ರೀಲಪ್ರಭುಪಾದರು ಮತ್ತು ಅವರ ಕೆಲವು ಶಿಷ್ಯರು ನೆಡರಾಲ್ಟೈಫೆ ವಿಹಾರದ ಬೆನೆಡಿಕ್ಟೈನ್ ಸನ್ಯಾಸಿ ಫಾದರ್ ಇಮ್ಯಾನ್ಯುವೆಲ್ ಜಂಗ್ಕ್ಲಾಸೇನ್ ಜೊತೆ ಪ್ರಾತಃಕಾಲ ತಿರುಗಾಡಲು ಹೊರಟದ್ದರು. ಶ್ರೀಲ ಪ್ರಭುಪಾದರು ತಾನು ಹಿಡಿದಿದ್ದಂಥ ಜಪಮಾಲೆಯನ್ನು ಹಿಡಿದಿರುವುದನ್ನು ಗಮನಿಸಿದ ಫಾದರ್ ಇಮ್ಯಾನ್ಯುವೆಲ್ ಅವರು, "ಹೇ ಭಗವಾನ್ ಜೀಸಸ್ ಕ್ರೈಸ್ಟ್ ನಮ್ಮ ಮೇಲೆ ದಯೆತೋರು" ಎಂಬ ಪ್ರಾರ್ಥನೆಯನ್ನು ತಾವು ಕೂಡ ಸದಾ ಜಪಿಸುತ್ತಿರುವುದಾಗಿ ತಿಳಿಸಿದರು. ಆಮೇಲೆ ಅವರಲ್ಲಿ ಈ ಮುಂದಿನ ಸಂಭಾಷಣೆ ನಡೆಯಿತು.**

ಶ್ರೀಲ ಪ್ರಭುಪಾದ : ಕ್ರೈಸ್ಟ್ ಎಂಬ ಪದದ ಅರ್ಥವೇನು?

ಫಾದರ್ ಇಮ್ಯಾನ್ಯುವೆಲ್ : ಕ್ರೈಸ್ಟ್ ಎಂಬ ಪದವು ಕ್ರಿಸ್ಟೋಸ್ ಎಂಬ ಗ್ರೀಕ್ ಮೂಲದಿಂದ ಬಂದಿದೆ. ಹಾಗೆಂದರೆ "ವಿಭೂಷಿತ" ಎಂದ ಹಾಗೆ.

ಶ್ರೀಲ ಪ್ರಭುಪಾದ : ಕ್ರಿಸ್ಟೋಸ್ ಎಂಬುದು ಕೃಷ್ಟ ಎಂಬ ಪದದ ಗ್ರೀಕ್ ರೂಪ.

ಫಾದರ್ ಇಮ್ಯಾನ್ಯುವೆಲ್ : ಇದು ನಿಜವಾಗಿಯೂ ಕುತೂಹಲಕಾರಿ.

ಶ್ರೀಲ ಪ್ರಭುಪಾದ : ಭಾರತೀಯನೊಬ್ಬನು ಕೃಷ್ಣನನ್ನು ಸಾಮಾನ್ಯವಾಗಿ "ಕೃಷ್ಟ" ಎಂದು ಕರೆಯುತ್ತಾನೆ. ಕೃಷ್ಟ ಎಂಬುದು ಸಂಸ್ಕೃತ ಪದ. "ಆಕರ್ಷಣೆ" ಎಂಬುದು ಅದರ ಅರ್ಥ. ಆದುದರಿಂದ, ನಾವು ದೇವರನ್ನು "ಕ್ರೈಸ್ಟ", "ಕೃಷ್ಟ" ಅಥವಾ "ಕೃಷ್ಣ" ಎಂದು ಸಂಬೋಧಿಸಿದಾಗ, ಸರ್ವಾಕರ್ಷಣೀಯನಾದ ಪರಮ ದೇವೋತ್ತಮ ಪುರುಷನನ್ನೇ ಉದ್ದೇಶಿಸಿರುತ್ತೇವೆ. "ಹೇ ಸ್ವರ್ಗದಲ್ಲಿರುವ ನಮ್ಮ ತಂದೆಯೇ, ನಿನ್ನ ನಾಮವು ಪವಿತ್ರ" ಎಂದು ಜೀಸಸ್ ನುಡಿದಾಗ ಆ ದೇವರ ಆ ಹೆಸರು "ಕೃಷ್ಟ" "ಕೃಷ್ಣ" ಎಂಬುದೇ ಆಗಿತ್ತು. ನೀವು ಇದನ್ನು ಒಪ್ಪುವಿರಾ?

ಫಾದರ್ ಇಮ್ಯಾನ್ಯುವೆಲ್ : ದೇವರ ಮಗನಾದ ಜೀಸಸ್, ಕ್ರೈಸ್ಟ ಎಂಬ ದೇವರ ನಿಜ ನಾಮವನ್ನೇ ನಮಗೆ ತಿಳಿಸಿದ್ದಾನೆಂದು ಭಾವಿಸುತ್ತೇನೆ. ನಾವು ದೇವರನ್ನು "ತಂದೆ" ಎಂದು ಕರೆಯಬಹುದು. ಆದರೆ ಆತನ ನಿಜನಾಮದಿಂದಲೇ ಸಂಬೋಧಿಸುವುದಾದರೆ "ಕ್ರೈಸ್ಟ" ಎಂದೇ ಕರೆಯಬೇಕಾಗುವುದು.

ಶ್ರೀಲ ಪ್ರಭುಪಾದ : ಹೌದು. "ಕ್ರೈಸ್ಟ" ಎಂಬುದು "ಕೃಷ್ಟ" ಎನ್ನುವುದರ ಮತ್ತೊಂದು ಉಚ್ಚಾರಕ್ರಮ ಮತ್ತು "ಕೃಷ್ಟ" ಎಂಬುದು "ಕೃಷ್ಣ" ಎಂಬ ದೇವರ ನಾಮೋಚ್ಚಾರಣೆಯ ಮತ್ತೊಂದು ಕ್ರಮ ಅಷ್ಟೆ. ದೇವರ ನಾಮವನ್ನು ಸ್ತುತಿಸಬೇಕು ಎಂದು ಜೀಸಸ್ ಹೇಳಿದರು—ದೇವರಿಗೆ ನಾಮವಿಲ್ಲ—ನಾವು ಆತನನ್ನು ಕೇವಲ "ತಂದೆ" ಎಂದು ಕರೆಯಬಹುದು ಎಂದು ನಿನ್ನೆ ಒಬ್ಬ ದೈವವಾದಿಯು ಹೇಳುತ್ತಿದುದನ್ನು ನಾನು ಕೇಳಿದೆ. ಮಗನು ತನ್ನ ತಂದೆಯನ್ನು "ತಂದೆ" ಎಂದು ಕರೆಯಬಹುದು ನಿಜ, ಆದರೆ ತಂದೆಯೂ ತನ್ನದೇ ಆದ ನಿಜನಾಮವೊಂದನ್ನು ಹೊಂದಿರುತ್ತಾನೆ. ಹಾಗೆಯೇ "ದೇವರು" ಎಂಬುದು ಪರಮ ದೇವೋತ್ತಮ ಪುರುಷನ ಸಾಮಾನ್ಯ ನಾಮ, ಅವನ ವಿಶಿಷ್ಟ ಹೆಸರು "ಕೃಷ್ಣ". ನೀವು ದೇವರನ್ನು "ಕ್ರೈಸ್ಟ", "ಕೃಷ್ಟ" ಅಥವಾ "ಕೃಷ್ಣ" ಎಂದು ಹೇಗೆ ಕರೆದರೂ ಆತ್ಯಂತಿಕವಾಗಿ ನೀವು ಪರಮ ದೇವೋತ್ತಮ ಪುರುಷನನ್ನೇ ಸಂಬೋಧಿಸಿದಂತಾಗುವುದು.

ಫಾದರ್ ಇಮ್ಯಾನ್ಯುವೆಲ್ : ಹೌದು, ನಾವು ದೇವರ ನಿಜನಾಮವನ್ನು ಹೇಳುವು ದಾದರೆ, "ಕ್ರಿಸ್ಟೋಸ್" ಎಂದೇ ಹೇಳಬೇಕು. ನಮ್ಮ ಧರ್ಮದಲ್ಲಿ ತಂದೆ, ಮಗ ಮತ್ತು ಪವಿತ್ರಾತ್ಮ ಎಂಬ "ತ್ರಯಿ" ತತ್ವವೊಂದಿದೆ. ದೇವರ ನಾಮವು ದೇವರ ಮಗನಿಂದಲೇ ನಮಗೆ ತಿಳಿದುಬರಬೇಕು ಎಂಬುದು ನಮ್ಮ ನಂಬುಗೆ. ಜೀಸಸ್ ಕ್ರೈಸ್ಟ ನಮಗೆ ನಮ್ಮ ತಂದೆಯ ಹೆಸರನ್ನು ತಿಳಿಸಿದರು. ಅಂತೆಯೇ ಕ್ರೈಸ್ಟ ಎಂಬ ಈ ಶ್ರುತ ನಾಮವನ್ನೇ ನಾವು ಅಂಗೀಕರಿ ಸಿದ್ದೇವೆ.

ಶ್ರೀಲ ಪ್ರಭುಪಾದ : ವಾಸ್ತವಿಕವಾಗಿ, ಅದರಿಂದೇನೂ ತೊಂದರೆಯಿಲ್ಲ–ಕೃಷ್ಣ ಅಥವಾ ಕ್ರೈಸ್ಟ–ನಾಮ ಒಂದೇ. ಈ ಯುಗದಲ್ಲಿ ಭಗವನ್ನಾಮ ಸಂಕೀರ್ತನ ಮಾಡಬೇಕೆಂದು ಹೇಳುವ ವೇದ ಶಾಸ್ತ್ರಗಳ ವಿಧಿಯನ್ನು ಅನುಸರಿಸುವುದೇ ಮುಖ್ಯ ವಿಷಯ. ಅತ್ಯಂತ ಸುಲಭ ಮಾರ್ಗ ವೆಂದರೆ, ಹರೇಕೃಷ್ಣ, ಹರೇಕೃಷ್ಣ ಕೃಷ್ಣ ಕೃಷ್ಣ, ಹರೇಹರೇ, ಹರೇರಾಮ, ಹರೇರಾಮ, ರಾಮ ರಾಮ, ಹರೇಹರೇ ಎಂಬ ಮಹಾಮಂತ್ರವನ್ನು ಜಪಿಸುವುದು. ರಾಮ ಮತ್ತು ಕೃಷ್ಣ ದೇವರು ನಾಮಗಳಷ್ಟೆ. ಹರೇ ಎಂಬುದು ದೇವರ ಶಕ್ತಿ.ನಾವು ಮಹಾಮಂತ್ರವನ್ನು ಜಪಿಸಿದಾಗ, ದೇವರನ್ನು ಅವನ ಶಕ್ತಿ ಸಹಿತವಾಗಿ ಸಂಬೋಧಿಸುತ್ತೇವೆ. ಈ ಶಕ್ತಿಯು ಎರಡು ವಿಧವಾಗಿದೆ. ಒಂದು ಆಧ್ಯಾತ್ಮಿಕ ಮತ್ತು ಆಧಿಭೌತಿಕ. ಸದ್ಯ ನಾವು ಆಧಿಭೌತಿಕ ಶಕ್ತಿಯ ಹಿಡಿತಕ್ಕೆ ಸಿಕ್ಕಿದ್ದೇವೆ ಆದುದರಿಂದ, ನಮ್ಮನ್ನು ದಯೆತೋರಿ ಆಧಿಭೌತಿಕ ಶಕ್ತಿ ಸೇವೆಯಿಂದ ಪಾರುಮಾಡಿ ಆಧಿ ದೈವಿಕ ಶಕ್ತಿಸೇವೆಯಲ್ಲಿ ತೊಡಗಿಸು ಎಂದು ಕೃಷ್ಣನನ್ನು ಪ್ರಾರ್ಥಿಸುತ್ತೇವೆ. ಇದೇ ನಮ್ಮ ಇಡೀ ತತ್ವಜ್ಞಾನದ ತಿರುಳು.ಹರೇಕೃಷ್ಣ ಎಂದರೆ "ಹೇ ದೇವ ಶಕ್ತಿಯೇ, ಹೇ ದೇವರೆ (ಕೃಷ್ಣ) ಕೃಪೆತೋರಿ ನನ್ನನ್ನು ನಿನ್ನ ಸೇವೆಯಲ್ಲಿ ತೊಡಗಿಸು" ಎಂದು ಕೇಳಿಕೊಂಡ ಹಾಗೆ. ಸೇವೆ ಗೈಯುವುದೇ ನಮ್ಮ ಸ್ವಭಾವ. ಆದರೆ ಹೇಗೋ ಏನೋ ನಾವು ಈ ಪ್ರಾಪಂಚಿಕ ವಿಷಯಗಳ ಸೇವೆಗೆ ಬಂದು ಸೇರಿಕೊಂಡಿದ್ದೇವೆ. ಆದರೆ ಈ ಸೇವಾ ಪರತೆಯು ದಿವ್ಯಶಕ್ತಿಯ ಸೇವೆಯಲ್ಲಿ ಪರಿವರ್ತನೆಗೊಂಡಾಗ, ನಮ್ಮ ಜೀವನ ಪರಿಪೂರ್ಣತೆಯನ್ನು ಪಡೆಯುತ್ತದೆ. ಭಕ್ತಿಯೋಗ (ದೇವರಿಗೆ ಪ್ರೀತಿಯುತ ಸೇವೆ ಸಲ್ಲಿಸುವುದು) ಸಾಧನೆ ಎಂದರೆ, "ಹಿಂದೂ", "ಮುಸ್ಲಿಮ್", "ಕ್ರಿಶ್ಚನ್", ಇದು ಅದು ಎಂಬ ಉಪಾಧಿಮುಕ್ತರಾಗಿ ಅನನ್ಯವಾಗಿ ದೇವರ ಸೇವೆ ಮಾಡು ವುದು. ನಾವು ಕ್ರಿಶ್ಚನ್, ಹಿಂದೂ ಮತ್ತು ಮಹಮ್ಮದೀಯ ಧರ್ಮಗಳನ್ನು ಸೃಷ್ಟಿಸಿಕೊಂಡಿ

ದ್ದೇವೆ. ಆದರೆ ಉಪಾಧಿಮುಕ್ತರಾಗಿ ನಾವು ಧರ್ಮವನ್ನಾಶ್ರಯಿಸಿದಾಗ, ನಾವು ಹಿಂದೂ, ಕ್ರಿಶ್ಚನ್ ಅಥವಾ ಮಹಮ್ಮದೀಯರೆಂಬ ಭಾವನೆಯಿರುವುದಿಲ್ಲ. ಆಗ ಶುದ್ಧ ಧರ್ಮ ಅಥವಾ ಭಕ್ತಿಯಲ್ಲಿಯೇ ನಾವು ಪ್ರಸಕ್ತರಾಗಿರುತ್ತೇವೆ.

ಫಾದರ್ ಇಮ್ಮಾನ್ಯುವೆಲ್ : ಮುಕ್ತಿ ?

ಶ್ರೀಲ ಪ್ರಭುಪಾದ : ಅಲ್ಲ, ಭಕ್ತಿ. ನೀವು ಭಕ್ತಿ ಎಂದಾಗ (ಭೌತಿಕ ದುಃಖ ರಹಿತವಾದ) ಮುಕ್ತಿಯೂ ಅದರಲ್ಲಿ ಸೇರಿರುತ್ತದೆ. ಭಕ್ತಿಯಿಲ್ಲದೆ ಮುಕ್ತಿಯಿಲ್ಲ, ನಾವು ಭಕ್ತಿ ಭಾವದಲ್ಲಿ ಕ್ರಿಯಾತತ್ಪರರಾದರೆ ಮುಕ್ತಿ ತಾನಾಗಿಯೇ ಒದಗಿಬರುತ್ತದೆ. ನಾವು ಇದನ್ನು ಭಗವದ್ಗೀತೆಯಿಂದ ಅರಿತುಕೊಳ್ಳುತ್ತೇವೆ (14–26):

ಮಾಂ ಚಯೋ ऽ ವ್ಯಭಿಚಾರೇಣ ಭಕ್ತಿಯೋಗೇನ ಸೇವತೇ।
ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮ ಭೂಯಾಯ ಕಲ್ಪತೇ॥

"ಭಕ್ತಿಯುತ್ತ ಸೇವೆಯಲ್ಲಿ ಪೂರ್ಣರತನಾದವನು, ಯಾವ ಸಂದರ್ಭದಲ್ಲಿಯೂ ಪತನ ಹೊಂದದವನು, ಕೂಡಲೇ ಭೌತಿಕ ಗುಣಗಳಿಂದ ಅತೀತನಾಗುತ್ತಾನೆ ಮತ್ತು ಬ್ರಹ್ಮ ಭೂಯಕ್ಕೆ ಬಂದು ತಲುಪುತ್ತಾನೆ."

ಫಾದರ್ ಇಮ್ಮಾನ್ಯುವೆಲ್ : ಬ್ರಹ್ಮನು ಕೃಷ್ಣನೇ ?

ಶ್ರೀಲ ಪ್ರಭುಪಾದ : ಕೃಷ್ಣನು ಪರಬ್ರಹ್ಮನು. ಬ್ರಹ್ಮ ಸಾಕ್ಷಾತ್ಕಾರವು ಮೂರು ವಿಧವಾಗಿದೆ: ವ್ಯಕ್ತಿಶೂನ್ಯ (ನಿರಾಕಾರ) ಬ್ರಹ್ಮ, ಆತ್ಮಗತ ಪರಮಾತ್ಮ ಮತ್ತು ವ್ಯಕ್ತಿರೂಪಿ (ಸಾಕಾರ) ಬ್ರಹ್ಮ. ಕೃಷ್ಣನು ವ್ಯಕ್ತಿರೂಪಿ, ಅವನು ಪರಬ್ರಹ್ಮ. ದೇವರು ಪರಮ ದೆಶೆಯಲ್ಲಿ ವ್ಯಕ್ತಿ ಸ್ವರೂಪನೇ ಅಲ್ಲವೇ. ಶ್ರೀಮದ್ಭಾಗವತದಲ್ಲಿ (1-2-11)ಇದು ದೃಢಪಟ್ಟಿದೆ.

ವದಂತಿ ತತ್ ತತ್ತ್ವವಿದಸ್ ತತ್ತ್ವಂ ಯಜ್‌ಜ್ಞಾನಂ ಅದ್ವಯಮ್।
ಬಹ್ಮೇತಿ ಪರಮಾತ್ಮೇತಿ ಭಗವಾನ್ ಇತಿ ಶಬ್ದ್ಯತೇ॥

"ಪರಬ್ರಹ್ಮನನ್ನು ತಿಳಿದುಕೊಂಡ ದಿವ್ಯ ಜ್ಞಾನಿಗಳು ಈ ಅದ್ವಯ ವಸ್ತುವನ್ನು ಬ್ರಹ್ಮನ್, ಪರಮಾತ್ಮಾ ಅಥವಾ ಭಗವಾನ್ ಎಂದು ಕರೆಯುತ್ತಾರೆ. ಪರಮ ಪುರುಷನ ಲಕ್ಷಣ ವನ್ನರಿಯುವುದೇ ದೇವರ ಅಂತಿಮ ಸಾಕ್ಷಾತ್ಕಾರ. ಅವನಲ್ಲಿ ಷಡ್ಗುಣೈಶ್ವರ್ಯಗಳು ಪ್ರಪೂರ್ಣ ವಾಗಿವೆ: ಅವನು ಪರಮ ಬಲಶಾಲಿ, ಅತ್ಯಂತ ಶ್ರೀಮಂತ, ಪರಮ ಸುಂದರ, ಅತ್ಯಂತ ಕೀರ್ತಿ ಶಾಲಿ, ಪರಮ ಮೇಧಾವಿ ಮತ್ತು ಪರಮ ವೈರಾಗ್ಯಶಾಲಿ.

ಫಾಧರ್ ಇಮ್ಮಾನ್ಯುವೆಲ್ : ಹೌದು, ನಾನೊಪ್ಪಿದೆ.

ಶ್ರೀಲಪ್ರಭುಪಾದ : ದೇವರು ಅನನ್ಯನಾಗಿರುವುದರಿಂದ, ಅವನ ನಾಮ, ರೂಪ ಮತ್ತು ಅವನ ಗುಣಗಳೂ ಅನನ್ಯ. ಅವನಿಂದ ಭಿನ್ನವಲ್ಲ. ದೇವರನಾಮ ಜಪಿಸುವುದೆಂದರೆ ನೇರವಾಗಿ ಅವನ ಸಂಗಹೊಂದುವುದು. ದೇವರ ಸಂಗ ಹೊಂದಿದಾಗ, ಮನುಷ್ಯನು ದಿವ್ಯಗುಣ ಗಳನ್ನು ಗಳಿಸಿಕೊಳ್ಳುತ್ತಾನೆ ಮತ್ತು ಪರಿಶುದ್ಧನಾದಾಗ, ಮನುಷ್ಯನು ಭಗವಂತನ ಸಂಗಾತಿ ಯಾಗುತ್ತಾನೆ.

ಫಾದರ್ ಇಮ್ಯಾನ್ಯುವೆಲ್ : ಆದರೆ ಭಗವಂತನ ಬಗ್ಗೆ ನಮ್ಮ ಜ್ಞಾನವು ಪರಿಮಿತ ವಾದುದಾಗಿದೆ.

ಶ್ರೀಲ ಪ್ರಭುಪಾದ : ಹೌದು. ನಾವು ಪರಿಮಿತರು, ದೇವನು ಅಪರಿಮಿತ. ಅವನು ಅಪರಿಮಿತನೂ ಅನನ್ಯನೂ ಆಗಿರುವುದರಿಂದಲೇ ಅಪರಿಮಿತ ನಾಮಗಳನ್ನು ಹೊಂದಿದ್ದಾನೆ. ಅವೆಲ್ಲವೂ ಭಗವಂತನೇ. ನಮ್ಮ ಆಧ್ಯಾತ್ಮ ಜ್ಞಾನವು ಹೆಚ್ಚಿದಂತೆಲ್ಲ ನಾವು ದೇವರನಾಮ ಗಳನ್ನು ಅಷ್ಟಷ್ಟು ಅರಿತುಕೊಳ್ಳಲು ಸಮರ್ಥರಾಗುತ್ತೇವೆ.

ಫಾದರ್ ಇಮ್ಯಾನ್ಯುವೆಲ್ : ನಾನೊಂದು ಪ್ರಶ್ನೆ ಕೇಳಬಹುದೇ ? ನಾವು ಕ್ರಿಶ್ಚನ್ನರು ಕೂಡ ದೇವರನ್ನು ಪ್ರೀತಿಸಬೇಕೆಂದು ಬೋಧಿಸುತ್ತೇವೆ. ದೇವರ ಪ್ರೀತಿಯನ್ನು ಸಂಪಾದಿಸಲು ಪ್ರಯತ್ನಿಸುತ್ತೇವೆ. ಮತ್ತು ಹೃನ್ಮನಗಳಿಂದ ಅವನನ್ನು ಸೇವಿಸುತ್ತೇವೆ. ಹೀಗಿರುವಾಗ, ನಿಮ್ಮ ಮತ್ತು ನಮ್ಮ ಚಟುವಟಿಕೆಗಳಲ್ಲಿರುವ ವ್ಯತ್ಯಾಸವೇನು ? ಜೀಸಸ್ ಕ್ರೈಸ್ತನ ಉಪದೇಶವೂ ಅದೇ ಸಂದೇಶವನ್ನು ಪ್ರಚುರಪಡಿಸುತ್ತಿರುವಾಗ, ದೇವರ ಪ್ರೀತಿಯನ್ನು ಬೋಧಿಸಲು ನೀವು ನಿಮ್ಮ ಶಿಷ್ಯನನ್ನು ಪಾಶ್ಚಾತ್ಯ ದೇಶಗಳಿಗೆ ಕಳಿಸುವುದೇಕೆ ?

ಶ್ರೀಲ ಪ್ರಭುಪಾದ : ಸಮಸ್ಯೆ ಇಷ್ಟೆ. ಕ್ರಿಶ್ಚನ್ನರು ದೇವರ ಆದೇಶಗಳನ್ನು ಪಾಲಿಸು ತ್ತಿಲ್ಲ. ನೀವು ಇದನ್ನು ಒಪ್ಪುವಿರಾ ?

ಫಾದರ್ ಇಮ್ಯಾನ್ಯುವೆಲ್ : ಹೌದು. ಬಹುಮಟ್ಟಿಗೆ ನೀವು ಹೇಳುವುದು ಸರಿ.

ಶ್ರೀಲ ಪ್ರಭುಪಾದ : ಹಾಗೆಂದ ಮೇಲೆ ದೇವರನ್ನು ಕುರಿತು ಕ್ರಿಶ್ಚನ್ನನ ಪ್ರೀತಿ ಎಂದರೇನು ? ದೇವರ ಆದೇಶಗಳನ್ನು ನೀವು ಪಾಲಿಸದೆ ಹೋದರೆ ನಿಮ್ಮ ಪ್ರೀತಿ ಏನು ಬಂತು? ದೇವರ ಪ್ರೀತಿ ಎಂದರೇನು ಎಂಬುದನ್ನು ತಿಳಿಸಿಕೊಡುವುದಕ್ಕಾಗಿಯೇ ನಾವು ಬಂದಿದ್ದೇವೆ. ನೀವು ದೇವರನ್ನು ಪ್ರೀತಿಸುವಿರಾದರೆ, ಅವನ ಆಜ್ಞೆಗಳನ್ನು ಉಲ್ಲಂಘಿಸಲಾರಿರಿ ನೀವು ಅವಿಧೇಯರಾಗಿದ್ದರೆ, ನಿಮ್ಮ ಪ್ರೀತಿ ನಿಜವಾದುದಲ್ಲ.

ಜಗತ್ತಿನಲ್ಲೆಲ್ಲ ಜನ ದೇವರನ್ನು ಪ್ರೀತಿಸುವ ಬದಲು ತಮ್ಮ ನಾಯಿಗಳನ್ನು ಪ್ರೀತಿಸು ತ್ತಾರೆ. ದೇವರ ಬಗ್ಗೆ ತಮ್ಮ ವಿಸ್ಮೃತ ಪ್ರೀತಿಯನ್ನು ಹೇಗೆ ಪುನರುಜ್ಜೀವಿಸಿಕೊಳ್ಳಬೇಕೆಂಬುದನ್ನು ಬೋಧಿಸಲು ನಮ್ಮ ಆಂದೋಲನವು ಆಗತ್ಯವಾಗಿದೆ. ಕೇವಲ ಕ್ರಿಶ್ಚನ್ನರಷ್ಟೇ ಅಲ್ಲ, ಹಿಂದೂಗಳೂ ಮಹಮ್ಮದೀಯರೂ ಇತರ ಎಲ್ಲರೂ ತಪ್ಪಿದ್ದಾರೆ. ಅವರು ತಮಗೆ ತಾವೇ ತಾವು "ಕ್ರಿಶ್ಚನ್", "ಹಿಂದೂ" ಅಥವಾ "ಮಹಮ್ಮದೀಯರು" ಎಂದು ರಬ್ಬರ್ ಮುದ್ರೆ ಒತ್ತಿಕೊಂಡಿದ್ದಾರೆ. ಆದರೆ ಅವರಾರೂ ದೇವರ ಆದೇಶಗಳನ್ನು ಪಾಲಿಸುತ್ತಿಲ್ಲ. ಇದೇ ಈಗಿರುವ ಸಮಸ್ಯೆ.

ಸಂದರ್ಶಕ : ಕ್ರಿಶ್ಚನ್ನರು ಯಾವ ರೀತಿಯಲ್ಲಿ ಅವಿಧೇಯರಾಗಿದ್ದಾರೆಂಬುದನ್ನು ನೀವು ಹೇಳಬಲ್ಲಿರಾ ?

ಶ್ರೀಲ ಪ್ರಭುಪಾದ : ಹೇಳಬಲ್ಲೆ. ಮೊದಲನೆಯದಾಗಿ ಕೊಲೆಮನೆಗಳನ್ನು ನಡೆಸಿ ಕೊಂಡುಬರುತ್ತಿದ್ದು, "ಕೊಲಬೇಡ" ಎಂಬ ದೇವರ ಆದೇಶವನ್ನು ಉಲ್ಲಂಘಿಸುತ್ತಿದ್ದಾರೆ. ಈ ಆದೇಶದ ಉಲ್ಲಂಘನೆ ನಡೆಯುತ್ತಿದೆಯೆಂಬುದನ್ನು ನೀವು ಒಪ್ಪುವಿರಲ್ಲವೇ ?

ಫಾದರ್ ಇಮ್ಯಾನ್ಯುವೆಲ್ : ನನ್ನ ಮಟ್ಟಿಗೆ, ಒಪ್ಪುತ್ತೇನೆ.

ಶ್ರೀಲ ಪ್ರಭುಪಾದ : ಒಳ್ಳೆಯದು. ಕ್ರಿಶ್ಚನ್ನರು ದೇವರನ್ನು ಪ್ರೀತಿಸಬಯಸಿದರೆ, ಅವರು ಪ್ರಾಣಿವಧೆಯನ್ನು ನಿಲ್ಲಿಸಬೇಕು.

ಫಾದರ್ ಇಮ್ಯಾನ್ಯುವೆಲ್ : ಆದರೆ ಇದು ಅತ್ಯಂತ ಮಹತ್ವದ ಅಂಶವೇನಲ್ಲ.

ಶ್ರೀಲಪ್ರಭುಪಾದ : ನೀವು ಒಂದು ಅಂಶವನ್ನು ಕೈಬಿಟ್ಟರೂ ನಿಮ್ಮ ಲೆಕ್ಕಾಚಾರ ತಪ್ಪುತ್ತದೆ. ನೀವು ಆಮೇಲೆ ಏನೇ ಕೂಡಿಸಿ, ಏನೇ ಕಳೆಯಿರಿ, ಲೆಕ್ಕಾಚಾರವು ಮೊದಲೇ ತಪ್ಪಿರುತ್ತದೆ. ಅನಂತರದ ಏನೆಲ್ಲವೂ ತಪ್ಪುತಪ್ಪಾಗುತ್ತದೆ. ನೀವು ಶಾಸ್ತ್ರದ ಬೇಕಾದ ಭಾಗವನು ಮಾತ್ರ ಅಂಗೀಕರಿಸಿ, ಬೇಡವಾದುದನ್ನು ನಿರಾಕರಿಸುವಂತಿಲ್ಲ. ಹೀಗಿದ್ದೂ ಸರಿಯಾದ ಫಲ ನಿರೀಕ್ಷೆ ಹೇಗೆ ಸಾಧ್ಯ? ಉದಾಹರಣೆಗೆ: ಕೋಳಿ ಹಿಂಭಾಗದಿಂದ ಮೊಟ್ಟೆ ಹಾಕುತ್ತದೆ, ಮುಂಭಾಗದಿಂದ ಆಹಾರ ತಿನ್ನುತ್ತದೆ. "ಕೋಳಿಗೆ ದಿನವೂ ನಾನು ಆಹಾರ ನೀಡಬೇಕಾಗುತ್ತದೆ, ಇದು ಬಹು ಖರ್ಚಿನ ಬಾಬತು. ಆದುದರಿಂದ ಅದನ್ನು ಕಡಿದುಹಾಕುವುದೇ ವಿಹಿತ" ಎಂದು ಕೋಳಿ ಸಾಕುವವನು ಯೋಚಿಸಬಹುದು. ತಲೆಹೋದೊಡನೆಯೇ ಕೋಳಿಯು ಸತ್ತು ಹೋಗುವುದರಿಂದ ಆಮೇಲೆ ಮೊಟ್ಟೆಗಳೇ ಇಲ್ಲದಂತಾಗುತ್ತದೆ. ಹೀಗೆಯೇ ಶಾಸ್ತ್ರದ ಕಷ್ಟಸಾಧ್ಯವಾದ ಭಾಗವನ್ನು ಕೈಬಿಟ್ಟು ನಮಗೆ ಇಷ್ಟಬಂದದ್ದನ್ನು ಮಾತ್ರ ಪಾಲಿಸಿದರೆ, ಈ ಬಗೆಯ ಅರ್ಥ ವಿವರಣೆ ನಮಗೆ ಸಹಾಯಕವಾಗುವುದಿಲ್ಲ. ನಮಗೆ ಅನುಕೂಲವಾದದನ್ನಷ್ಟೇ ಅಲ್ಲ, ಶಾಸ್ತ್ರದ ಆದೇಶಗಳನ್ನು ಇಡಿಯಾಗಿ ನಾವು ಒಪ್ಪಿಕೊಳ್ಳಬೇಕು. "ಕೊಲಬೇಡ" ಎಂಬ ಮೊದಲನೆಯ ಆದೇಶವನ್ನೇ ನೀವು ಪಾಲಿಸದಿದ್ದರೆ ದೇವರ ಪ್ರೀತಿ ಎಲ್ಲಿಂದ ಬಂತು ?

ಸಂದರ್ಶಕ : ಈ ಆದೇಶದಲ್ಲಿ 'ಕೊಲಬೇಡ' ಎಂಬುದು ಮನುಷ್ಯರಿಗೆ ಸಂಬಂಧಿಸಿದುದು, ಪ್ರಾಣಿಗಳಿಗೆ ಅಲ್ಲ ಎಂದು ಕ್ರಿಶ್ಚನ್ನರು ಭಾವಿಸುತ್ತಾರೆ.

ಶ್ರೀಲ ಪ್ರಭುಪಾದ : ಹಾಗೆಂದರೆ ಹತ್ಯೆ ಎಂಬ ಸರಿಯಾದ ಪದವನ್ನು ಉಪಯೋಗಿಸುವಷ್ಟು ಕ್ರೈಸ್ತನು ಬುದ್ಧಿವಂತನಾಗಿರಲಿಲ್ಲವೆಂದು ಹೇಳಿದ ಹಾಗುಗುತ್ತದೆ. ವಧೆ, ಹತ್ಯೆ ಎಂಬ ಎರಡು ಪದಗಳೂ ಇವೆ. ಹತ್ಯೆ ಎಂಬುದು ಮಾನವರನ್ನು ಕುರಿತದ್ದು, ವಧೆ ಎಂಬುದು ಪ್ರಾಣಿಗಳನ್ನು ಕುರಿತದ್ದು. ಜೀಸಸ್ ವಧೆ ಎಂಬುದರ ಬದಲಾಗಿ "ಹತ್ಯೆ" ಎಂಬ ಸರಿಯಾದ ಪದ ಪ್ರಯೋಗ ಮಾಡುವಷ್ಟು ಬುದ್ಧಿವಂತನಾಗಿರಲಿಲ್ಲವೆಂದು ನೀವು ಭಾವಿಸುವಿರಾ ? ವಧೆ ಎಂಬುದು ಯಾವ ಬಗೆಯಾದ ವಧೆಯೂ ಆಗಬಹುದು, ಅದರಲ್ಲಿಯೂ ವಿಶೇಷವಾಗಿ ಪ್ರಾಣಿವಧೆ. ಜೀಸಸ್ ಕೇವಲ ನರಹತ್ಯೆಯನ್ನೇ ಹೇಳಲು ಉದ್ದೇಶಿಸಿದ್ದರೆ, ಮಾನವಹತ್ಯೆ (ನರಹತ್ಯೆ) ಎಂದು ಹೇಳುತ್ತಿದ್ದರು.

ಫಾದರ್ ಇಮ್ಯಾನ್ಯುವೆಲ್ : ಆದರೆ ಬೈಬಲ್ಲಿನ ಪೂರ್ವಭಾಗದಲ್ಲಿ "ಕೊಲಬೇಡ" ಎಂಬ ಆದೇಶವು ಮಾನವಹತ್ಯೆ ಎಂಬುದನ್ನೇ ಸೂಚಿಸುತ್ತದೆ. ಜೀಸಸ್ "ಕೊಲಬೇಡ" ಎಂದಾಗ ಮನುಷ್ಯನು ಮನುಷ್ಯನನ್ನು ಕೊಲ್ಲುವುದನ್ನು ಬಿಡಬೇಕಷ್ಟೇ ಅಲ್ಲ, ಪರಸ್ಪರ ಪ್ರೀತಿಯಿಂದ ವರ್ತಿಸಬೇಕೆಂಬುದನ್ನೂ ಈ ಆದೇಶವು ಸೂಚಿಸುವುದೆಂದು ಹೇಳಿದರು. ಮನುಷ್ಯ ಮತ್ತು ಇತರ ಜೀವಿಗಳ ಸಂಬಂಧವನ್ನು ಕುರಿತು ಅವರು ಏನನ್ನೂ ಹೇಳಲಿಲ್ಲ. ಮನುಷ್ಯ ಮನುಷ್ಯರ ಸಂಬಂಧವಾಗಿಯೇ ಅವರು ಹೇಳಿದರು. "ಕೊಲಬೇಡ" ಎಂದಾಗ "ಯಾರನ್ನೂ ಅವಮಾನಿಸ

ಬೇಡ, ಹಿಂಸಿಸಬೇಡ, ಯಾರೊಡನೆಯೂ ದುರ್ವರ್ತಿಸಬೇಡ" ಇತ್ಯಾದಿಯಾಗಿ ಹೇಳುವ ಮನೋಭಾವ ಮತ್ತು ಭಾವನೆ ಹೊಂದಿದ್ದರೆಂದೂ ಅರ್ಥವಾಗುವುದು.

ಶ್ರೀಲ ಪ್ರಭುಪಾದ : ಬೈಬಲ್ಲಿನ ಈ ಭಾಗ್ಯ ಆ ಭಾಗ, ನಮಗೆ ಪ್ರಸ್ತುತವಲ್ಲ. ಆದೇಶಗಳಲ್ಲಿ ಉಪಯೋಗಿಸಿದ ಭಾಷೆ ಮಾತ್ರ ಪ್ರಸ್ತುತ. ನೀವು ಈ ಪದಗಳಿಗೆ ಅರ್ಥ ವಿವರಣೆ ನೀಡುವುದಾದರೆ ಅದು ಬೇರೆ ವಿಷಯ. ನಾವು ನೇರ ಅರ್ಥವನ್ನು ಗ್ರಹಿಸುತ್ತೇವೆ. "ಕೊಲಬೇಡ" ಎಂದರೆ "ಕ್ರಿಶ್ಚನ್ನರು ಕೊಲೆಗೈಯ್ಯಕೂಡದು" ಎಂದು ಅರ್ಥ. ಈಗಿನ ಆಚಾರವನ್ನೆ ಮುಂದುವರಿಸಲು ನೀವು ಅರ್ಥ ವಿವರಣೆಗಳನ್ನು ನೀಡಬಹುದು. ಆದರೆ ಅರ್ಥವಿವರಣೆಗೆ ಅವಕಾಶವಿಲ್ಲವೆಂದು ನಾವು ಸ್ಪಷ್ಟವಾಗಿ ತಿಳಿದುಕೊಂಡಿದ್ದೇವೆ. ವಿಷಯವು ಸಂದಿಗ್ಧವಾಗಿದ್ದಾಗ ಅರ್ಥ ವಿವರಣೆ ಅಗತ್ಯ. ಆದರೆ "ಕೊಲಬೇಡ" ಎಂಬುದು ಸ್ಪಷ್ಟವಾಗಿದೆ, ಸ್ಪಷ್ಟ ಆದೇಶವಾಗಿದೆ. ನಾವೇಕೆ ಅರ್ಥಗಳನ್ನು ಕಲ್ಪಿಸಬೇಕು ?

ಫಾದರ್ ಇಮ್ಯಾನ್ಯುವೆಲ್ : ಸಸ್ಯಾಹಾರವೂ ಕೊಲೆಯಲ್ಲವೇ ?

ಶ್ರೀಲ ಪ್ರಭುಪಾದ : ನಾವು ಅನಾವಶ್ಯಕವಾಗಿ ಸಸ್ಯ ಜೀವನವನ್ನೂ ನಾಶಮಾಡಬಾರದೆಂದು ವೈಷ್ಣವ ಸಿದ್ಧಾಂತವು ಹೇಳುತ್ತದೆ. ಭಗವದ್ಗೀತೆಯಲ್ಲಿ (9-26) ಕೃಷ್ಣನು ಹೇಳುತ್ತಾನೆ:

ಪತ್ರಂ ಪುಷ್ಪಂ ಫಲಂ ತೋಯಮ್ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದ್ ಅಹಂ ಭಕ್ತ್ಯುಪಾಹೃತಮ್ ಅಶ್ನಾಮಿ ಪ್ರಯತಾತ್ಮನಃ ॥

"ಯಾರಾದರೂ ಪ್ರೀತಿಯಿಂದ ಮತ್ತು ಭಕ್ತಿಯಿಂದ ನನಗೆ ಪತ್ರ, ಪುಷ್ಪ, ಫಲ ಅಥವಾ ಜಲ (ತೋಯ)ವನ್ನು ಸಮರ್ಪಿಸಿದರೆ, ನಾನು ಅದನ್ನು ಸ್ವೀಕರಿಸುತ್ತೇನೆ." ಕೃಷ್ಣನು ಬಯಸುವ ಆಹಾರವನ್ನೇ ನಾವು ಆತನಿಗೆ ನಿವೇದಿಸುತ್ತೇವೆ. ನೈವೇದ್ಯ ಶೇಷವನ್ನು ನಾವು ಭುಂಜಿಸುತ್ತೇವೆ. ಕೃಷ್ಣನಿಗೆ ಶಾಖಾಹಾರವನ್ನು ಸಮರ್ಪಿಸುವುದೂ ಪಾಪ ಕಾರ್ಯವಾದರೆ, ಅದು ಕೃಷ್ಣನ ಪಾಪವೇ ಹೊರತು ನಮ್ಮದಲ್ಲ. ಆದರೆ ದೇವರು ಅಪಾಪವಿದ್ಧನು-ಪಾಪಕರ್ಮ ಫಲಲೇಪ ಅವನಿಗಿಲ್ಲ. ಅವನು ಸೂರ್ಯ ಇದ್ದ ಹಾಗೆ. ಸೂರ್ಯನು ಮಾತ್ರ ಪುರುಷವನ್ನೂ ಶುದ್ಧಿಗೊಳಿಸುವಷ್ಟು ಸಾಮರ್ಥ್ಯ ಹೊಂದಿದ್ದಾನೆ. ಇದು ನಮಗೆ ಅಸಾಧ್ಯವೇ ಸರಿ. ಕೃಷ್ಣನೂ ಒಬ್ಬ ರಾಜನಿದ್ದಂತೆ, ರಾಜನು ಕೊಲೆ ಪಾತಕಿಯನ್ನು ಗಲ್ಲಿಗೇರಿಸುವಂತೆ ವಿಧಿಸಬಹುದು. ಆದರೆ ಸ್ವತಃ ಬಹು ಸಮರ್ಥನಾಗಿರುವುದರಿಂದ ಅವನು ದಂಡನಾತೀತನು. ಮೊದಲು ದೇವರಿಗೆ ಸಮರ್ಪಿಸಿ ಆಹಾರ ಸ್ವೀಕರಿಸುವುದೆಂದರೆ ಯುದ್ಧಕಾಲದಲ್ಲಿ ಯೋಧರು ಮಾಡುವ ಕೊಲೆಯಂತೆ. ಯುದ್ಧದಲ್ಲಿ ಸೇನಾಪತಿಯು ದಾಳಿ ಮಾಡುವಂತೆ. ಆದೇಶಿಸಿದಾಗ, ವಿಧೇಯನಾಗಿ ವೈರಿಯನ್ನು ನಾಶಮಾಡುವವನು ಪಾರಿತೋಷಿಕ ಪಡೆಯುತ್ತಾನೆ. ಬದಲಾಗಿ ಅದೇ ಸಿಪಾಯಿಯು ತನಗಾಗಿಯೇ ಯಾರನ್ನಾದರೂ ಕೊಂದರೆ ಅವನು ಶಿಕ್ಷೆಗೆ ಗುರಿಯಾಗುತ್ತಾನೆ. ಇದೇ ರೀತಿ ನಾವು ಪ್ರಸಾದವನ್ನು (ಕೃಷ್ಣಾರ್ಪಿತ ನೈವೇದ್ಯಶೇಷವನ್ನು) ಭುಂಜಿಸಿದಾಗ ನಾವು ಯಾವ ಪಾಪಕ್ಕೂ ಗುರಿಯಾಗುವುದಿಲ್ಲ. ಭಗವದ್ಗೀತೆಯು (3-13) ಇದನ್ನು ದೃಢಪಡಿಸಿದೆ.

ಯಜ್ಞಾ ಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವ ಅಘಂ ಪಾಪಾ ಯೇ ಪಚಂತಿ ಆತ್ಮ ಕಾರಣಾತ್ ॥

"ಭಗವದ್ಭಕ್ತರು ಮೊದಲು ದೇವರಿಗೆ ಬಲಿಹರಣ ರೂಪವಾಗಿ ಅರ್ಪಿತವಾದ ಅನ್ನವನ್ನು ಭುಂಜಿಸುವುದರಿಂದ ಸರ್ವಪಾಪಗಳಿಂದ ವಿಮುಕ್ತರಾಗುತ್ತಾರೆ. ತಮ್ಮ ಇಂದ್ರಿಯ ಸುಖಕ್ಕಾಗಿಯೇ ಅನ್ನ ತಯಾರಿಸಿಕೊಳ್ಳುವವರು ಪಾಪವನ್ನೇ ಭುಂಜಿಸುತ್ತಾರೆ."

ಫಾದರ್ ಇಮ್ಯಾನ್ಯುವೆಲ್ : ಕೃಷ್ಣನು ಪಶುಭಕ್ಷಣಕ್ಕೆ ಅನುಮತಿ ಕೊಡಲಾರನೇ?

ಶ್ರೀಲ ಪ್ರಭುಪಾದ : ಹೌದು–ಪ್ರಾಣಿಲೋಕದಲ್ಲಿ ಹಾಗಾಗಬಹುದು. ಆದರೆ ನಾಗರಿಕ ಮಾನವ ಸಮಾಜದಲ್ಲಿ, ಧರ್ಮನಿಷ್ಠ ಮಾನವನು ಪ್ರಾಣಿಗಳನ್ನು ಕೊಂದು ತಿನ್ನುವುದಕ್ಕಾಗಿ ಹುಟ್ಟಿದವನಲ್ಲ. ನೀವು ಪ್ರಾಣಿಹತ್ಯೆಯನ್ನು ನಿಲ್ಲಿಸಿ, ಕ್ರೈಸ್ತನ ಪವಿತ್ರ ನಾಮ ಜಪವನ್ನು ಮಾಡಿದರೆ ಎಲ್ಲವೂ ಸರಿಹೋಗುತ್ತದೆ. ನಾನು ನಿಮಗೆ ಬೋಧಿಸಲು ಬಂದಿಲ್ಲ. ದಯವಿಟ್ಟು ಭಗವನ್ನಾಮ ಜಪ ಮಾಡಿ ಎಂದು ನಿವೇದಿಸಿಕೊಳ್ಳಲು ಬಂದಿದ್ದೇನೆ. ಬೈಬಲ್ಲೂ ನಿಮ್ಮನ್ನು ಇದನ್ನೇ ಕೇಳಿಕೊಂಡಿದೆ. ನಾವು ಸೌಜನ್ಯದಿಂದ ಪರಸ್ಪರ ಸಹಕರಿಸಿ ಜಪಮಾಡೋಣ. ನಿಮಗೆ ಕೃಷ್ಣನಾಮ ಜಪ ಮಾಡಲು ಸಂಕೋಚವೆನಿಸಿದರೆ "ಕ್ರಿಸ್ಟೋಸ್" ಅಥವಾ "ಕೃಷ್ಟ" ನಾಮ ಜಪ ಮಾಡಿ. ಯಾವ ಭೇದವೂ ಇಲ್ಲ. "ನಾಮ್ನಾಂ ಅಕಾರಿ ಬಹುಧಾ ನಿಜ ಸರ್ವ ಶಕ್ತಿಃ" ದೇವರು ಲಕ್ಷೋಪಲಕ್ಷ ನಾಮಗಳನ್ನು ಹೊಂದಿದ್ದಾನೆ, ದೇವರಿಗೂ ದೇವರ ನಾಮಕ್ಕೂ ಯಾವ ಭೇದವಿಲ್ಲ. ಪ್ರತಿಯೊಂದು ನಾಮವೂ ದೇವರಷ್ಟೇ ಶಕ್ತಿಯುತವಾಗಿದೆ" ಎಂದು ಶ್ರೀ ಚೈತನ್ಯರು ಹೇಳಿದ್ದಾರೆ. ಆದುದರಿಂದ ನೀವು "ಹಿಂದೂ" "ಕ್ರಿಶ್ಚನ್" ಅಥವಾ "ಮಹಮ್ಮದೀಯ" ರೆಂದು ಹೇಳಿಕೊಂಡರೂ ಚಿಂತೆಯಿಲ್ಲ, ನಿಮ್ಮ ನಿಮ್ಮ ಧರ್ಮಗ್ರಂಥಗಳಲ್ಲಿ ಹೇಳಲ್ಪಟ್ಟ ದೇವರ ನಾಮವನ್ನು ಜಪಿಸಿರಿ ಸಾಕು. ನೀವು ದಿವ್ಯತ್ವವನ್ನು ಹೊಂದುವಿರಿ. ಮಾನವ ಜೀವನವು ಆತ್ಮ ಸಾಕ್ಷಾತ್ಕಾರಕ್ಕಾಗಿ–ಎಂದರೆ ದೇವರನ್ನು ಪ್ರೀತಿಸುವುದನ್ನು ಕಲಿಯಲು ಉದ್ದಿಷ್ಟವಾದುದಾಗಿದೆ. ಅದೇ ಮಾನವನ ನಿಜವಾದ ಸೌಂದರ್ಯ–ನೀವು ಹಿಂದೂ, ಕ್ರಿಶ್ಚನ್ ಅಥವಾ ಮಹಮ್ಮದೀಯರಾಗಿಯೂ ಈ ಕರ್ತವ್ಯವನ್ನು ನೇರವೇರಿಸಬಹುದು–ಯಾವ ಅಭ್ಯಂತರವಿಲ್ಲ–ಆದರೆ ನೆರವೇರಿಸಿ ಮಾತ್ರ !

ಫಾದರ್ ಇಮ್ಯಾನ್ಯುವೆಲ್ : ಒಪ್ಪುತ್ತೇನೆ.

ಶ್ರೀಲ ಪ್ರಭುಪಾದ : (108 ಜಪಮಣಿಗಳ ಮಾಲೆಯನ್ನು ತೋರಿಸುತ) ನೀವು ನಿಮ್ಮ ಜಪಮಾಲೆಯನ್ನು ಹೊಂದಿರುವಂತೆ, ನಾವು ಸದಾ ಈ ಜಪಮಾಲೆಯನ್ನು ಇಟ್ಟುಕೊಂಡಿರುತ್ತೇವೆ. ನೀವು ಜಪ ಮಾಡುತ್ತಿದ್ದೀರಿ. ಆದರೆ ಇತರ ಕ್ರಿಶ್ಚನ್ನರೂ ಏಕೆ ಮಾಡುತ್ತಿಲ್ಲ? ಮಾನವ ಜನ್ಮದಲ್ಲಿ ಅವರು ಈ ಸದವಕಾಶವನ್ನು ಏಕೆ ಕಳೆದುಕೊಳ್ಳುತ್ತಿದ್ದಾರೊ ? ನಾಯಿ ಬೆಕ್ಕುಗಳು ಜಪಿಸುವ ಹಾಗಿಲ್ಲ. ಮಾನವರಾಗಿ ನಮಗೆ ನಾಲಗೆ ಇದೆ. ನಾವು ಜಪಿಸಬಹುದು. ನಾವು ದೇವರ ಪವಿತ್ರನಾಮ ಜಪಮಾಡಿದರೆ ನಮಗೆ ಯಾವ ನಷ್ಟವೂ ಇಲ್ಲ. ಪ್ರತಿಯಾಗಿ ನಮಗೆ ಮಹಾಫಲವುಂಟು. ನಮ್ಮ ಶಿಷ್ಯರು ಸದಾ ಹರೇಕೃಷ್ಣ ಜಪಮಾಡುತ್ತಾರೆ. ಅವರು ಸಿನಿಮಾಕ್ಕೆ ಹೋಗಬಹುದಾಗಿದೆ, ಬೇರೆ ಬೇರೆ ಏನೇನೋ ಮಾಡಬಹುದಾಗಿದೆ. ಆದರೆ ಅವರು ಅದೆಲ್ಲವನ್ನೂ ತ್ಯಜಿಸಿದ್ದಾರೆ. ಅವರು ಮೀನು, ಮೊಟ್ಟೆ, ಮಾಂಸ ಇದಾವುದನ್ನೂ ತಿನ್ನುವುದಿಲ್ಲ.

ಮಾದಕ ದ್ರವ್ಯಗಳನ್ನಾಗಲೀ ಮದ್ಯವನ್ನಾಗಲೀ ಸೇವಿಸುವುದಿಲ್ಲ, ಧೂಮಪಾನ ಮಾಡುವುದಿಲ್ಲ, ಜೂಜಾಡುವುದಿಲ್ಲ, ಸಟ್ಟಾ ವ್ಯಾಪಾರ ಮಾಡುವುದಿಲ್ಲ, ನಿಷಿದ್ಧ ಸಂಭೋಗವನ್ನೂ ಮಾಡು ವುದಿಲ್ಲ. ಅವರು ತಪ್ಪದೆ ಭಗವನ್ನಾಮ ಕೀರ್ತನೆ ಮಾಡುತ್ತಾರೆ. ನೀವು ನಮ್ಮೊಡನೆ ಸಹಕರಿಸ ಬಯಸುವುದಾದರೆ, ದಯವಿಟ್ಟು ಚರ್ಚುಗಳಿಗೆ ಹೋಗಿ, "ಕ್ರೈಸ್ಟ" "ಕೃಷ್ಟ" ಅಥವಾ "ಕೃಷ್ಣ" ನಾಮಸಂಕೀರ್ತನೆ ಮಾಡಿ. ನಿಮಗೇನೂ ಆಕ್ಷೇಪವಿಲ್ಲತಾನೇ ?

ಫಾದರ್ ಇಮ್ಯಾನ್ಯುವೆಲ್ : ಏನೂ ಇರಲಾರದು. ನನ್ನ ಮಟ್ಟಿಗೆ ಹೇಳುವುದಾದರೆ ನಿಮ್ಮೊಡನೆ ಸೇರಲು ನಾನು ಹರ್ಷಿಸುತ್ತೇನೆ.

ಶ್ರೀಲ ಪ್ರಭುಪಾದ : ಬೇಡ. ನಾವೀಗ ಕ್ರಿಶ್ಚನ್ ಚರ್ಚಿನ ಪ್ರತಿನಿಧಿಯಾಗಿರುವ ನಿಮ್ಮೊಡನೆ ಮಾತನಾಡುತ್ತಿದ್ದೇವೆ. ನಿಮ್ಮ ಚರ್ಚುಗಳನ್ನು ಸದಾ ಮುಚ್ಚಿರುವ ಬದಲಾಗಿ ಅವುಗಳನ್ನು ನೀವು ನಮಗೇಕೆ ಒಪ್ಪಿಸಬಾರದು ? ನಾವು ಅಲ್ಲಿ ದಿನದ ಇಪ್ಪತ್ನಾಲ್ಕು ಗಂಟೆಯೂ ಭಗವನ್ನಾಮ ಸಂಕೀರ್ತನೆ ಮಾಡುತ್ತೇವೆ. ಅನೇಕ ಕಡೆಗಳಲ್ಲಿ ಚರ್ಚುಗಳಿಗೆ ಯಾರೂ ಹೋಗದೆ ಅವು ಮುಚ್ಚಿಹೋಗಿದ್ದುವು. ಅಂಥ ಕೆಲವು ಚರ್ಚುಗಳನ್ನು ನಾವು ಕೊಂಡುಕೊಂಡಿದ್ದೇವೆ. ಇಂಗ್ಲೆಂಡಿನಲ್ಲಿ ನೂರಾರು ಚರ್ಚುಗಳು ಮುಚ್ಚಿರುವುದನ್ನು ಅಥವಾ ಅಲ್ಲಿ ಲೌಕಿಕ ಕಾರ್ಯಗಳು ನಡೆಯುತ್ತಿರುವುದನ್ನು ನಾನು ಕಂಡೆ. ಅಂಥ ಒಂದು ಚರ್ಚನ್ನು ನಾವು ಲಾಸ್ ಏಂಜಲಿಸ್‌ನಲ್ಲಿ ಕೊಂಡುಕೊಂಡೆವು. ಅಲ್ಲಿ ಯಾರೂ ಬರುತ್ತಿರಲಿಲ್ಲ. ಅಂತೆಯೇ ಅದನ್ನು ನಮಗೆ ಮಾರಿದರು. ಈಗ ನೀವಲ್ಲಿ ಸಾವಿರಾರು ಜನ ಸೇರಿರುವುದನ್ನು ಕಾಣಬಹುದು. ಬುದ್ಧಿಯಿದ್ದ ಯಾವನೆ ಆಗಲಿ ದೇವರು ಏನೆಂಬುದನ್ನು ಐದು ನಿಮಿಷಗಳಲ್ಲಿ ಅರಿತುಕೊಳ್ಳಬಹುದು. ಅದಕ್ಕೆ ಐದು ಗಂಟೆಯ ಕಾಲ ಬೇಕಿಲ್ಲ.

ಫಾದರ್ ಇಮ್ಯಾನ್ಯುವೆಲ್ : ಅರ್ಥವಾಯಿತು.

ಶ್ರೀಲ ಪ್ರಭುಪಾದ : ಆದರೇನು, ಜನ ತಿಳಿದುಕೊಳ್ಳುತ್ತಿಲ್ಲ. ಅರಿಯುವ ಇಚ್ಛೆಯಿಲ್ಲ ದಿರುವುದೇ ಅವರಿಗೆ ಹಿಡಿದಿರುವ ರೋಗ.

ಸಂದರ್ಶಕ : ದೇವರನ್ನು ಅರಿಯಲು ಬುದ್ಧಿವಂತಿಕೆ ಬೇಕಿಲ್ಲ, ವಿನಯ ಬೇಕು ಎಂದು ನಾನು ಭಾವಿಸುತ್ತೇನೆ.

ಶ್ರೀಲ ಪ್ರಭುಪಾದ : ವಿನಯವೆಂದರೆ ಬುದ್ಧಿವಂತಿಕೆಯೇ. ದೇವರ ರಾಜ್ಯ ವಿನಯ ಸಂಪನ್ನರಿಗೂ ಮುಗ್ಧರಿಗೂ ಸೇರಿದ್ದು. ಇದು ಬೈಬಲಿನಲ್ಲಿ ಹೇಳಲ್ಪಟ್ಟಿದೆ ಅಲ್ಲವೇ ? ಆದರೆ ಖೂಳರು ಪ್ರತಿಯೊಬ್ಬರೂ ದೇವರೆಂದೇ ವಾದಿಸುತ್ತಾರೆ. ಈಗ ಈ ವಿಚಾರವೇ ಪ್ರಬಲವಾಗಿದೆ ಹೀಗಾಗಿ ಯಾರೂ ವಿನೀತರಿಲ್ಲ, ಮುಗ್ಧರಿಲ್ಲ. ಎಲ್ಲರೂ ದೇವರೇ ಆಗಿದ್ದೇವೆಂದು ಭಾವಿಸುವು ದಾದರೆ ಅವರು ವಿನೀತರೂ ಮುಗ್ಧರೂ ಆಗಬೇಕಾಗಿಲ್ಲ ತಾನೇ ? ನಮ್ಮ ಶಿಷ್ಯರು ಹೇಗೆ ವಿನೀತರೂ, ಸೌಜನ್ಯ ಪೂರ್ಣರೂ ಆಗಬೇಕೆಂಬುದನ್ನು ನಾನವರಿಗೆ ಹೇಳಿ ಕೊಡುತ್ತೇನೆ. ಅವರು ಮಂದಿರದಲ್ಲಿ ದೇವರಿಗೆ ಮತ್ತು ಗುರುಗಳಿಗೆ ಭಕ್ತಿಭಾವದಿಂದ ನಮಸ್ಕರಿಸುತ್ತಾರೆ. ಈ ಮಾರ್ಗ ದಲ್ಲಿಯೇ ಅವರು ಮುನ್ನಡೆಯುತ್ತಾರೆ. ವಿನಯ ಸೌಜನ್ಯಗಳು ಮನುಷ್ಯನನ್ನು ಬಹು ಶೀಘ್ರವೆ ದಿವ್ಯ ಸಾಕ್ಷಾತ್ಕಾರದೆಡೆಗೆ ಕೊಂಡೊಯ್ಯುತ್ತವೆ. "ದೇವರಲ್ಲಿ ಮತ್ತು ದೇವರ ಪ್ರತಿನಿಧಿಯಾದ

ಗುರುಗಳಲ್ಲಿ ಯಾರು ಅಚಲ ಶ್ರದ್ಧೆಯನ್ನು ಹೊಂದಿರುವರೋ ಅವರಿಗೆ ವೇದಶಾಸ್ತ್ರ ರಹಸ್ಯಗಳು ಗೋಚರವಾಗುತ್ತವೆ."

ಫಾದರ್ ಇಮ್ಯಾನ್ಯುವೆಲ್ : ಆದರೆ ಈ ವಿನಯ, ಗೌರವ ಇನ್ನಾರಿಗೂ ತೋರ್ಸಬೇಡವೇ ?

ಶ್ರೀಲ ಪ್ರಭುಪಾದ : ತೋರಬೇಕು. ಆದರೆ ವಿನಯ, ಗೌರವ ಎರಡು ವಿಧವಾಗಿದೆ. ಒಂದು ವಿಶೇಷ, ಮತ್ತೊಂದು ಸಾಮಾನ್ಯ. ನಾವು ಅನ್ಯರಿಂದ ಗೌರವವನ್ನು ಸ್ವೀಕರಿಸಬಾರದು ಎಂದು ಶ್ರೀ ಕೃಷ್ಣ ಚೈತನ್ಯರು ಉಪದೇಶಿಸಿದರು. ಸದಾ ಇತರರನ್ನೂ ಗೌರವಿಸಬೇಕು. ಅವರು ಅಗೌರವಾನ್ವಿತರಾಗಿದ್ದರೂ ಕೂಡ ಚಿಂತೆಯಿಲ್ಲ. ಆದರೆ ದೇವರಲ್ಲಿ ಮತ್ತು ಅವನ ಅನನ್ಯ ಭಕ್ತರಲ್ಲಿ ವಿಶೇಷ ಗೌರವ ತೋರಬೇಕು.

ಫಾದರ್ ಇಮ್ಯಾನ್ಯುವೆಲ್ : ಸರಿ, ಒಪ್ಪಿದೆ.

ಶ್ರೀಲ ಪ್ರಭುಪಾದ : ಕ್ರಿಶ್ಚನ್ ಪಾದ್ರಿಗಳು ಕೃಷ್ಣಪ್ರಜ್ಞಾ ಆಂದೋಲನದಲ್ಲಿ ಸಹಕರಿಸಬೇಕೆಂಬುದು ನನ್ನ ಭಾವನೆ. ಅವರು ಕ್ರೈಸ್ಟ ಅಥವಾ ಕ್ರಿಸ್ಟೋಸ್ ನಾಮ ಸಂಕೀರ್ತನ ಮಾಡಬೇಕು ಮತ್ತು ಪ್ರಾಣಿವಧೆಯನ್ನು ನಿಲ್ಲಿಸಬೇಕು. ಈ ಕಾರ್ಯಕ್ರಮ ಬೈಬಲ್ಲಿನ ಉಪದೇಶಗಳಿಗನುಸಾರವಾಗಿದೆ. ಇದು ನಾನು ಹೇಳುವ ವೇದಾಂತವಲ್ಲ. ನೀವು ಹೀಗೆ ಆಚರಿಸಿ ನೋಡಿ, ಆಗ ಜಗತ್ತಿನಲ್ಲಿ ಎಂಥ ಸ್ಥಿತ್ಯಂತರ ಉಂಟಾಗುತ್ತದೆ ?

ಫಾದರ್ ಇಮ್ಯಾನ್ಯುವೆಲ್ : ನಿಮಗೆ ಅನಂತ ಧನ್ಯವಾದಗಳು.

ಶ್ರೀಲಪ್ರಭುಪಾದ : ಹರೇ ಕೃಷ್ಣ.





# ಜೀಸಸ್ ಕ್ರೈಸ್ತ ಒಬ್ಬ ಗುರುವಾಗಿದ್ದರು

**ಹರೇಕೃಷ್ಣ ಆಂದೋಲನದ ದಿವ್ಯ ನಾಯಕತ್ವ ವಹಿಸಿದ ಗುರುಗಳು ಭಗವಾನ್ ಜೀಸಸ್ ಕ್ರೈಸ್ತನನ್ನು "ದೇವರ ಮಗ, ದೇವ ಪ್ರತಿನಿಧಿ....ನಮ್ಮ ಗುರು.... ನಮ್ಮ ಆಧ್ಯಾತ್ಮ ಸ್ವಾಮಿ" ಎಂದು ಇಲ್ಲಿ ಅಂಗೀಕರಿಸುತ್ತಾರೆ. ಆದರೂ ಈಗ ಕ್ರೈಸ್ತನ ಅನುಯಾಯಿಗಳೆಂದು ಹೇಳಿಕೊಳ್ಳುವವರ ಬಗ್ಗೆ ಕೆಲವು ಕಟೂಕ್ತಿಗಳನ್ನಾಡಿದ್ದಾರೆ....**

ದೈವೀ ಪ್ರಜ್ಞೆಯುಳ್ಳ ನಿಜವಾದ ಯಾವ ಗುರುವೇ ಆಗಲಿ ಸಹನಶೀಲ (ತಿತಿಕ್ಷಾ) ಮತ್ತು ಕರುಣಾಮಯನಾಗಿರಲೇಬೇಕು ಎಂದು ಶ್ರೀ ಮದ್ಭಾಗವತವು ನಿರೂಪಿಸುತ್ತದೆ. ಜೀಸಸ್ ಕ್ರೈಸ್ತನ ಸ್ವಭಾವದಲ್ಲಿ ನಾವು ಈ ಎರಡೂ ಗುಣಗಳನ್ನು ಕಾಣುತ್ತೇವೆ. ಅವನು ಅದೆಷ್ಟು ಸಹನಶೀಲನಾಗಿದ್ದನೆಂದರೆ ಆತನನ್ನು ಶಿಲುಬೆಗೇರಿಸುವಾಗಲೂ ಆತನು ಯಾರನ್ನೂ ಹಳಿಯಲಿಲ್ಲ. ತನ್ನನ್ನು ಕೊಲ್ಲುವವರನ್ನೇ ಕ್ಷಮಿಸಬೇಕೆಂದು ಆತನು ದೇವರನ್ನು ಪ್ರಾರ್ಥಿಸುವಷ್ಟು ಕರುಣಾಮಯನಾಗಿದ್ದನು. (ಅವರು ಆತನನ್ನು ನಿಜವಾಗಿ ಕೊಲ್ಲಲಾಗಲಿಲ್ಲ. ತಾವು ಆತನನ್ನು ಕೊಲ್ಲಬಹುದೆಂದು ಅವರು ಭಾವಿಸಿದ್ದರು. ಹಾಗೆ ಮಾಡುತ್ತಿದ್ದ ಅವರು ಮಹಾಪರಾಧವನ್ನೇ ಮಾಡುತ್ತಿದ್ದರು.) ಕ್ರೈಸ್ತನನ್ನು ಶಿಲುಬೆಗೆ ಏರಿಸುತ್ತಿದ್ದಾಗ, ಆತನು "ತಂದೆಯೇ, ಅವರನ್ನು ಕ್ಷಮಿಸು, ತಾವು ಏನು ಮಾಡುತ್ತಿದ್ದಾರೆಂಬುದು ಅವರಿಗೆ ತಿಳಿದಿಲ್ಲ" ಎಂದ.

ದೇವ ಪ್ರಜ್ಞೆಯನ್ನುಪದೇಶಿಸುವವನು ಸರ್ವಜೀವಿಗಳ ಮಿತ್ರನಾಗಿರುತ್ತಾನೆ. ಇಂಥ ಮಿತ್ರತ್ವವನ್ನು 'ಕೊಲಬೇಡ, ಎಂಬ ಉಪದೇಶದಿಂದ ನಿದರ್ಶಿಸುತ್ತಾನೆ. ಜೀಸಸ್ ಕ್ರೈಸ್ತ ಇಂಥ ಮಿತ್ರತ್ವವನ್ನು 'ಕೊಲಬೇಡ' ಎಂಬ ಉಪದೇಶದಿಂದ ನಿದರ್ಶಿಸುತ್ತಾನೆ. ಆದರೆ ಕ್ರಿಶ್ಚನ್ನರು ಈ ಉಪದೇಶವನ್ನು ತಪ್ಪು ಅರ್ಥ ಮಾಡಲು ಬಯಸುತ್ತಿದ್ದಾರೆ. ಪ್ರಾಣಿಗಳಿಗೆ ಆತ್ಮವಿಲ್ಲ. ಆದುದರಿಂದ ವಧಾಗಾರಗಳಲ್ಲಿ ಕೋಟ್ಯಂತರ ಮುಗ್ಧ ಪ್ರಾಣಿಗಳನ್ನೇ ತಾವು ನಿರಾಂತಕವಾಗಿ ಕೊಲೆಗೈಯಬಹುದೆಂದು ಅವರು ಭಾವಿಸಿದ್ದಾರೆ. ಹೀಗಾಗಿ ತಾವು ಕ್ರೈಸ್ತ ಧರ್ಮೀಯರೆಂದು ಹೇಳಿಕೊಳ್ಳುವವರು ಅನೇಕರಿದ್ದರೂ, ಭಗವಾನ್ ಜೀಸಸ್ ಕ್ರೈಸ್ತನ ಉಪದೇಶಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವ ಒಬ್ಬನನ್ನು ಕಂಡುಹಿಡಿಯುವುದು ಬಹಳ ಕಷ್ಟವಾಗುತ್ತದೆ.

ವೈಷ್ಣವನಾದವನು ಪರ ದುಃಖವನ್ನು ಕಂಡು ಸಹಿಸಲಾರನು. ಅಂತೆಯೇ ಭಗವಾನ್ ಜೀಸಸ್ ಕ್ರೈಸ್ತನು ಇತರರ ದುಃಖ ನೀಗಲು ತಾನು ಶಿಲುಬೆಗೇರಲು ಒಪ್ಪಿದನು. ಆದರೆ ಅವನ ಅನುಯಾಯಿಗಳು ಎಷ್ಟು ಅಶ್ರದ್ಧಾವಂತರಾಗಿದ್ದಾರೆಂದರೆ, ಅವರು, "ನಮಗಾಗಿ ಕ್ರೈಸ್ತ ಕಷ್ಟ

ಪಡಲಿ, ನಾವು ಮಾತ್ರ ಪಾಪ ಮಾಡುತ್ತಲೇ ಇರೋಣ" ಎಂದು ನಿರ್ಧರಿಸಿದ್ದಾರೆ. ಅವರು ಕ್ರೈಸ್ತನನ್ನು ಎಷ್ಟು ಪ್ರೀತಿಸುತ್ತಿದ್ದಾರೆಂದರೆ, "ಹೇ ನಮ್ಮ ಪ್ರಿಯ ಕ್ರೈಸ್ತನೇ, ನಾವು ಬಹಳ ದುರ್ಬಲರು. ನಾವು ನಮ್ಮ ಪಾಪಕಾರ್ಯಗಳನ್ನು ಬಿಡಲಾರೆವು. ಆದುದರಿಂದ ನಮಗಾಗಿ ದಯವಿಟ್ಟು ನೀನೇ ಕಷ್ಟ ಅನುಭವಿಸು ಎಂಬುದೇ ಅವರ ಮನೋಗತವಾಗಿದೆ.

ಜೀಸಸ್ ಕ್ರೈಸ್ತನು "ಕೊಲಬೇಡ" ಎಂದು ಉಪದೇಶಿಸಿದ. ಆದರೆ ಅವನ ಅನುಯಾಯಿಗಳು ಈಗ "ಹೇಗಾದರಾಗಲಿ ನಾವು ಕೊಲ್ಲೋಣ" ಎಂದು ನಿರ್ಧರಿಸಿದ್ದಾರೆ. ಅವರು ಆಧುನಿಕ ಮತ್ತು ವೈಜ್ಞಾನಿಕವಾದ ದೊಡ್ಡ ದೊಡ್ಡ ಕಸಾಯಿಖಾನೆಗಳನ್ನು ತೆರೆಯುತ್ತಾರೆ. "ಪಾಪವೆಂಬುದೇನಾದರಿದ್ದರೆ, ನಮಗಾಗಿ ಕ್ರೈಸ್ತನು ಕಷ್ಟ ಅನುಭವಿಸುತ್ತಾನೆ." ಇದು ಅತ್ಯಂತ ಅಸಹ್ಯ ತೀರ್ಮಾನ.

ಕ್ರೈಸ್ತನು ತನ್ನ ಭಕ್ತರ ಪೂರ್ವ ಸಂಚಿತ ಪಾಪಗಳಿಗಾಗಿಯೂ ಕಷ್ಟ ಅನುಭವಿಸುತ್ತಾನೆ. ಆದರೆ "ನನ್ನ ಪಾಪಗಳಿಗಾಗಿ ಜೀಸಸ್ ಕ್ರೈಸ್ತನನ್ನು ಏಕೆ ಕಷ್ಟಕ್ಕೆ ಗುರಿ ಮಾಡಬೇಕು." ನಾನು ನನ್ನ ಪಾಪ ಕಾರ್ಯಗಳನ್ನು ನಿಲ್ಲಿಸಬೇಕು ಎಂದು ಯೋಚಿಸುವಷ್ಟು ಅವನ ಭಕ್ತರು ವಿವೇಕ ವಂತರಾಗಬೇಕು.

ತಂದೆಯ ಅತ್ಯಂತ ಪ್ರೀತ್ಯಾಸ್ಪದನಾದ ಮಗನು ನರಹತ್ಯೆ ಮಾಡುತ್ತಾನೆಂದೇ ಭಾವಿಸೋಣ. "ಇದಕ್ಕೆ ಏನಾದರೂ ದಂಡನೆ ಒದಗಲಿದ್ದರೆ ನನಗಾಗಿ ನನ್ನ ತಂದೆ ಅದನ್ನು ಅನುಭವಿಸಲಿ" ಎಂದು ಅವನು ವಿಚಾರ ಮಾಡುತ್ತಾನೆಂದು ಭಾವಿಸೋಣ. ಕಾನೂನು ಇದಕ್ಕೆ ಅನುಮತಿಸುವುದೇ ? ಕೊಲೆಪಾತಕಿಯನ್ನು ಬಂಧಿಸಿದಾಗ, "ಬೇಡ ಬೇಡ ನೀವು ನನ್ನನ್ನು ಬಿಟ್ಟುಬಿಡಿ ನಾನು ನನ್ನ ತಂದೆಯ ಮುದ್ದು ಮಗ. ನೀವು ನನ್ನ ತಂದೆಯನ್ನು ಬಂಧಿಸಿರಿ." ಪೊಲೀಸ್ ಅಧಿಕಾರಿಗಳು ಆ ಮೂರ್ಖನ ಮಾತಿಗೆ ಕಿವಿಗೊಡುವರೇ ? ಅವನು ತಾನು ಕೊಲೆ ಗೈದಿದ್ದಾನೆ. ಆದರೆ ತನ್ನ ತಂದೆ ಆ ಶಿಕ್ಷೆಯನ್ನು ಅನುಭವಿಸಬೇಕೆಂದು ಬಯಸುತ್ತಾನೆ ! ಇದು ವಿವೇಕಯುತವಾದ ಮಾತೇ ? "ಇಲ್ಲ ನೀನು ಕೊಲೆ ಮಾಡಿದ್ದೀಯೆ ! ನಿನ್ನನ್ನು ಗಲ್ಲಿಗೇರಿಸಲೇ ಬೇಕು." ಇದೇ ರೀತಿಯಾಗಿ ನೀವು ಪಾಪ ಕಾರ್ಯಗಳನ್ನು ಮಾಡಿದಾಗ ನೀವೇ ಅದರ ಫಲಾನುಭವ ಮಾಡಬೇಕು–ಜೀಸಸ್ ಕ್ರೈಸ್ತನಲ್ಲ. ಇದು ದೇವರ ನಿಯಮ.

ಜೀಸಸ್ ಕ್ರೈಸ್ಟ್- ದೇವರ ಮಗ, ದೇವರ ಪ್ರತಿನಿಧಿ-ಅಷ್ಟು ಮಹಾನ್ ವ್ಯಕ್ತಿ ಆತನು ಯಾವ ತಪ್ಪನ್ನು ಮಾಡಿರಲಿಲ್ಲ. ಆದರೂ ಆತನನ್ನು ಶಿಲುಬೆಗೇರಿಸಲಾಯಿತು. ಆತನು ದೇವ ಪ್ರಜ್ಞೆಯನ್ನು ಪ್ರದಾನ ಮಾಡಬಯಸಿದ್ದ. ಅದಕ್ಕೆ ಪ್ರತಿಫಲವೋ ಎಂಬಂತೆ ಅವರು ಆತನನ್ನು ಶಿಲುಬೆಗೇರಿಸಿದರು–ಅವರು ಅಷ್ಟು ಕೃತಘ್ನರಾಗಿದ್ದರು. ಅವರು ಆತನ ಉಪದೇಶವನ್ನು ಅರಿಯಲು ಅಸಮರ್ಥರಾಗಿದ್ದರು. ನಾವು ಮಾತ್ರ ಆತನನ್ನು ಮೆಚ್ಚಿಕೊಳ್ಳುತ್ತೇವೆ ಮತ್ತು ದೇವರ ಪ್ರತಿನಿಧಿಯೆಂದು ನಾವು ಆತನನ್ನು ಸರ್ವರೀತಿಯಿಂದಲೂ ಗೌರವಿಸುತ್ತೇವೆ.

ಕ್ರೈಸ್ತ ನೀಡಿದ ಸಂದೇಶವು ಆತನ ವಿಶಿಷ್ಟ ದೇಶ ಕಾಲ ಸ್ಥಳಗಳಿಗೆ ಮತ್ತು ವಿಶಿಷ್ಟ ಜನ ವರ್ಗಕ್ಕೆ ತಕ್ಕದ್ದಾಗಿತ್ತು. ಆತನು ದೇವರ ದೂತ ಎಂಬುದರಲ್ಲಿ ಸಂದೇಹವೇ ಇಲ್ಲ. ಅಂತೆಯೆ ನಾವು ಜೀಸಸ್ ಕ್ರೈಸ್ತನನ್ನು ಸ್ತುತಿಸುತ್ತೇವೆ ಮತ್ತು ವಂದಿಸುತ್ತೇವೆ.

ಒಂದು ಸಲ, ಮೆಲಬೋರ್ನ್‌ನಲ್ಲಿ, ಕೆಲವು ಜನ ಕ್ರಿಶ್ಚನ್ ಸಚಿವರು ನನ್ನನು ಕಂಡರು. "ಜೀಸಸ್ ಕ್ರೈಸ್ತನ ಬಗ್ಗೆ ನಿಮ್ಮ ವಿಚಾರವೇನು ?" ಎಂದು ಕೇಳಿದರು. "ಆತನು ನಮ್ಮ ಗುರು, ಆತನು ದೇವ ಪ್ರಜ್ಞೆಯನ್ನು ಬೋಧಿಸುತ್ತಿದ್ದಾನೆ. ಆದುದರಿಂದ ಕ್ರೈಸ್ತನು ನಮಗೂ ಗುರುವೇ ಸರಿ" ಎಂದು ಉತ್ತರಿಸಿದೆ. ಆ ಸಚಿವರು ನನ್ನ ಮಾತನ್ನು ಬಹಳಷ್ಟು ಮೆಚ್ಚಿಕೊಂಡರು.

ನಿಜವಾಗಿ, ದೇವರ ಮಹಿಮೆಯನ್ನು ಕೊಂಡಾಡುವವರನ್ನು ಗುರುವೆಂದು ಗ್ರಹಿಸಬೇಕು. ಜೀಸಸ್ ಕ್ರೈಸ್ತ ಅಂಥ ಒಬ್ಬ ಮಹಾನ್ ಪುರುಷ. ಆತನು ಸಾಮಾನ್ಯ ಮನುಷ್ಯನೆಂದು ನಾವು ಎಂದೂ ಭಾವಿಸಬಾರದು. ಸ್ವರೂಪೋದ್ಧಾರಕ ಗುರುವನ್ನು ಸಾಮಾನ್ಯ ಮಾನವನೆಂದು ಭಾವಿಸುವವನು ತಮೋಜೀವಿ ಎಂದು ಶಾಸ್ತ್ರಗಳು ಸಾರಿವೆ. ಜೀಸಸ್ ಕ್ರೈಸ್ತನು ಸಾಮಾನ್ಯ ಮಾನವನಾಗಿದ್ದಿದ್ದರೆ, ಆತನು ದೈವೀ ಪ್ರಜ್ಞೆಯನ್ನು ಪ್ರದಾನ ಮಾಡುತ್ತಿರಲಿಲ್ಲ.



## ಕೊಲಬೇಡ ಅಥವಾ ನರಹತ್ಯೆ ಬೇಡ ಯಾವುದು ಸರಿ ?

**1973ರಲ್ಲಿ ಶ್ರೀಲ ಪ್ರಭುಪಾದರು ಪ್ಯಾರಿಸಿಗೆ ಸಮೀಪದ ಒಂದು ವಿಹಾರ ಆಶ್ರಮದಲ್ಲಿ ಕಾರ್ಡಿನಲ್ ಜೀನ್ ಡೇನಿಯೆಲೋ ಜೊತೆ ಸಂಭಾಷಣೆ ನಡೆಸಿದರು. "....ಮನುಷ್ಯನನ್ನು 'ಕೊಲ್ಲಬೇಡ' ಎಂದು ಮಾತ್ರ ಬೈಬಲ್ ಹೇಳಿಲ್ಲ, "ಕೊಲ್ಲಬೇಡ" ಎಂದು ಸರ್ವೇಸಾಮಾನ್ಯವಾಗಿ ಹೇಳಿದೆ. ನೀವು ಇದನ್ನು ನಿಮಗೆ ಅನುಕೂಲವಾದಂತೆ ಏಕೆ ಅರ್ಥ ಮಾಡುವಿರಿ ?"**

ಶ್ರೀಲ ಪ್ರಭುಪಾದ : ಜೀಸಸ್ ಕ್ರೈಸ್ತ "ಕೊಲಬೇಡ" ಎಂದಿದ್ದಾನೆ. ಹೀಗಿರುವಾಗ ಕ್ರಿಶ್ಚನ್ನರು ಪ್ರಾಣಿವಧೆ ಏಕೆ ಮಾಡುತ್ತಿದ್ದಾರೆ ?

ಕಾರ್ಡಿನಲ್ ಡೇನಿಯಲೋ : ಕ್ರಿಶ್ಚನ್ ಧರ್ಮದಲ್ಲಿ ಕೊಲ್ಲುವುದು ಖಂಡಿತವಾಗಿಯೂ ನಿಷಿದ್ಧವಾಗಿದೆ. ಆದರೆ ಮಾನವಜೀವ ಮತ್ತು ಪ್ರಾಣಿಜೀವಗಳಲ್ಲಿ ವ್ಯತ್ಯಾಸವಿದೆಯೆಂದು ನಾವು ನಂಬಿದ್ದೇವೆ. ಮಾನವನು ದೇವರ ಪ್ರತಿಮಾ ರೂಪದಲ್ಲಿ ಸೃಷ್ಟಿಯಾಗಿ ಪವಿತ್ರ ನೆನಿಸಿದ್ದಾನೆ, ಆದುದರಿಂದ ಮಾನವ ಹತ್ಯೆಯು ನಿಷೇಧಿತವಾಗಿದೆ.

ಶ್ರೀಲ ಪ್ರಭುಪಾದ : ಆದರೆ ಬೈಬಲ್ ಕೇವಲ "ಮಾನವ ಹತ್ಯೆ ಮಾಡಬೇಡ" ಎಂದಿಲ್ಲ. ಅದು ಸಾಮಾನ್ಯತಃ "ಕೊಲಬೇಡ" ಎಂದಿದೆ.

ಕಾರ್ಡಿನಲ್ ಡೇನಿಯಲೋ : ಮಾನವ ಜೀವ ಮಾತ್ರ ಪವಿತ್ರವಾದದ್ದೆಂದು ನಾವು ನಂಬಿದ್ದೇವೆ.

ಶ್ರೀಲ ಪ್ರಭುಪಾದ : ಅದು ನಿಮ್ಮ ಅರ್ಥ ವಿವರಣೆ. ಆದೇಶವಿರುವುದು "ಕೊಲಬೇಡ" ಎಂದು.

ಕಾರ್ಡಿನಲ್ ಡೇನಿಯಲೋ : ತಿನ್ನಲು ಆಹಾರಕ್ಕಾಗಿ ಮನುಷ್ಯನು ಪ್ರಾಣಿವಧೆ ಮಾಡುವುದು ಅನಿವಾರ್ಯವಾಗಿದೆ.

ಶ್ರೀಲ ಪ್ರಭುಪಾದ : ಸರಿಯಲ್ಲ. ಮಾನವನು ಧಾನ್ಯ, ತರಕಾರಿ, ಹಣ್ಣು ಮತ್ತು ಹಾಲು ಉಪಯೋಗಿಸಬಹುದು.

ಕಾರ್ಡಿನಲ್ ಡೇನಿಯಲೋ : ಮಾಂಸ ವರ್ಜ್ಯವೇ ?

ಶ್ರೀಲ ಪ್ರಭುಪಾದ : ಹೌದು, ವರ್ಜ್ಯ. ಮನುಷ್ಯನು ಶಾಖಾಹಾರಕ್ಕಾಗಿ ಹುಟ್ಟಿದವನು. ಹುಲಿ ನಿಮ್ಮ ಹಣ್ಣು ತಿನ್ನಲು ಬರುವುದಿಲ್ಲ. ಅದರ ಆಹಾರ ಪ್ರಾಣಿಮಾಂಸ. ಆದರೆ, ತರಕಾರಿ, ಹಣ್ಣು, ಧಾನ್ಯ ಮತ್ತು ಹೈನು ಪದಾರ್ಥಗಳು ಮಾನವನ ಆಹಾರವಾಗಿವೆ. ಹೀಗಿರುವಾಗ ಪ್ರಾಣಿವಧೆ ಪಾಪವಲ್ಲವೆಂದು ಹೇಗೆ ಹೇಳುವಿರಿ ?

ಕಾರ್ಡಿನಲ್ ಡೇನಿಯಲೋ : ಇದೊಂದು ಭಾವನಾತ್ಮಕ ಪ್ರಶ್ನೆ ಎಂದು ನಾವು ಭಾವಿಸುತ್ತೇವೆ. ಹಸಿದವನಿಗೆ ಆಹಾರ ನೀಡಲು ಪ್ರಾಣಿವಧೆ ಮಾಡಿದರೆ ತಪ್ಪಿಲ್ಲ.

ಶ್ರೀಲ ಪ್ರಭುಪಾದ : ಹಸುವನ್ನು ನೋಡಿ, ನಾವು ಅದರ ಹಾಲು ಕುಡಿಯುತ್ತೇವೆ. ಅಂತೆಯೇ ಅದು ನಮ್ಮ ತಾಯಿ. ನೀವು ಒಪ್ಪುವಿರಾ ?

ಕಾರ್ಡಿನಲ್ ಡೇನಿಯಲೋ : ಖಂಡಿತ.

ಶ್ರೀಲ ಪ್ರಭುಪಾದ : ಹಸು ನಿಮ್ಮ ತಾಯಿ ಎಂದಾದ ಮೇಲೆ ಅದರ ವಧೆಯನ್ನು ನೀವು ಹೇಗೆ ಸಮರ್ಥಿಸಿಕೊಳ್ಳುವಿರಿ ? ನೀವು ಅದರ ಹಾಲು ತೆಗೆದುಕೊಳ್ಳುವಿರಿ. ಅವಳು ಮುದಿಯಾಗಿ ಹಾಲು ಕೊಡಲು ಆಗದಾಗ ನೀವು ಅವಳ ಕತ್ತು ಕೊಯ್ಯುವಿರಿ. ಇದು ಬಹಳ ಮಾನವೀಯ ನೀತಿಯೇ ? ಭಾರತದಲ್ಲಿ ಮಾಂಸಾಹಾರಿಗಳಿಗೆ ಆಡು, ಹಂದಿ ಅಥವಾ ಎಮ್ಮೆ ಹಾಗೂ ಈ ಬಗೆಯ ಕೆಳವರ್ಗದ ಪ್ರಾಣಿಗಳನ್ನು ಕೊಂದು ತಿನ್ನುವಂತೆ ಹೇಳಲಾಗುತ್ತದೆ. ಆದರೆ ಗೋವಧೆ ಮಾತ್ರ ಮಹತ್ತರವಾದ ಪಾಪಕಾರ್ಯ. ಕೃಷ್ಣಪ್ರಜ್ಞಾ ಪ್ರಚಾರದಲ್ಲಿ ಜನ ಯಾವ ಬಗೆಯ ಮಾಂಸವನ್ನೂ ತಿನ್ನದಂತೆ ನಾವು ಕೇಳಿಕೊಳ್ಳುತ್ತೇವೆ. ನನ್ನ ಶಿಷ್ಯರು ಕಟ್ಟು ನಿಟ್ಟಾಗಿ ಈ ನಿಯಮವನ್ನು ಪಾಲಿಸುತ್ತಾರೆ. ಗೋವಧೆ ಮಾಡಬೇಡಿ. ಅದು ಮಹಾ ಪಾಪ. ಮಾನವನು ಪಾಪ ಕಾರ್ಯ ಪ್ರಸಕ್ತನಾಗಿರುವ ತನಕ ದೇವರನ್ನು ತಿಳಿಯಲಾರ. ದೇವರನ್ನು ಅರಿತುಕೊಳ್ಳುವುದು ಮತ್ತು ಪ್ರೀತಿಸುವುದೇ ಮಾನವ ಜೀವಿತದ ಮುಖ್ಯ ಧ್ಯೇಯ. ನೀವು ಪಾಪಕಾರ್ಯದಲ್ಲಿಯೇ ತೊಡಗಿದ್ದರೆ ದೇವರನ್ನು ಎಂದೂ ಅರಿಯಲಾರಿರಿ–ಪ್ರೀತಿಸು ವುದಂತೂ ದೂರ ಉಳಿಯಿತು.

ಕಾರ್ಡಿನಲ್ ಡೇನಿಯಲೋ : ಇದು ಅಷ್ಟು ಮುಖ್ಯವಾದ ಅಂಶವಲ್ಲವೆಂದು ನಾನು ಭಾವಿಸುತ್ತೇನೆ: ಮಹತ್ವದ ಅಂಶವೆಂದರೆ ದೇವರನ್ನು ಪ್ರೀತಿಸುವುದು. ದೇವರ ಆದೇಶಗಳು ಧರ್ಮಾಧರ್ಮಕ್ಕೂ ವ್ಯತ್ಯಾಸವಾಗುತ್ತ ಹೋಗುತ್ತವೆ.

ಶ್ರೀಲ ಪ್ರಭುಪಾದ : ನೀವು ಕೊಲೆ ಮಾಡಬಾರದೆಂಬುದೇ ಬೈಬಲಿನಲ್ಲಿರುವ ದೇವರ ನಿಜ ಆದೇಶ. ಆದುದರಿಂದ ನೀವು ಮಾಡುವ ಗೋವಧೆ ಪಾಪ ಕಾರ್ಯ.

ಕಾರ್ಡಿನಲ್ ಡೇನಿಯಲೋ : ಕೊಲ್ಲುವುದು ವಿಹಿತವಲ್ಲ ಎಂದು ಭಾರತೀಯರಿಗೆ ದೇವರು ಹೇಳಿದ್ದಾನೆ, ಯಹೂದಿಗಳಿಗೆ ಹೇಳಿರುವುದೆಂದರೆ....

ಶ್ರೀಲ ಪ್ರಭುಪಾದ : ಛೇ ಛೇ ಎಲ್ಲಾದರೂ ಉಂಟೇ ? "ಕೊಲಬೇಡ" ಎಂದು ಜೀಸಸ್ ಕ್ರೈಸ್ತ ಉಪದೇಶಿಸಿದ್ದಾನೆ. ನೀವು ಅದನ್ನು ನಿಮ್ಮ ಅನುಕೂಲಕ್ಕೆ ತಕ್ಕಂತೆ ಏಕೆ ಅರ್ಥ ಮಾಡುವಿರಿ ?

ಕಾರ್ಡಿನಲ್ ಡೇನಿಯಲೋ : ಆದರೆ ಜೀಸಸ್ ಉತ್ಸವ ಸಪ್ತಾಹದಲ್ಲಿ ಅಜಮೇಧಕ್ಕೆ ಅಪ್ಪಣೆಯಿತ್ತಿದ್ದಾನೆ.

ಶ್ರೀಲ ಪ್ರಭುಪಾದ : ಆದರೆ ಜೀಸಸ್ ಪ್ರಾಣಿವಧಾಗಾರವನ್ನು ಎಂದೂ ಇಟ್ಟಿರಲಿಲ್ಲವಲ್ಲ.

ಕಾರ್ಡಿನಲ್ ಡೇನಿಯಲೋ : (ನಗು) ಇಲ್ಲ. ಆದರೆ ಜೀಸಸ್ ಖಂಡಿತ ಮಾಂಸ ಭಕ್ಷಣ ಮಾಡಿದ್ದಾನೆ.

ಶ್ರೀಲ ಪ್ರಭುಪಾದ : ಬೇರೆ ಆಹಾರವೇ ದೊರೆಯದಾಗ ಗತಿಯಿಲ್ಲದೆ ಮನುಷ್ಯನು ಬದುಕಲು ಮಾಂಸ ಭಕ್ಷಣ ಮಾಡಬಹುದು. ಅದು ಬೇರೆ ವಿಷಯ. ಆದರೆ ನಿಮ್ಮ ನಾಲಗೆ ರುಚಿಗಾಗಿ (ಜಿಂಹ್ವಚಾಪಲ್ಯ) ನೀವು ಪ್ರಾಣಿವಧಾಗಾರಗಳನ್ನು ನಿತ್ಯಕ್ರಮವಾಗಿ ನಡೆಸಿಕೊಂಡು ಬರುತ್ತಿರುವುದು ಅತ್ಯಂತ ಪಾಪ ಕಾರ್ಯವೇ ಸರಿ. ವಧಾಗಾರಗಳನ್ನು ಇಟ್ಟುಕೊಂಡುಬರುವ ಈ ಅಮಾನುಷ ಪದ್ಧತಿಯನ್ನು ನಿಲ್ಲಿಸುವ ತನಕ, ವಾಸ್ತವಿಕವಾಗಿ ಮಾನವ ಸಮಾಜವೆಂದು ಕರೆದುಕೊಳ್ಳುವುದೇ ಸಾಧ್ಯವಿಲ್ಲ. ಕೆಲವು ಸಲ ಜೀವ ರಕ್ಷಣೆಗಾಗಿ ಪ್ರಾಣಿವಧೆ ಅವಶ್ಯವಾಗಬಹುದಾಗಿದ್ದರೂ, ಕನಿಷ್ಠ ಗೋಮಾತೆಯನ್ನಾದರೂ ಕೊಲ್ಲಕೂಡದು. ಅದು ಮಾನವ ಸಹಜ ಸಭ್ಯತೆ. ನಮ್ಮ ಕೃಷ್ಣಪ್ರಜ್ಞಾ ಆಂದೋಲನದಲ್ಲಿ ನಾವು ಯಾವ ಬಗೆಯ ಪ್ರಾಣಿ ವಧೆಗೂ ಅವಕಾಶ ಕೊಡುವುದಿಲ್ಲ. ಪತ್ರಂ, ಪುಷ್ಪಂ, ಫಲಂ ತೋಯಮ್ ಯೋ ಮೇ ಭಕ್ತ್ಯಾ ಪ್ರಯಚ್ಛತಿಃ. "ತರಕಾರಿ, ಹಣ್ಣು, ಹಾಲು ಮತ್ತು ಧಾನ್ಯಗಳನ್ನು ಭಕ್ತಿಪೂರ್ವಕವಾಗಿ ನನಗೆ ಅರ್ಪಿಸಬೇಕು" ಎಂದಿದ್ದಾನೆ ಕೃಷ್ಣ (ಭ. ಗೀ 9-26). ಕೃಷ್ಣಾರ್ಪಿತ ನೈವೇದ್ಯಶೇಷವನ್ನಷ್ಟೇ (ಪ್ರಸಾದ) ನಾವು ಸ್ವೀಕರಿಸುತ್ತೇವೆ. ವೃಕ್ಷಗಳು ನಮಗೆ ಬಗೆ ಬಗೆಯ ಹಣ್ಣುಗಳನ್ನು ನೀಡುತ್ತವೆ. ಆದರೆ ವೃಕ್ಷಗಳನ್ನು ನಾವು ಕಡಿದುಹಾಕುವುದಿಲ್ಲ. ಒಂದು ಜೀವ ಮತ್ತೊಂದು ಜೀವಕ್ಕೆ ಆಹಾರ, ನಿಜ. ಹಾಗೆಂದ ಮಾತ್ರದಿಂದ ನಿಮ್ಮ ಆಹಾರಕ್ಕಾಗಿ ನೀವು ನಿಮ್ಮ ತಾಯಿಯನ್ನು ಕೊಲ್ಲುವುದಿಲ್ಲ. ಹಸು ಮುಗ್ಧಪ್ರಾಣಿ. ಅವು ನಮಗೆ ಹಾಲುಕೊಡುತ್ತವೆ. ನೀವು ಅವುಗಳ ಹಾಲು ತೆಗೆದುಕೊಳ್ಳುತ್ತೀರಿ. ಮತ್ತೆ ಅವುಗಳನ್ನು ಕೊಲೆ ಮನೆಗಳಲ್ಲಿ ಕೊಲ್ಲುತ್ತೀರಿ. ಇದು ಪಾಪಕಾರ್ಯ.

ವಿದ್ಯಾರ್ಥಿ : ಶ್ರೀಲ ಪ್ರಭುಪಾದರೆ, ನಿಮ್ನವರ್ಗದ ಪ್ರಾಣಿಗಳಿಗೆ ಮನುಷ್ಯನಿಗೆ ಇದ್ದ ಹಾಗೆ ಆತ್ಮವಿರುವುದಿಲ್ಲ ಎಂಬ ಆಧಾರದ ಮೇಲೆ ಕ್ರಿಶ್ಚನ್ನರು ಮಾಂಸಾಹಾರ ಸೇವಿಸಲು ಅನುಮತಿ ದೊರೆತಿದೆ.

ಶ್ರೀಲ ಪ್ರಭುಪಾದ : ಅದು ಮೌಢ್ಯವೇ ಸರಿ. ದೇಹದಲ್ಲಿ ಆತ್ಮ (ಜೀವ)ವಿದೆಯೆಂಬುದನ್ನು ಮೊದಲು ನಾವು ಗುರುತಿಸಬೇಕು. ಆಮೇಲೆ ಮನುಷ್ಯನಿಗೆ ಆತ್ಮವಿದೆಯೇ ಹಸುವಿಗೆ ಇಲ್ಲವೇ ಎಂಬುದನ್ನು ಕುರಿತು ವಿಚಾರ ಮಾಡಬೇಕು. ಮನುಷ್ಯ ಮತ್ತು ಹಸುವಿನಲ್ಲಿ ಕಂಡು ಬರುವ ವೈಲಕ್ಷಣ್ಯಗಳೇನು ? ಗುಣ ಲಕ್ಷಣಗಳಲ್ಲಿ ವ್ಯತ್ಯಾಸವಿರುವುದಾದರೆ ಪ್ರಾಣಿಗಳಿಗೆ ಆತ್ಮವಿಲ್ಲವೆಂದು ಹೇಳೋಣ. ಪ್ರಾಣಿಗಳೂ ಮನುಷ್ಯನೂ ಒಂದೇ ಬಗೆಯ ಗುಣಲಕ್ಷಣಗಳನ್ನು ಹೊಂದಿರುವುವಾದರೆ, ಪ್ರಾಣಿಗಳಿಗೆ ಆತ್ಮವಿಲ್ಲವೆಂದು ಹೇಳಲು ಹೇಗೆ ಸಾಧ್ಯ. ಸಾಮಾನ್ಯ ಲಕ್ಷಣಗಳೆಂದರೆ, ಪ್ರಾಣಿಯೂ ತಿನ್ನುತ್ತದೆ, ನೀವೂ ತಿನ್ನುತ್ತೀರಿ, ಪ್ರಾಣಿಯೂ ನಿದ್ರಿಸುತ್ತದೆ,

ನೀವೂ ನಿದ್ರಿಸುತ್ತೀರಿ, ಪ್ರಾಣಿಯೂ ಸಂಭೋಗಿಸುತ್ತದೆ, ನೀವೂ ಸಂಭೋಗ ಮಾಡುತ್ತೀರಿ; ಪ್ರಾಣಿಯೂ ಸ್ವರಕ್ಷಣೆ ಮಾಡಿಕೊಳ್ಳುತ್ತದೆ, ನೀವೂ ಮಾಡಿಕೊಳ್ಳುತ್ತೀರಿ. ವ್ಯತ್ಯಾಸವೆಲ್ಲಿದೆ ?

ಕಾರ್ಡಿನಲ್ ಡೇನಿಯಲೋ : ಪ್ರಾಣಿಗಳಲ್ಲಿಯೂ ಮನುಷ್ಯನಲ್ಲಿರುವ ಪ್ರಕಾರದ ಶಾರೀರಕ ಧರ್ಮಗಳೇ ಇವೆಯೆಂಬುದನ್ನು ನಾವು ಒಪ್ಪುತ್ತೇವೆ, ಆದರೆ ಅವುಗಳಲ್ಲಿ ಆತ್ಮವೆಂಬುದಿಲ್ಲ. ಆತ್ಮ ಎಂದರೆ ಮಾನವ ಆತ್ಮವೇ ಎಂಬುದು ನಮ್ಮ ನಂಬುಗೆ.

ಶ್ರೀಲ ಪ್ರಭುಪಾದ : ಸರ್ವಯೋನಿಷು, ಎಂದರೆ "ಎಲ್ಲ ಯೋನಿಗಳ ಜೀವಿಗಳಲ್ಲಿಯೂ ಆತ್ಮವಿದೆ" ಎಂದು ಭಗವದ್ಗೀತೆ ಹೇಳುತ್ತದೆ. ದೇಹ ಒಂದು ಪೋಷಾಕು ಇದ್ದಂತೆ. ನೀವು ಕರಿಬಟ್ಟೆ ತೊಟ್ಟಿದ್ದೀರಿ. ನಾನು ಕಾಷಾಯ ವಸನ ಧರಿಸಿದ್ದೇನೆ. ವಸ್ತ್ರದ ಒಳಗಡೆ ನೀವೂ ಮನುಷ್ಯರು, ನಾನೂ ಮನುಷ್ಯ. ಹಾಗೆಯೇ, ವಿವಿಧ ಯೋನಿಗಳಲ್ಲಿರುವ ಜೀವರ ದೇಹಗಳು ವಿವಿಧ ಉಡುಪುಗಳಿದ್ದ ಹಾಗೆ. 8,400,000 ಯೋನಿಗಳು ಎಂದರೆ ಉಡುಪುಗಳಿವೆ. ಅವುಗಳ ಪ್ರತಿಯೊಂದರಲ್ಲಿಯೂ ದೇವರ ವಿಭಿನ್ನಾಂಶವಾದ ಜೀವಾತ್ಮ ಇದೆ. ಉದಾಹರಣೆಗೆ ಒಬ್ಬನಿಗೆ ಇಬ್ಬರು ಮಕ್ಕಳಿದ್ದಾರೆ, ಅವರಿಬ್ಬರೂ ಸಮಾನ ಗುಣಿಗಳಾಗಿಲ್ಲ. ಒಬ್ಬನು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿದ್ದರೆ, ಮತ್ತೊಬ್ಬನು ಸಾಮಾನ್ಯ ಕಾರ್ಮಿಕನಾಗಿದ್ದಾನೆ. ಆದರೂ ತಂದೆ ಅವರೀರ್ವರೂ ನನ್ನ ಮಕ್ಕಳೆಂದೇ ಹೇಳುತ್ತಾನೆ. ನ್ಯಾಯಾಧೀಶನಾದವನು ಮುಖ್ಯನು, ಕಾರ್ಮಿಕನಾದವನು ಅಮುಖ್ಯನು ಎಂದು ತಂದೆ ತನ್ನ ಮಕ್ಕಳಲ್ಲಿ ವ್ಯತ್ಯಾಸ ಮಾಡುವುದಿಲ್ಲ. ನ್ಯಾಯಾಧೀಶ ಮಗನು, "ಪ್ರಿಯ ತಂದೆಯೇ, ನಿನ್ನ ಕಾರ್ಮಿಕ ಮಗನು ನಿರುಪಯೋಗಿ ; ಆದುದರಿಂದ ನಾನು ಅವನನ್ನು ಕೊಂದು ತಿನ್ನುತ್ತೇನೆ" ಎಂದು ಹೇಳಿದರೆ ತಂದೆ ಇದಕ್ಕೆ ಒಪ್ಪುತ್ತಾನೆಯೇ ?

ಕಾರ್ಡಿನಲ್ ಡೇನಿಯಲೋ : ಸರ್ವಥಾ ಇಲ್ಲ. ಎಲ್ಲ ಜೀವಿಗಳೂ ದೇವರ ವಿಭಿನ್ನಾಂಶರೆಂದು ನಂಬುವುದು ನಮಗೆ ಕಷ್ಟಸಾಧ್ಯವಾಗಿದೆ. ಮಾನವ ಜೀವಿಗೂ ಪ್ರಾಣಿ ಜೀವಕ್ಕೂ ಬಹಳಷ್ಟು ವ್ಯತ್ಯಾಸವಿದೆ.

ಶ್ರೀಲ ಪ್ರಭುಪಾದ : ಪ್ರಜ್ಞಾ ಮಟ್ಟದ ಏರುಪೇರುಗಳಿಂದ ಈ ವ್ಯತ್ಯಾಸ ಕಂಡು ಬರುತ್ತದೆ. ಮಾನವ ದೇಹದಲ್ಲಿ ಪ್ರಜ್ಞೆ ಉದ್ಬುದ್ಧವಾಗಿರುತ್ತದೆ. ವೃಕ್ಷಕ್ಕೂ ಆತ್ಮವಿದೆ, ಆದರೆ ಅದು ಸಾಕಷ್ಟು ಉದ್ಬುದ್ಧವಾಗಿಲ್ಲ. ನೀವು ಮರವನ್ನು ಕತ್ತರಿಸಹೋದರೆ ಅದು ಪ್ರತಿಭಟಿಸುವುದಿಲ್ಲವೆಂದು ತೋರುತ್ತದೆ. ಆದರೆ ವಸ್ತುತಃ ಅದು ಪ್ರತಿಭಟಿಸುತ್ತದೆ. ಪ್ರತಿಭಟನೆ ಕಾಣದಷ್ಟು ಸೂಕ್ಷ್ಮವಾಗಿರುತ್ತದೆ. ಮರಗಳನ್ನು ಕಡಿದಾಗ ಅವೂ ಕೂಡ ದುಃಖ ಅನುಭವಿಸುತ್ತವೆ ಎಂಬುದನ್ನು ತೋರಿಸುವ ಯಂತ್ರಸಾಧನವೊಂದನ್ನು ಜಗದೀಶಚಂದ್ರಬೋಸ್ ಎಂಬ ವಿಜ್ಞಾನಿಯು ಕಂಡು ಹಿಡಿದಿದ್ದಾರೆ. ಒಬ್ಬನು ಪ್ರಾಣಿಯನ್ನು ಕೊಲ್ಲಲು ಹೋದಾಗ ಅದು ಪ್ರತಿಭಟಿಸುತ್ತದೆ ಎಂಬುದನ್ನು ನಾವು ಪ್ರತ್ಯಕ್ಷ ಕಾಣಬಹುದು. ಅದು ಬಹಳಷ್ಟು ಕೂಗಿಕೊಳ್ಳುತ್ತದೆ, ಗೋಗರೆಯುತ್ತದೆ. ಆದುದರಿಂದ ಇದೆಲ್ಲ ಪ್ರಜ್ಞಾಭಿವೃದ್ಧಿಯ ಪ್ರಶ್ನೆಯಾಗಿದೆ, ಎಲ್ಲ ಜೀವಿಗಳಲ್ಲಿಯೂ ಆತ್ಮವಿದೆಯೆಂಬುದು ಮಾತ್ರ ನಿಶ್ಚಿತ.

ಕಾರ್ಡಿನಲ್ ಡೇನಿಯಲೋ : ಆಧ್ಯಾತ್ಮಿಕವಾಗಿ ಮಾನವ ಜೀವವು ಪವಿತ್ರವಾದುದು. ಮನುಷ್ಯರು ಪ್ರಾಣಿಗಳಿಗಿಂತ ಉನ್ನತ ಮಟ್ಟದಲ್ಲಿ ವಿಚಾರಪರರಾಗಿರುತ್ತಾರೆ.

ಶ್ರೀಲಪ್ರಭುಪಾದ : ಆ ಎತ್ತರದ ವೇದಿಕೆ ಎಂದರೇನು ? ಪ್ರಾಣಿಯೂ ತನ್ನ ದೇಹಪೋಷಣೆಗಾಗಿ ತಿನ್ನುತ್ತದೆ. ನೀವು ನಿಮ್ಮ ದೇಹಪೋಷಣೆಗಾಗಿ ತಿನ್ನುತ್ತೀರಿ. ಹಸು ಹೊಲ ಗದ್ದೆಗಳಲ್ಲಿ ಹುಲ್ಲುಮೇಯುತ್ತದೆ, ಮಾನವನಾದರೋ ಆಧುನಿಕ ಯಂತ್ರ ಸಮೃದ್ಧವಾದ ದೊಡ್ಡ ದೊಡ್ಡ ವಧಾಗಾರಗಳಿಂದ ಮಾಂಸ ತಂದು ತಿನ್ನುತ್ತಾನೆ. ನಿಮ್ಮದೋ ದೊಡ್ಡ ದೊಡ್ಡ ಯಂತ್ರಗಳು ಮತ್ತು ಭಯಾವಹ ದೃಶ್ಯ, ಪ್ರಾಣಿಯೋ ಸರಳವಾಗಿ ಹುಲ್ಲು ಮೇಯುತ್ತದೆ. ನೀವು ಹೀಗೆ ಬಹಳ ಮುಂದುವರಿದಿದ್ದೀರಿ, ಆದುದರಿಂದ ನಿಮ್ಮ ದೇಹದಲ್ಲಿ ಆತ್ಮವಿದೆ, ಸರಳ ವಾದ ಪ್ರಾಣಿದೇಹದಲ್ಲಿ ಆತ್ಮವಿಲ್ಲ ಎಂಬುದು ಸರಿಯಾದೀತೇ ? ಅದು ಯುಕ್ತಿ ಸಮ್ಮತವಲ್ಲ. ಪ್ರಾಣಿಗಳಲ್ಲಿಯೂ ಮನುಷ್ಯರಲ್ಲಿಯೂ ಮೂಲ ಗುಣಧರ್ಮಗಳು ಸಮಾನವಾಗಿವೆ ಎಂಬುದನ್ನು ನಾವು ಕಾಣಬಹುದಾಗಿದೆ.

ಕಾರ್ಡಿನಲ್ ಡೇನಿಯಲೋ : ಆದರೆ ಈ ಜೀವಿತದ ಅರ್ಥವನ್ನರಿಯಲು ಮಾನವನಲ್ಲಿ ಮಾತ್ರ ನಾವು ಆಧಿಭೌತಿಕ ಜಿಜ್ಞಾಸೆಯನ್ನು ಕಾಣುತ್ತೇವಲ್ಲ ? 1498]

ಶ್ರೀಲ ಪ್ರಭುಪಾದ : ಹೌದು. ಹಾಗಾದರೆ ಪ್ರಾಣಿದೇಹದಲ್ಲಿ ಆತ್ಮವಿಲ್ಲ ಎಂದು ನೀವೇಕೆ ನಂಬುತ್ತೀರಿ ಎಂಬ ಬಗ್ಗೆ ನಿಮ್ಮಲ್ಲಿ ಆಧಿಭೌತಿಕ ಜಿಜ್ಞಾಸೆ ನಡೆಯಲಿ–ಅದೇ ಅಧಿಭೌತ. ನೀವು ಆಧಿಭೌತಿಕವಾಗಿ ವಿಚಾರ ಮಾಡುವುದಾದರೆ, ಒಳ್ಳೆಯದೇ. ನೀವು ಪ್ರಾಣಿ ಮಟ್ಟದಲ್ಲಿ ವಿಚಾರ ಮಾಡುದಾದರೆ ನಿಮ್ಮ ಆಧಿಭೌತಿಕ ಅಧ್ಯಯನ ಅಪ್ರಯೋಜಕವಲ್ಲವೇ ? "ಆಧಿಭೌತಿಕ" ಎಂದರೆ "ಭೌತಕ್ಕಿಂತ ಮೇಲೆ" ಎಂದರೆ "ಆಧ್ಯಾತ್ಮಿಕ" ಎಂದ ಹಾಗೆಯೇ. ಸರ್ವಯೋನಿಷು ಕೌಂತೇಯಃ ಎಂದರೆ "ಸರ್ವಯೋನಿಗಳ ಜೀವಿಗಳಲ್ಲಿಯೂ ಜೀವಾತ್ಮವಿದೆ" ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಇದೇ ಅಧಿಭೌತ ಜ್ಞಾನ. ಈಗ ನೀವು ಅಧಿಭೌತ ಯಾವುದೆಂಬು ದನ್ನು ಕುರಿತು ಕೃಷ್ಣನ ಮಾತುಗಳನ್ನಾದರೂ ಒಪ್ಪಿಕೊಳ್ಳಿ ಅಥವಾ ನಿಕೃಷ್ಟ ಮೂರ್ಖನೊಬ್ಬನ ಮಾತನ್ನಾದರೂ ಒಪ್ಪಿಕೊಳ್ಳಿ. ನೀವು ಯಾವುದನ್ನು ಒಪ್ಪುವಿರಿ ?

ಕಾರ್ಡಿನಲ್ ಡೇನಿಯಲೋ : ಹಾಗಿದ್ದರೆ ದೇವರು ಇತರ ಪ್ರಾಣಿಗಳನ್ನು ತಿನ್ನುವ ಪ್ರಾಣಿಗಳನ್ನು ಹುಟ್ಟಿಸಿದ್ದೇಕೆ ? ಸೃಷ್ಟಿ ಕ್ರಮದಲ್ಲಿ ಏನೋ ದೋಷವಿದೆ ಎಂದು ಕಾಣುತ್ತದೆ.

ಶ್ರೀಲ ಪ್ರಭುಪಾದ : ಅದು ದೋಷವಲ್ಲ. ದೇವರು ಬಹು ದಯಾಮಯ. ನೀವು ಪ್ರಾಣಿಗಳನ್ನು ತಿನ್ನ ಬಯಸಿದರೆ, ನಿಮಗೆ ಸರ್ವಾನುಕೂಲಗಳನ್ನೂ ಒದಗಿಕೊಡುತ್ತಾನೆ. ನೀವು ಧಾರಾಳವಾಗಿ ಮಾಂಸ ತಿನ್ನಲು ಅನುಕೂಲವಾಗುವಂತೆ ದೇವರು ಮುಂದಿನ ಜನ್ಮದಲ್ಲಿ ನಿಮಗೆ ಹುಲಿ ದೇಹ ನೀಡುತ್ತಾನೆ. "ನೀವೇಕೆ ಕೊಲೆಮನೆಗಳನ್ನು ಹೊಂದಿದ್ದೀರಿ. ನಿಮಗೆ ಕೋರೆದಾಡೆ ಗಳನ್ನೂ ಉಗುರು ಪಂಜರಗಳನ್ನೂ ಕೊಡುತ್ತಾನೆ. ಆಗ ನೀವು ಮಾಂಸಭಕ್ಷಣ ಮಾಡಿ" ಎನ್ನುತ್ತಾನೆ ದೇವರು. ಅಂತೂ ಮಾಂಸ ಭಕ್ಷಕರು ಈ ಶಿಕ್ಷೆಗೆ ಕಾಯುತ್ತಿದ್ದಾರೆ. ಮಾಂಸ ಭಕ್ಷಕರು–ಇನ್ನೂ ಹೆಚ್ಚಿನ ಅನುಕೂಲಗಳನ್ನು ಹೊಂದಲು–ಮುಂದಿನ ಜನ್ಮದಲ್ಲಿ ಹುಲಿ, ತೋಳ, ಬೆಕ್ಕು, ನಾಯಿಗಳಾಗಿ ಹುಟ್ಟುವರು, ಅಷ್ಟೆ.






# ಆಧುನಿಕ ಯುಗದಲ್ಲಿ ಯೋಗಾಭ್ಯಾಸ

## ಪರಮ ಪ್ರಜ್ಞೆ

**ಇಂದಿನ ಪಾಶ್ಚಾತ್ಯ ಯೋಗ ಉತ್ಸಾಹಿಗಳ ಗುರಿಗಳು ಪ್ರಾಚೀನ ಭಾರತೀಯ ಯೋಗಿಗಳ ಯೋಗಿಕ ಸಾಧನೆಗಳ ಮುಂದೆ ಕುಬ್ಜವೆನಿಸುತ್ತದೆ. ಆ ಪ್ರಾಚೀನರು ಐತಿಹಾಸಿಕ ದಾಖಲೆಗಳ ಪ್ರಕಾರ ಅಣುವಿಗಿಂತ ಅಣು, ಗಾಳಿಗಿಂತ ಹಗುರ ಆಗಬಲ್ಲವರಾಗಿದ್ದರು ಮತ್ತು ಅವರು ಯಾವ ಸಾಧನ ಸಹಾಯವಿಲ್ಲದೆ ವಿಶ್ವದಲ್ಲಿ ಎಲ್ಲಿ ಬೇಕಾದರೂ ಸಂಚರಿಸಬಲ್ಲವರಾಗಿದ್ದರು. ಹೀಗಿದ್ದರೂ ಈ ಮಹತ್ಸಾಧನೆಗಳೂ ಕೂಡ "ಒಂದು ಹೆಜ್ಜೆ ಮುಂದೆ ಅಷ್ಟೆ" ಎನ್ನುತ್ತಾರೆ ಶ್ರೀಲ ಪ್ರಭುಪಾದರು. ಇಲ್ಲಿಯೇ ಇಹ ಜೀವನದಲ್ಲಿಯೇ ಮಾನವೀಯ ಪ್ರಜ್ಞೆಯ ಶಿಖರವನ್ನು (ತುದಿಯನ್ನು) ಎಂದರೆ ಪರಮ ಪ್ರಜ್ಞೆಯ ನಿಜ ಶೃಂಗವನ್ನು ಹೇಗೆ ಹೊಂದಬೇಕು ಎಂಬುದನ್ನು ಶ್ರೀಲ ಪ್ರಭುಪಾದರು 1967ರಲ್ಲಿ ನೀಡಿದ ತಮ್ಮ ಈ ಮುಂದಿನ ಉಪನ್ಯಾಸದಲ್ಲಿ ವಿವರಿಸುತ್ತಾರೆ.**

ಕೃಷ್ಣಪ್ರಜ್ಞೆ ಎಂಬುದು ಪರಿಶ್ರಮ ಹೊಂದಿದ ಭಕ್ತಿಯೋಗಿಗಳು ಆಚರಿಸುವ ಅತ್ಯುನ್ನತ ಯೋಗವಾಗಿದೆ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ ಮತ್ತು ಪತಂಜಲಿಗಳು ತಮ್ಮ ಯೋಗ ಸೂತ್ರದಲ್ಲಿ ಹೇಳಿದ ಯೋಗಾಭ್ಯಾಸದ ಉತ್ಕೃಷ್ಟ ಯೋಗ ಪದ್ಧತಿಯು ಈಗ ಪಾಶ್ಚಾತ್ಯ ದೇಶಗಳಲ್ಲಿ ಸಾಮಾನ್ಯವಾಗಿ ಪ್ರಚಲಿತವಿರುವ ಹಠಯೋಗದ ಅಭ್ಯಾಸಕ್ಕಿಂತ ಭಿನ್ನವಾದುದಾಗಿದೆ.

ನಿಜವಾದ ಯೋಗಾಭ್ಯಾಸವೆಂದರೆ ಇಂದ್ರಿಯ ನಿಗ್ರಹ ಮತ್ತು ಹಾಗೆ ನಿಗ್ರಹವು ಸಾಧಿಸಿದ ಬಳಿಕ ಪರಮ ದೇವೋತ್ತಮ ಪುರುಷನಾದ ಶ್ರೀ ಕೃಷ್ಣನ ನಾರಾಯಣ ರೂಪದಲ್ಲಿ ಚಿತ್ತವನ್ನು ನೆಲೆನಿಲ್ಲಿಸುವುದು. ಶ್ರೀ ಕೃಷ್ಣನೇ ದೇವೋತ್ತಮನಾದ ಮೂಲ ಪರಮ ಪುರುಷನು, ಮತ್ತು — ಚತುರ್ಭುಜಗಳು, ಶಂಖ ಚಕ್ರ ಗದಾ ಪದ್ಮ ವಿಭೂಷಿತವಾದ — ವಿಷ್ಣುವಿನ ಇತರ ಎಲ್ಲ ರೂಪಗಳು ಕೃಷ್ಣನ ಪೂರ್ಣ ವಿಸ್ತರಣಗಳು.

ನಾವು ಭಗವಂತನ ರೂಪವನ್ನು ಧ್ಯಾನಿಸಬೇಕೆಂದು ಭಗವದ್ಗೀತೆಯಲ್ಲಿ ಹೇಳಿದೆ.

ಚಿತ್ತೈಕಾಗ್ರತೆಯನ್ನು ಸಾಧಿಸಲು ಪವಿತ್ರ ವಾತಾವರಣದಲ್ಲಿ ಪವಿತ್ರ ಏಕಾಂತ ಸ್ಥಳದಲ್ಲಿ ಕುಳಿತುಕೊಳ್ಳಬೇಕಾಗುವುದು, ಯೋಗಿಯು ಬ್ರಹ್ಮಚರ್ಯ ನಿಯಮವನ್ನು ಪಾಲಿಸಬೇಕಾಗುವುದು. ಎಂದರೆ ಆತ್ಮ ಸಂಯಮ ಮತ್ತು ಇಂದ್ರಿಯ ನಿಗ್ರಹವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಜನ ಸಾಂದ್ರತೆಯ ದುಂದುಗಾರಿಕೆಯ, ಹಾಗೂ ಅನಿರ್ಬಂಧ ಕಾಮಾಸಕ್ತಿಯ ಮತ್ತು ಜಿಹ್ವಾ ಚಾಪಲ್ಯದ ನಗರಗಳಲ್ಲಿದ್ದು ಯೋಗ ಸಾಧನೆ ಸಾಧ್ಯವಿಲ್ಲ.

ಇಂದ್ರಿಯ ನಿಗ್ರಹವೇ ಯೋಗ ಸಾಧನೆಯೆಂದು ನಾವು ಈಗಾಗಲೇ ಹೇಳಿದ್ದೇವೆ. ಇಂದ್ರಿಯ ನಿಗ್ರಹದ ಪ್ರಾರಂಭ ನಾಲಗೆ ಹಿಡಿತದಿಂದಲೇ ಆಗಬೇಕು. ಎಲ್ಲ ಬಗೆಯ ನಿಷಿದ್ಧ ಆಹಾರ ಪಾನೀಯಗಳನ್ನು ಸವಿಯಲು ನೀವು ನಿಮ್ಮ ನಾಲಗೆಯನ್ನು ಹರಿಯ ಬಿಡಕೂಡದು ಮತ್ತು ಜೊತೆ ಜೊತೆಗೆ ನಿಮ್ಮ ಯೋಗ ಸಾಧನೆಯಲ್ಲಿ ಪ್ರಗತಿ ಸಾಧಿಸಬೇಕು. ಇತ್ತೀಚೆಗೆ ಅನೇಕ ಅಲೆಮಾರಿ ಅನಧಿಕೃತ ತೋರಿಕೆಯ ಯೋಗಿಗಳು ಪಾಶ್ಚಾತ್ಯ ದೇಶಗಳಿಗೆ ಬಂದು ಯೋಗಾಭ್ಯಾಸದಲ್ಲಿ ಆಸಕ್ತಿ ಹೊಂದಿರುವ ಜನರನ್ನು ಶೋಷಿಸುತ್ತಿರುವುದು ಬಹಳ ವಿಷಾದದ ಸಂಗತಿಯಾಗಿದೆ. ಇಂಥ ಅನಧಿಕೃತ ಯೋಗಿಗಳು ಮನುಷ್ಯನು ಮದ್ಯಪಾನಾಸಕ್ತನಾಗಿದ್ದೂ ಧ್ಯಾನಮಗ್ನನಾಗಿರಬಹುದು ಎಂದು ಬಹಿರಂಗವಾಗಿ ಹೇಳುವ ಧೈರ್ಯ ಮಾಡುತ್ತಿದ್ದಾರೆ.

ಐದು ಸಾವಿರ ವರ್ಷಗಳ ಹಿಂದೆ ಭಗವದ್ಗೀತೆಯ ಒಂದು ಸಂಭಾಷಣೆಯಲ್ಲಿ ಶ್ರೀಕೃಷ್ಣನು ತನ್ನ ಶಿಷ್ಯನಾದ ಅರ್ಜುನನಿಗೆ ಯೋಗಾಭ್ಯಾಸವನ್ನು ಮಾಡುವಂತೆ ಹೇಳಿದನು. ಆದರೆ ಯೋಗದ ಕಠೋರ ನೀತಿ ನಿಯಮಗಳನ್ನು ಪಾಲಿಸಲು ತಾನು ಶಕ್ತನಲ್ಲ ಎಂದು ಅರ್ಜುನನು ನಿಸ್ಸಂಕೋಚವಾಗಿ ಹೇಳಿದನು. ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿ ವ್ಯಕ್ತಿಯು ವ್ಯವಹಾರಜ್ಞನಾಗಿರಬೇಕು. ಯೋಗದ ಹೆಸರಿನಲ್ಲಿ ಕೇವಲ ಅಂಗ ಸಾಧನೆಗಳನ್ನು ಮಾಡುವಲ್ಲಿ ಅಮೂಲ್ಯ ಸಮಯವನ್ನು ಹಾಳು ಮಾಡಬಾರದು. ನಿಜವಾದ ಯೋಗವೆಂದರೆ ಮಾನವನು ತನ್ನ ಹೃದಯ ಮಂದಿರದಲ್ಲಿ ಚತುರ್ಭುಜನಾದ ಪರಮಾತ್ಮನನ್ನು ಕಂಡುಕೊಳ್ಳಬೇಕು ಮತ್ತು ನಿರಂತರ ಅವನ ಧ್ಯಾನಮಗ್ನನಾಗಬೇಕು ಈ ನಿರಂತರ ಧ್ಯಾನವೇ ಸಮಾಧಿ ಎನಿಸುತ್ತದೆ. ಆದರೆ ಯಾವುದೇ ಶೂನ್ಯತೆಯ ಅಥವಾ ನಿರಾಕಾರ ವಸ್ತುವಿನ ಧ್ಯಾನ ಮಾಡ ಬಯಸಿದರೆ, ಯೋಗಾಭ್ಯಾಸದಿಂದ ಅದನ್ನು ಸಾಧಿಸಲು ಬಹು ದೀರ್ಘಕಾಲ ಹಿಡಿಯುತ್ತದೆ. ನಾವು ನಮ್ಮ ಮನಸ್ಸನ್ನು ಶೂನ್ಯದಲ್ಲಿ ಅಥವಾ ನಿರಾಕಾರದಲ್ಲಿ ಕೇಂದ್ರೀಕೃತಗೊಳಿಸುವುದು ಸಾಧ್ಯವಾಗುವುದಿಲ್ಲ. ಪ್ರತಿಯೊಬ್ಬರು ಹೃದಯಸ್ಥಿತನಾದ ಚತುರ್ಭುಜ ನಾರಾಯಣನಲ್ಲಿ ಚಿತ್ತವನ್ನು ನೆಲೆ ನಿಲ್ಲಿಸುವುದೇ ನಿಜವಾದ ಯೋಗ.

ಧ್ಯಾನಯೋಗದಿಂದ ನಮಗೆ ತಿಳಿಯದೆಯೂ, ಸದಾ ನಮ್ಮ ಹೃದಯದಲ್ಲಿ ದೇವರು ಸನ್ನಿಹಿತನಾಗಿರುತ್ತಾನೆಂದು ಅರಿತುಕೊಳ್ಳಬಹುದೆಂದು ಕೆಲವು ಸಲ ಹೇಳಲಾಗುತ್ತದೆ. ದೇವರು ಪ್ರತಿಯೊಬ್ಬರ ಹೃದಯದಲ್ಲಿ ಸ್ಥಿತನಾಗಿದ್ದಾನೆ ನಿಜ. ಭಗವಂತನು ಕೇವಲ ಮಾನವರ ಹೃದಯದಲ್ಲಷ್ಟೇ ಸ್ಥಿತನಾಗಿಲ್ಲ. ಅವನು ಬೆಕ್ಕು ನಾಯಿಗಳ ಹೃದಯದಲ್ಲಿಯೂ ಸ್ಥಿತನಾಗಿದ್ದಾನೆ. ಪರಮ ನಿಯಾಮಕನಾದ ಈಶ್ವರನು ಸರ್ವರ ಹೃದಯಸ್ಥಿತನೆಂದು ಸಾರಿ ಭಗವದ್ಗೀತೆಯು ಪ್ರಮಾಣೀಕರಿಸಿದೆ. ಅವನು ಎಲ್ಲರ ಹೃದಯದಲ್ಲಷ್ಟೇ ಅಲ್ಲ. ಪ್ರತಿಯೊಂದು ಕಣದಲ್ಲಿಯೂ ಇದ್ದಾನೆ. ಯಾವ ಸ್ಥಳವೂ ತೆರವಾಗಿಲ್ಲ. ಭಗವಂತನ ಸಾನಿಧ್ಯವಿಲ್ಲದ ಯಾವ ಸ್ಥಳವೂ ಇಲ್ಲ.

ಸರ್ವತ್ರದಲ್ಲಿ ಸನ್ನಿಹಿತನಾಗಿರುವ ಭಗವಂತನ ಲಕ್ಷಣವನ್ನು ಪರಮಾತ್ಮ ಎಂದು ಕರೆಯುತ್ತಾರೆ. ಆತ್ಮ ಎಂದರೆ ಜೀವಾತ್ಮ, ಪರಮಾತ್ಮ ಎಂದರೆ ವ್ಯಕ್ತಿಗತ ಪರಮ-ಆತ್ಮ. ಈ ಆತ್ಮ ಪರಮಾತ್ಮ ಉಭಯರೂ ವ್ಯಕ್ತಿ ಸ್ವರೂಪರು. ಅವರೀರ್ವರಲ್ಲಿ ವ್ಯತ್ಯಾಸವೆಂದರೆ, ಆತ್ಮ ಎಂಬುದು ಏಕ ದೇಶ ನಿವಿಷ್ಠ ಮಾತ್ರ, ಪರಮಾತ್ಮನು ಸರ್ವತ್ರಗತನು.

ಈ ಸನ್ನಿವೇಶಕ್ಕೆ ಸೂರ್ಯನ ಉದಾಹರಣೆ ಸೊಗಸಾದದು. ಒಬ್ಬ ವ್ಯಕ್ತಿಗತ ಪುರುಷನು ಒಂದು ಸ್ಥಳದಲ್ಲಿ ಇರಬಹುದು. ಆದರೆ ಸೂರ್ಯನು ಸ್ವತಃ ಒಂದು ನಿರ್ದಿಷ್ಟ ನಿಕಾಯನಾಗಿದ್ದರೂ ಅವನು ಪ್ರತಿಯೊಬ್ಬ ವ್ಯಕ್ತಿಯ ತಲೆಯ ಮೇಲೆ ಇರುವಂತೆ ಕಾಣಿಸಿಕೊಳ್ಳುತ್ತಾನೆ. ಭಗವದ್ಗೀತೆಯಲ್ಲಿ ಈ ಅಂಶವನ್ನು ಸೊಗಸಾಗಿ ವಿವರಿಸಲಾಗಿದೆ. ಭಗವಂತನೂ ಸೇರಿ ಎಲ್ಲ ಜೀವಾತ್ಮರಲ್ಲಿ ಗುಣ ಸಮಾನತೆ ಕಂಡು ಬಂದರೂ ವ್ಯಕ್ತಿಗತನಾದ ಪರಮಾತ್ಮನಲ್ಲಿ ಈ ಗುಣಗಳು ಅಪಾರ ಪೂರ್ಣ ಪ್ರಮಾಣದಲ್ಲಿರುತ್ತವೆ. ಭಗವಂತನು ಎಂದರೆ ಪರಮಾತ್ಮನು ತನ್ನನ್ನು ಲಕ್ಷೋಪಲಕ್ಷ ರೂಪಗಳಲ್ಲಿ ವಿಸ್ತರಿಸಿಕೊಳ್ಳುತ್ತಾನೆ. ಜೀವಾತ್ಮನಿಗಿದು ಸಾಧ್ಯವಿಲ್ಲ.

ಪ್ರತಿಯೊಬ್ಬರ ಹೃದಯಸ್ಥಿತನಾದ ಪರಮಾತ್ಮನು ಪ್ರತಿಯೊಬ್ಬರ ಹಿಂದಿನ, ಇಂದಿನ ಮತ್ತು ಮುಂದಿನ ಸಕಲ ವ್ಯಾಪಾರಗಳಿಗೂ ಸಾಕ್ಷಿಯಾಗಿರುತ್ತಾನೆ. ಪರಮಾತ್ಮನು ಜೀವಾತ್ಮನೊಂದಿಗೆ ಸಖನೂ, ಸಾಕ್ಷಿಯೂ ಆಗಿ ಕುಳಿತಿರುತ್ತಾನೆಂದು ಉಪನಿಷತ್ತಿನಲ್ಲಿ ಹೇಳಲಾಗಿದೆ. ಸಖನಾಗಿ ಜೀವಾತ್ಮನನ್ನು ಮತ್ತೆ ಪರಂಧಾಮಕ್ಕೆ ಕರೆದೊಯ್ಯಲು ಪರಮಾತ್ಮನು ಸದಾ ಕಾತುರನಾಗಿರುತ್ತಾನೆ. ಸಾಕ್ಷಿಯಾಗಿ, ಜೀವಾತ್ಮನ ಎಲ್ಲ ಕಾರ್ಯಗಳಿಗೆ ಸತ್ಫಲಗಳು ದೊರೆಯುವಂತೆ ಎಲ್ಲ ಬಗೆಯ ಅನುಗ್ರಹಗಳನ್ನು ಮಾಡುತ್ತಾನೆ. ಜೀವಾತ್ಮನು ಬಯಸುವ ಏನೆಲ್ಲವನ್ನು ಹೊಂದುವಂತೆ ಪರಮಾತ್ಮನು ಸಕಲ ಸೌಲಭ್ಯಗಳನ್ನು ಒದಗಿಸುತ್ತಾನೆ. ಆದರೆ ಜೀವಾತ್ಮನು ನಿತ್ಯ ಶಾಶ್ವತ ಜ್ಞಾನಾನಂದ ಪೂರ್ಣ ಜೀವನವನ್ನು ಪಡೆಯಲು ಇತರ ಎಲ್ಲ ಪ್ರಸಕ್ತಿಗಳನ್ನು ಬಿಟ್ಟು ಕೇವಲ ತನ್ನಲ್ಲಿ ಶರಣಾಗತನಾಗಬೇಕು ಎಂದು ಪರಮಾತ್ಮನು ತನ್ನ ಸಖನಾದ ಜೀವಾತ್ಮನಿಗೆ ಉಪದೇಶ ನೀಡಿದ್ದಾನೆ. ಇದೇ ಭಗವದ್ಗೀತೆಯ ಕೊನೆಯ ಉಪದೇಶ. ಭಗವದ್ಗೀತೆಯು ಅತ್ಯಂತ ಪ್ರಮಾಣವಾದ ಮತ್ತು ಎಲ್ಲ ಯೋಗ ಪದ್ಧತಿಗಳನ್ನು ಕುರಿತ ಅತಿ ಪ್ರಸಾರ ಹೊಂದಿದ ಗ್ರಂಥ.

ಮೇಲೆ ಹೇಳಿದಂತೆ ಭಗವದ್ಗೀತೆಯ ಕೊನೆಯ ಮಾತು ಯೋಗ ಪದ್ಧತಿಯ ಪರಿಪೂರ್ಣತೆಯನ್ನು ಕುರಿತ ಕೊನೆಯ ಮಾತಾಗಿದೆ. ಸದಾ ಕೃಷ್ಣ ಪ್ರಜ್ಞೆಯಲ್ಲಿ ತಲ್ಲೀನನಾದ ವ್ಯಕ್ತಿಯು ಪರಮ ಯೋಗಿಯಾಗಿರುತ್ತಾನೆ ಎಂದೂ ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿದೆ. ಹಾಗಾದರೆ ಈ ಕೃಷ್ಣ ಪ್ರಜ್ಞೆ ಎಂದರೇನು ?

ವ್ಯಕ್ತಿಗತ ಜೀವಾತ್ಮವು ಹೇಗೆ ತನ್ನ ಇಡೀ ದೇಹದಲ್ಲಿ ಪ್ರಜ್ಞಾತ್ಮಕವಾಗಿರುವುದೋ ಹಾಗೆಯೇ ಪರಮಾತ್ಮನು ತನ್ನ ಪರಮ ಪ್ರಜ್ಞೆಯಿಂದ ಇಡೀ ಸೃಷ್ಟಿಯಲ್ಲಿ ಸನ್ನಿಹಿತನಾಗಿರುತ್ತಾನೆ. ಜೀವಾತ್ಮನು ಪರಿಮಿತ ಪ್ರಜ್ಞೆಯವನಾಗಿರುವುದರಿಂದ ಪರಮ ಪ್ರಜ್ಞೆಯನ್ನು ಅನುಕರಿಸಲಾರನು. ನನ್ನ ದೇಹದಲ್ಲಿ ಏನಾಗುತ್ತಿದೆಯೆಂಬುದನ್ನು ನಾನು ಅರಿಯಬಲ್ಲೆ. ಆದರೆ

ಮತ್ತೊಬ್ಬರ ದೇಹದಲ್ಲಿ ಏನಾಗುತ್ತಿದೆಯೆಂಬುದು ನನಗೆ ತಿಳಿಯುವುದಿಲ್ಲ. ನನ್ನ ಪ್ರಜ್ಞೆಯಿಂದ ನನ್ನ ಇಡೀ ದೇಹವನ್ನು ವ್ಯಾಪಿಸಿಕೊಂಡಿದ್ದೇನೆ. ಆದರೆ ಈ ನನ್ನ ಪ್ರಜ್ಞೆಯ ಮೂಲಕ ಮತ್ತೊಬ್ಬರ ದೇಹದಲ್ಲಿ ನಾನು ಸನ್ನಿಹಿತನಾಗಲಾರೆ. ಆದರೆ ಪರಮಾತ್ಮನು ಸರ್ವರಲ್ಲಿಯೂ, ಸರ್ವತ್ರದಲ್ಲಿಯೂ ಸ್ಥಿತನಾಗಿದ್ದು ಎಲ್ಲ ಅಸ್ತಿತ್ವವನ್ನು ಬಲ್ಲವನಾಗಿರುತ್ತಾನೆ. ಜೀವ ಪರಮಾತ್ಮರು ಒಂದೆಂಬ ತತ್ವವನ್ನು ಒಪ್ಪಿಕೊಳ್ಳಲಾಗುವುದಿಲ್ಲ. ಕಾರಣವೆಂದರೆ ಜೀವಾತ್ಮನ ಪ್ರಜ್ಞೆಯು ಪರಮಪ್ರಜ್ಞೆಯಲ್ಲಿ ಕೆಲಸ ಮಾಡಲಾರದು. ಜೀವಾತ್ಮನ ಪ್ರಜ್ಞೆಯು ಪರಮ ಪ್ರಜ್ಞೆಯನ್ನು ಅನುಸರಿಸಿದಾಗ ಪರಮ ಪ್ರಜ್ಞೆಯು ಸಿದ್ಧಿಸುವುದು ; ಈ ಅನುಸರಣೆಯ ಕ್ರಮವನ್ನೇ ಶರಣಾಗತಿ ಅಥವಾ ಕೃಷ್ಣ ಪ್ರಜ್ಞೆಯೆಂದು ಕರೆಯಲಾಗುತ್ತದೆ.

ಅರ್ಜುನನು ಪ್ರಾರಂಭದಲ್ಲಿ ತನ್ನ ಬಂಧು ಬಾಂಧವರೊಂದಿಗೆ ಯುದ್ಧ ಮಾಡಲು ಸಿದ್ಧನಾಗಲಿಲ್ಲ ಎಂಬುದು ಭಗವದ್ಗೀತೆಯ ಉಪದೇಶಗಳಿಂದ ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಆದರೆ ಭಗವದ್ಗೀತೆಯನ್ನು ಕೇಳಿದ ತರುವಾಯ ಅರ್ಜುನನ ಪ್ರಜ್ಞೆಯು ಕೃಷ್ಣನ ಪರಮ ಪ್ರಜ್ಞೆಯನ್ನು ಅನುಸರಿಸಿಕೊಂಡೇ ನಡೆಯಿತು. ಆಗ ಅರ್ಜುನನ ಪ್ರಜ್ಞೆಯು ಕೃಷ್ಣ ಪ್ರಜ್ಞೆಯೇ ಆಗಿತ್ತು. ಸಂಪೂರ್ಣ ಕೃಷ್ಣ ಪ್ರಜ್ಞೆಯಲ್ಲಿರುವ ವ್ಯಕ್ತಿಯು ಕೃಷ್ಣನ ಆದೇಶದಂತೆ ವರ್ತಿಸುತ್ತಾನೆ, ಅಂತೆಯೇ ಅರ್ಜುನನು ಕುರುಕ್ಷೇತ್ರ ರಣಾಂಗಣದಲ್ಲಿ ಯುದ್ಧಕ್ಕೆ ಸಿದ್ಧನಾದನು.

ಕೃಷ್ಣ ಪ್ರಜ್ಞೆಯ ಪ್ರಾರಂಭದೆಸೆಯಲ್ಲಿ ಭಗವಂತನ ಆದೇಶಗಳು ಗುರುವಿನ ಶುದ್ಧಾಂತಃಕರಣದ ಮೂಲಕ ದೊರೆಯುತ್ತವೆ. ಜೀವಾತ್ಮನು ಸಾಕಷ್ಟು ಪರಿಶ್ರಮ ಹೊಂದಿ ನಿಜಗುರುವಿನ ಆದೇಶಾನುಸಾರ ವಿನೀತ ಭಾವದಿಂದ ಮತ್ತು ಕೃಷ್ಣ ಪ್ರೀತಿಯಿಂದ ವರ್ತಿಸತೊಡಗಿದಾಗ, ಅನುಸರಣ ಪ್ರಕ್ರಿಯೆಯು ಹೆಚ್ಚು ದೃಢಗೊಳ್ಳುತ್ತದೆ ಮತ್ತು ಸಮರ್ಪಕವಾಗುತ್ತದೆ. ಈ ಮಟ್ಟದಲ್ಲಿ ಕೃಷ್ಣನು ಒಳಗಿನಿಂದಲೇ ಆದೇಶ ನೀಡುತ್ತಾನೆ. ಹೊರಗಿನಿಂದ ಕೃಷ್ಣನ ನಿಜ ದೂತನಾದ ಗುರುವು ಭಕ್ತನಿಗೆ ಸಹಾಯ ಮಾಡುತ್ತಾನೆ. ಪ್ರತಿಯೊಬ್ಬರ ಹೃದಯಸ್ಥಿತನಾದ ಭಗವಂತನು ಚೈತ್ಯ ಗುರುವಾಗಿ ಭಕ್ತನಿಗೆ ಸಹಾಯ ಮಾಡುತ್ತಾನೆ.

ದೇವರು ಎಲ್ಲರ ಹೃದಯದಲ್ಲಿದ್ದಾನೆ ಎಂದು ತಿಳಿದ ಮಾತ್ರದಿಂದ ಪರಿಪೂರ್ಣತೆಯು ಸಿದ್ಧಿಸುವುದಿಲ್ಲ. ಅಂತರಂಗದಲ್ಲಿ ಬಹಿರಂಗದಲ್ಲಿ ಭಗವಂತನನ್ನು ನಿಕಟವಾಗಿ ಅರಿತುಕೊಳ್ಳಬೇಕು ಮತ್ತು ಕೃಷ್ಣ ಪ್ರಜ್ಞೆಯಲ್ಲಿ ಕ್ರಿಯಾಶೀಲನಾಗಬೇಕು. ಇದೇ ಮಾನವ ಜೀವಿತದ ಅತ್ಯುನ್ನತ ಪರಿಪೂರ್ಣತೆಯಾಗಿದೆ ಮತ್ತು ಎಲ್ಲ ಯೋಗ ಪದ್ಧತಿಗಳಗಲ್ಲಿ ಶಿಖರ ಪ್ರಾಯವಾಗಿದೆ.

ಪರಿಪೂರ್ಣ ಯೋಗಿಯಾಗಲು ಎಂಟು ಬಗೆಯ ಸಿದ್ಧಿಗಳು ಹೇಳಲ್ಪಟ್ಟಿವೆ:

1. ಅಣುವಿಗಿಂತ ಚಿಕ್ಕದಾಗಬಹುದು.

2. ಪರ್ವತಕ್ಕಿಂತ ದೊಡ್ಡದಾಗಬಹುದು.

3. ಗಾಳಿಗಿಂತ ಹಗುರಾಗಬಹುದು.

4. ಯಾವುದೇ ಲೋಹಕ್ಕಿಂತ ಭಾರವಾಗಬಹುದು.
5. ಇಚ್ಛಾನುಸಾರ ಯಾವುದೇ ಭೌತಿಕ ಸೃಷ್ಟಿಯನ್ನು ನಿರ್ಮಾಣ ಮಾಡಬಹುದು (ಉದಾಹರಣೆಗೆ ಒಂದು ಗ್ರಹವನ್ನೇ ನಿರ್ಮಿಸಬಹುದು)
6. ಭಗವಂತನ ಹಾಗೆ ಇತರರಿಗೆ ನಿಯಾಮಕನಾಗಬಹುದು.
7. ವಿಶ್ವದಲ್ಲೆಲ್ಲಾ (ಅದರಾಚೆಗೂ) ನಿರಾತಂಕವಾಗಿ ಸಂಚರಿಸಬಹುದು.
8. ತನ್ನ ಮರಣಕಾಲವನ್ನು ಮತ್ತು ಸ್ಥಳವನ್ನು ತಾನೇ ನಿರ್ಧರಿಸಿಕೊಳ್ಳಬಹುದು (ಎಂದರೆ ಇಚ್ಛಾ ಮರಣಿಯಾಗಬಹುದು) ಮತ್ತು ತನ್ನ ಇಚ್ಛೆ ಬಂದಲ್ಲಿ ಮತ್ತೆ ಹುಟ್ಟಿಬರಬಹದು.

ಜೀವನು ಭಗವಂತನಿಂದ ಆದೇಶ ಪಡೆಯುವ ಪರಿಪೂರ್ಣತೆಯ ಈ ಹಂತವನ್ನು ತಲುಪಿದಾಗ ಅವನು ಮೇಲೆ ಹೇಳಿದ ಭೌತಿಕ ಸಿದ್ಧಿಗಳಿಂದ ಮೇಲೆ ಹೋಗಿರುತ್ತಾನೆ.

ಸಾಮಾನ್ಯವಾಗಿ ಯೋಗ ಪದ್ಧತಿಯಲ್ಲಿ ಹೇಳಿಕೊಡುವ ಶ್ವಾಸೋಚ್ಛ್ವಾಸದ ಅಭ್ಯಾಸವು ಈ ಪದ್ಧತಿಯ ಕೇವಲ ಪ್ರಾರಂಭ ದೆಸೆಯಾಗಿರುತ್ತದೆ. ಆಮೇಲೆ ಪರಮಾತ್ಮನ ಧ್ಯಾನ ಮತ್ತೊಂದು ಹೆಜ್ಜೆ. ಅದ್ಭುತ ಭೌತಿಕ ಸಿದ್ಧಿಯು ಕೂಡ ಮತ್ತೊಂದು ಮುಂದಿನ ಹೆಜ್ಜೆ ಮಾತ್ರ. ಆದರೆ, ಪರಮಾತ್ಮನೊಂದಿಗೆ ನೇರ ಸಂಪರ್ಕ ಹೊಂದಿ ಆತನಿಂದ ಆದೇಶ ಪಡಯುವುದು ಪರಿಪೂರ್ಣತೆಯ ಅತ್ಯುನ್ನತ ದೆಸೆಯಾಗಿದೆ.

ಶ್ವಾಸಾಭ್ಯಾಸ ಮತ್ತು ಯೋಗದ ಧ್ಯಾನ ಪದ್ಧತಿಗಳು ಈ ಯುಗದಲ್ಲಿ ಕಷ್ಟಸಾಧ್ಯ. ಅಷ್ಟೇಕೆ, ಐದು ಸಾವಿರ ವರ್ಷಗಳ ಹಿಂದೆಯೂ ಕೂಡ ಅವು ಕಷ್ಟಸಾಧ್ಯವಾಗಿದ್ದುವು. ಇಲ್ಲದಿದ್ದರೆ ಅರ್ಜುನನು ಕೃಷ್ಣನ ಸೂಚನೆಯನ್ನು ನಿರಾಕರಿಸುತ್ತಿರಲಿಲ್ಲ. ಈ ಕಲಿಯುಗವು ಪತಿತ ಯುಗ. ಈ ಕಾಲದಲ್ಲಿ, ಸಾಮಾನ್ಯವಾಗಿ ಜನ ಅಲ್ಪಾಯುಷಿಗಳು ಮತ್ತು ಆತ್ಮ ಸಾಕ್ಷಾತ್ಕಾರದ ಮಾರ್ಗದಲ್ಲಿ ಅತಿ ಮಂದಮತಿಗಳು. ಹೆಚ್ಚಾಗಿ ಅವರು ದುರ್ದೈವಿಗಳು. ಹೀಗಿದ್ದೂ ಯಾವನಾದರೂ ಕಿಂಚಿತ್ತಾದರೂ ಆತ್ಮ ಸಾಕ್ಷಾತ್ಕಾರದ ವಿಷಯದಲ್ಲಿ ಆಸಕ್ತನಾಗಿದ್ದರೆ ಅವನನ್ನೂ ಕೂಡ ನಾನಾ ವಿಧದಿಂದ ಮೋಸಗೊಳಿಸಲಾಗುತ್ತದೆ. ಪರಿಪೂರ್ಣ ಯೋಗ ಸಿದ್ಧಿಗೆ ಏಕೈಕ ನಿಜವಾದ ಮಾರ್ಗವೆಂದರೆ ಶ್ರೀ ಚೈತನ್ಯ ಮಹಾ ಪ್ರಭುಗಳು ಆಚರಿಸಿದ ಭಗವದ್ಗೀತೆಯ ತತ್ವಗಳನ್ನು ಅನುಸರಿಸುವುದೇ ಆಗಿದೆ. ಇದೇ ಎಲ್ಲಕ್ಕಿಂತ ಸರಳವಾದ ಮತ್ತು ಪರಿಪೂರ್ಣತೆಯ ಯೋಗ ಪದ್ಧತಿಯಾಗಿದೆ.

ಶ್ರೀ ಚೈತನ್ಯರು, ವೇದಾಂತ, ಶ್ರೀಮದ್ಭಾಗವತ ಮತ್ತು ಅನೇಕ ಪುರಾಣಗಳಲ್ಲಿ ಹೇಳಿರುವಂತೆ, ಕೇವಲ ಕೃಷ್ಣನ ಪವಿತ್ರ ನಾಮ ಸಂಕೀರ್ತನೆಯ ಕೃಷ್ಣಪ್ರಜ್ಞಾ ಯೋಗವನ್ನು ಆಚರಿಸಿ ತೋರಿಸಿದ್ದಾರೆ. ಭಾರತದ ಬಹು ಜನರು ಈ ಯೋಗಪದ್ಧತಿಯನ್ನೇ ಅನುಸರಿಸುತ್ತಾರೆ. ಅಮೆರಿಕಾ ಮತ್ತು ಇತರ ದೇಶಗಳ ನಗರಗಳಲ್ಲಿಯೂ ಕೂಡ ಇದು ಕ್ರಮೇಣ ಬೆಳೆಯುತ್ತಿದೆ. ಇದು ಈ ಯುಗದಲ್ಲಿ, ಅದರಲ್ಲಿಯೂ ಯೋಗಸಾಧನೆಯಲ್ಲಿ ಯಶಸ್ವಿಯಾಗ ಬಯಸುವವರಿಗೆ, ಬಲು ಸರಳವೂ ಕಾರ್ಯಸಾಧ್ಯವೂ ಆಗಿದೆ. ಬೇರಾವ ವಿಧಾನವೂ ಈ ಯುಗದಲ್ಲಿ ಯಶಸ್ವಿಯಾಗಲಾರದು.

ಸುವರ್ಣಯುಗವೆನಿಸಿದ ಸತ್ಯ-ಯುಗದಲ್ಲಿ ಜನ ಸರಾಸರಿಯಾಗಿಯೇ ಒಂದು ನೂರು ಸಾವಿರ ವರ್ಷ ಜೀವಿಸುತ್ತಿದ್ದರು. ಆ ಯುಗದಲ್ಲಿ ಮಾತ್ರ ಧ್ಯಾನಯೋಗ ಪ್ರಕ್ರಿಯೆಯು ತೀವ್ರ ಸಾಧ್ಯವಾಗಿತ್ತು.

ಈ ಯುಗದಲ್ಲಿ ಆಚರಿಸಬಹುದಾದ ಯೋಗದಲ್ಲಿ ನೀವು ಯಶಸ್ವಿಯಾಗಬಯಸುವಿರಾದರೆ, ಹರೇಕೃಷ್ಣ, ಹರೇಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ ! ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಮಂತ್ರ ಜಪ ಮಾಡಿರಿ ಮತ್ತು ನೀವು ಹೇಗೆ ಪ್ರಗತಿ ಹೊಂದುತ್ತಿದ್ದೀರೆಂಬುದನ್ನು ನೀವೇ ಅರಿತುಕೊಳ್ಳಬಹುದು. ಯೋಗಸಾಧನೆಯಲ್ಲಿ ತಾನು ಸಾಧಿಸಿದ ಪ್ರಗತಿಯನ್ನು ತಾನೇ ಅರಿತುಕೊಳ್ಳಬೇಕಾಗುವುದು.

ಭಗವದ್ಗೀತೆಯಲ್ಲಿ ಈ ಕೃಷ್ಣ ಪ್ರಜ್ಞಾ ಸಾಧನೆಯುನ್ನು ರಾಜವಿದ್ಯಾ ಎಂದರೆ ಜ್ಞಾನರಾಜನೆಂದೂ, ರಾಜಗುಹ್ಯಮ್, ಎಂದರೆ ಆತ್ಮ ಸಾಕ್ಷಾತ್ಕಾರದ ಅತ್ಯಂತ ಗುಹ್ಯತಮವಾದ ಪದ್ಧತಿಯೆಂದೂ, ಪವಿತ್ರಮ್ ಎಂದರೆ ಶುದ್ಧವಾದವುಗಳಲ್ಲಿ ಅತ್ಯಂತ ಪರಿಶುದ್ಧವಾದುದೆಂದೂ, ಸುಸುಖಮ್, ಎಂದರೆ ಅತ್ಯಂತ ಆನಂದಮಯವಾಗಿ ಆಚರಿಸಬಹುದೆಂದೂ ಅವ್ಯಯಮ್, ಎಂದರೆ ನಾಶರಹಿತವಾದುದೆಂದೂ ಹೇಳಲ್ಪಟ್ಟಿದೆ.

ಅತ್ಯಂತ ಪವಿತ್ರವಾದ ಈ ಭಕ್ತಿಯೋಗ ವಿಧಾನವನ್ನು ಮತ್ತು ದಿವ್ಯ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯುತ ಸೇವಾ ವಿಧಾನವನ್ನು ಅನುಸರಿಸಿದವರು ಇದು ಎಷ್ಟು ಆನಂದದಾಯಕವಾಗಿದೆ ಮತ್ತು ಆಚರಿಸಲು ಅದೆಷ್ಟು ಸರಳವಾಗಿದೆಯೆಂಬುದನ್ನು ಸ್ವಾನುಭವದಿಂದ ಹೇಳಬಲ್ಲರು. ಯೋಗವೆಂದರೆ ಇಂದ್ರಿಯ ನಿಗ್ರಹ, ಭಕ್ತಿಯೋಗ ಎಂದರೆ ಇಂದ್ರಿಯ ಶುದ್ಧಿ. ಇಂದ್ರಿಯಗಳ ಶುದ್ಧಿ ಹೊಂದಿದಾಗ ಅವು ತಾವೇತಾವಾಗಿ ನಿಯಮ್ಯವಾಗುತ್ತವೆ. ಕೃತಕ ವಿಧಾನಗಳಿಂದ ನೀವು ಇಂದ್ರಿಯ ವ್ಯಾಪಾರಗಳನ್ನು ನಿಗ್ರಹಿಸಲಾರಿರಿ. ನೀವು ಇಂದ್ರಿಯ ಶುದ್ಧಿಯನ್ನು ಸಾಧಿಸಿದರೆ, ಅವು ಹೊಲಸು ವಿಷಯುಗಳಿಂದ ದೂರ ಉಳಿಯುವುದಲ್ಲದೆ ಸಕ್ರಿಯವಾಗಿ ಭಗವಂತನ ಭಕ್ತಿಯುತ ಸೇವೆಯಲ್ಲಿ ತೊಡಗುವುವು.

ಕೃಷ್ಣಪ್ರಜ್ಞೆ ಎಂಬುದು ನಮ್ಮ ಮಾನಸಿಕ ಊಹಾಪೋಹಗಳಿಂದ ತಯಾರಾದ ವಸ್ತುವಲ್ಲ. ಅದು ಭಗವದ್ಗೀತೆಯಲ್ಲಿ ವಿಧಿಸಿದ್ದಾಗಿದೆ. ನಾವು ಕೃಷ್ಣನಲ್ಲಿದ್ದು ಚಿಂತಿಸಿದರೆ, ಕೃಷ್ಣನಲ್ಲಿದ್ದು ಕೀರ್ತಿಸಿದರೆ, ಕೃಷ್ಣನಲ್ಲಿ ಜೀವಿಸಿದರೆ, ಕೃಷ್ಣನಲ್ಲಿದ್ದು ಭುಂಜಿಸಿದರೆ, ಕೃಷ್ಣನಲ್ಲಿದ್ದು ಸಂಭಾಷಿಸಿದರೆ, ಕೃಷ್ಣನಲ್ಲಿದ್ದು ಆಶಾಮಯರಾದರೆ, ಕೃಷ್ಣನಲ್ಲಿಯೇ ಸ್ಥಿತರಾಗಿದ್ದರೆ, ನಿಸ್ಸಂದೇಹವಾಗಿ ನಾವು ಮತ್ತೆ ಕೃಷ್ಣನಲ್ಲಿಗೆ ಮರಳುತ್ತೇವೆ. ಇದೇ ಕೃಷ್ಣ ಪ್ರಜ್ಞೆಯ ತಿರುಳು.



# ಶ್ರೀ ಭಗವಾನ್ ಚೈತನ್ಯರ ಪ್ರಾದುರ್ಭಾವ

**ಹರೇಕೃಷ್ಣ ಮಂತ್ರವು ಜಗತ್ತಿನ ಪ್ರತಿಯೊಂದು ಗ್ರಾಮದಲ್ಲಿಯೂ ನಗರದಲ್ಲಿಯೂ ಪ್ರತಿಧ್ವನಿತವಾಗುತ್ತದೆ ಎಂದು ಮಹಾ ಸಂತರೂ ಅನುಭಾವಿಗಳೂ ಆಗಿದ್ದ ಭಗವಾನ್ ಚೈತನ್ಯ ಮಹಾ ಪ್ರಭುಗಳು ಕೇವಲ ಐದು ನೂರು ವರ್ಷಗಳ ಹಿಂದೆ ಭವಿಷ್ಯ ನುಡಿದಿದ್ದರು. ಪಾಶ್ಚಾತ್ಯ ಮಾನವನು ತನ್ನ ಸಂಶೋಧನ ಕೂತೂಹಲದಿಂದ ಭೌತಿಕ ಜಗತ್ತಿನ ಅಧ್ಯಯನಕ್ಕೆ ಮತ್ತು ವಿಶ್ವಪರ್ಯಟನಕ್ಕೆ ಹವಣಿಸುತ್ತಿದ್ದಾಗ, ಭಾರತದಲ್ಲಿ ಶ್ರೀ ಚೈತನ್ಯ ಪ್ರಭುಗಳು ಅಂತರ್ಮುಖಿಯಾದ ಒಂದು ಆಂದೋಲನವನ್ನು ಪ್ರಾರಂಭಿಸಿ ಅದರ ಮುಂದಾಳುತನವನ್ನು ವಹಿಸಿಕೊಳ್ಳುವುದರಲ್ಲಿದ್ದರು. ಅವರ ಆಂದೋಲನವು ಈ ಉಪ ಖಂಡವನ್ನೇ ಆವರಿಸಿತು. ಲಕ್ಷಾವಧಿ ಶಿಷ್ಯರನ್ನು ಗಳಿಸಿತು. ಭಾರತದಲ್ಲಿ ಮತ್ತು ಪಾಶ್ಚಾತ್ಯ ಜಗತ್ತಿನಲ್ಲಿ ಧಾರ್ಮಿಕ ಮತ್ತು ದಾರ್ಶನಿಕ ಭಾವೀ ವಿಚಾರಧಾರೆಯ ಮೇಲೆ ಆಳವಾದ ಪ್ರಭಾವವನ್ನು ಬೀರಿತು. ಲಂಡನ್ನಿನ ಕಾನ್‌ವೇ ಹಾಲಿನಲ್ಲಿ 1969ರಲ್ಲಿ ಮಾಡಿದ ಈ ಮುಂದಿನ ಭಾಷಣದಲ್ಲಿ ಶ್ರೀಲ ಪ್ರಭುಪಾದರು ಶ್ರೀ ಚೈತನ್ಯರ ದಿವ್ಯ ಪ್ರಾದುರ್ಭಾವವನ್ನು ವಿವರಿಸುತ್ತಾರೆ.**

ಸುವರ್ಣ ಅವತಾರರೆನಿಸಿದ ಶ್ರೀ ಚೈತನ್ಯ ಮಹಾಪ್ರಭುಗಳು ಸುಮಾರು ಐನೂರು ವರ್ಷಗಳ ಹಿಂದೆ ಭಾರತದಲ್ಲಿ ಪ್ರಾದುರ್ಭವಿಸಿದರು. ಮಗು ಹ.ಟ್ಟಿದೊಡನೆಯೇ ಜೋತಿಷಿಗಳನ್ನು ಕರೆದು ವಿಚಾರಿಸುವುದು ಭಾರತದಲ್ಲಿ ಒಂದು ಸಾಮಾನ್ಯ ರೂಢಿ. ಐದು ಸಾವಿರ ವರ್ಷಗಳ ಹಿಂದೆ ಪರಮ ದೇವೋತ್ತಮ ಪುರುಷನಾದ ಶ್ರೀ ಕೃಷ್ಣನು ಪ್ರಾದುರ್ಭೂತನಾದಾಗ, ಕೃಷ್ಣನ ತಂದೆಯು ಗರ್ಗಮುನಿಗಳನ್ನು ಬರಮಾಡಿಕೊಂಡ. ಅವರು, "ಈ ಮಗು ಈ ಹಿಂದೆ ಕೆಂಪು, ಸುವರ್ಣ ಹೀಗೆ ಮೂರು ಬಣ್ಣದವನಾಗಿ ಅವತರಿಸಿದ್ದ. ಈಗ ಕಪ್ಪುವರ್ಣದವನಾಗಿ ಪ್ರಾದುರ್ಭೂತನಾಗಿದ್ದಾನೆ" ಎಂದರು. ಶಾಸ್ತ್ರಗಳಲ್ಲಿ ಕೃಷ್ಣನು ಮೋಡಗಳಂತೆ ಕಪ್ಪುವರ್ಣದವನು ಎಂದು ವರ್ಣಿಸಲಾಗಿದೆ. ಭಗವಾನ್ ಚೈತನ್ಯರು ಬಂಗಾರ ಬಣ್ಣದವರಾಗಿ ಆವಿರ್ಭೂತರಾದ ಕೃಷ್ಣನೇ ಎಂದು ಗ್ರಹಿಸಲಾಗಿದೆ.

ಚೈತನ್ಯ ಮಹಾ ಪ್ರಭುಗಳು ಕೃಷ್ಣನ ಅವತಾರವೆಂಬುದಕ್ಕೆ ವೈದಿಕ ಸಾಹಿತ್ಯಗಳಲ್ಲಿ ಸಾಕಷ್ಟು ಆಧಾರಗಳಿವೆ. ಈ ಅಂಶವನ್ನು ಪಂಡಿತರೂ ಭಕ್ತರೂ ದೃಢಪಡಿಸಿದ್ದಾರೆ. ಈ ಯುಗದಲ್ಲಿ ಎಂದರೆ ಈ ಕಲಿಯುಗದಲ್ಲಿ ಕೃಷ್ಣನ ಅವತಾರ ಸ್ವರೂಪನು ಸದಾ ಕೃಷ್ಣವರ್ಣನೆಯಲ್ಲಿಯೇ

ತೊಡಗಿರುತ್ತಾನೆ, ಅವನೇ ಕೃಷ್ಣನು. ಆದರೆ ಕೃಷ್ಣಭಕ್ತನಾಗಿ ತಾನು ತನ್ನನ್ನೇ ವರ್ಣಿಸುತ್ತಾನೆ ಎಂದು ಶ್ರೀಮದ್ಭಾಗವತವು ಹೇಳುತ್ತದೆ. ಈ ಯುಗದಲ್ಲಿ ಆತನ ದೇಹವರ್ಣವು ಕಪ್ಪಾಗಿರುವುದಿಲ್ಲ. ಎಂದರೆ ಅದು ಶ್ವೇತವರ್ಣವಾಗಿರಬಹುದು, ಕೆಂಪು ವರ್ಣವಾಗಿರಬಹುದು ಅಥವಾ (ಪೀತ) ಹರಿದ್ವರ್ಣವಾಗಿರಬಹುದು. ಈ ನಾಲ್ಕು ವರ್ಣಗಳನ್ನು ಎಂದರೆ ಶ್ವೇತ, ಕೆಂಪು, ಸುವರ್ಣ ಮತ್ತು ಪೀತ ವರ್ಣಗಳನ್ನೇ ಬೇರೆ ಬೇರೆ ಯುಗಗಳಲ್ಲಿ ದೇವರು ತನ್ನ ಅವತಾರಗಳಿಗೆ ಬಳಸಿಕೊಂಡಿದ್ದಾನೆ. ಕೆಂಪು, ಶ್ವೇತ ಮತ್ತು ಕಪ್ಪು ಬಣ್ಣಗಳನ್ನು ಈಗಾಗಲೇ ಹಿಂದಿನ ಅವತಾರಗಳಲ್ಲಿ ಧರಿಸಿದ್ದರಿಂದ, ನಾಲ್ಕನೆಯದಾದ ಸುವರ್ಣ ಬಣ್ಣವನ್ನು ಚೈತನ್ಯ ಮಹಾಪ್ರಭುಗಳು ಧಾರಣ ಮಾಡಿದರು. ಅವರ ಬಣ್ಣ ಕಪ್ಪು ಅಲ್ಲ, ಆದರೂ ಅವರು ಕೃಷ್ಣನೆ.

ಈ ಅವತಾರದ ಮತ್ತೊಂದು ಲಕ್ಷಣವೆಂದರೆ, ಚೈತನ್ಯರೊಡನೆ ಸದಾ ಅವರ ಸಂಗಾತಿಗಳಿರುತ್ತಾರೆ. ಚೈತನ್ಯ ಮಹಾಪ್ರಭುಗಳ ಚಿತ್ರದಲ್ಲಿ ಸದಾ ಅವರ ಅನೇಕ ಭಕ್ತರು ಕೀರ್ತಿಸುತ್ತ ಅವರೊಡನಿರುವುದನ್ನು ನಾವು ಕಾಣಬಹುದು. ಭಗವದ್ಗೀತೆಯಲ್ಲಿ ಹೇಳಿದಂತೆ, ದೇವರು ಅವತ್ತಾರವೆತ್ತಲು ಎರಡು ಉದ್ದೇಶಗಳನ್ನು ಹೊಂದಿರುತ್ತಾನೆ. ಗೀತೆಯಲ್ಲಿ, "ನನ್ನ ಅವತಾರಕ್ಕೆ ಸಾಧುಜನರ ರಕ್ಷಣೆ, ದೈತ್ಯರ ಸಂಹಾರ ಇದೇ ಉದ್ದೇಶ" ಎಂದು ಕೃಷ್ಣನು ಹೇಳುತ್ತಾನೆ. ಕೃಷ್ಣನು ಅವತರಿಸಿದಾಗ, ಅವನು ಅನೇಕ ದೈತ್ಯರನ್ನು ಸಂಹಾರ ಮಾಡಬೇಕಾಯಿತು. ವಿಷ್ಣುವಿನ ಚಿತ್ರವನ್ನು ನೋಡಿದಾಗ, ಅವನು ಶಂಖ, ಚಕ್ರ, ಗದಾ, ಪದ್ಮ ಧಾರಿಯಾಗಿರುವುದನ್ನು ಕಾಣುತ್ತೇವೆ. ಗದಾ ಚಕ್ರಗಳೆರಡೂ ದೈತ್ಯರ ಸಂಹಾರಕ್ಕಾಗಿಯೇ ಇವೆ ಎಂಬುದು ಸಂಕೇತ. ಈ ಜಗತ್ತಿನಲ್ಲಿ ಎರಡು ಬಗೆಯ ಮಾನವರಿದ್ದಾರೆ. ದಾನವರು ಮತ್ತು ಭಕ್ತರು. ಭಕ್ತರನ್ನು ದೇವತೆಗಳೆಂದೂ ಕರೆಯುವರು, ಅವರಲ್ಲಿ ದೇವತ್ವದ ಗುಣಗಳಿರುವುದರಿಂದ ಅವರು ಸರಿ ಸುಮಾರು ದೇವರಿದ್ದಂತೆಯೇ ಎಂದು ಹೇಳಲಾಗುತ್ತದೆ. ಭಕ್ತರನ್ನು ದೈವೀ ಪುರುಷರೆಂದೂ, ಅಭಕ್ತರನ್ನು, ನಾಸ್ತಿಕರನ್ನು ದೈತ್ಯರೆಂದು ಕರೆಯುವುದುಂಟು. ಹೀಗೆ ಕೃಷ್ಣನು ಎರಡು ಉದ್ದೇಶಗಳಿಗಾಗಿ ಬರುತ್ತಾನೆ. ಭಕ್ತ ಪೋಷಣೆ ಮತ್ತು ದೈತ್ಯವಿನಾಶ. ಈ ಯುಗದಲ್ಲಿ ಚೈತನ್ಯ ಮಹಾ ಪ್ರಭುಗಳ ಉದ್ದೇಶವೂ ಅದೆ. ಭಕ್ತರ ರಕ್ಷಣೆ ಮತ್ತು ಅಭಕ್ತರು ಎಂದರೆ ದೈತ್ಯರ ವಿನಾಶ. ಆದರೆ ಈ ಯುಗದಲ್ಲಿ ಅವರ ಆಯುಧ ಭಿನ್ನವಾದುದು. ಅದು ಗದೆ, ಚಕ್ರ ಅಥವಾ ಮಾರಕಾಸ್ತ್ರವಾಗಿಲ್ಲ. ಅದು ಸಂಕೀರ್ತನ ಆಂದೋಲನ. ಅವರು ಸಂಕೀರ್ತನ ಆಂದೋಲನವನ್ನು ಪ್ರಾರಂಭಿಸಿ ಜನರ ಆಸುರೀ ಮನೋಭಾವವನ್ನು ನಾಶ ಮಾಡಿದರು. ಇದೇ ಶ್ರೀ ಚೈತನ್ಯರ ವೈಶಿಷ್ಟ್ಯ. ಈ ಯುಗದಲ್ಲಿ ಜನ ತಮ್ಮನ್ನು ತಾವೇ ನಾಶಮಾಡಿಕೊಳ್ಳುತ್ತಿದ್ದಾರೆ. ತಮ್ಮನ್ನು ತಾವೇ ನಾಶ ಮಾಡಿಕೊಳ್ಳಲು ಅಣುಬಾಂಬನ್ನು ಶೋಧಿಸಿದ್ದಾರೆ. ಆದುದರಿಂದ ದೇವರು ಅವರನ್ನು ಕೊಲ್ಲಬೇಕಾಗಿಲ್ಲ. ಅವರ ಆಸುರೀ ಭಾವವನ್ನು ನಾಶಮಾಡಲು ಪ್ರಾದುರ್ಭೂತನಾಗಿದ್ದಾನೆ. ಇದು ಕೃಷ್ಣ ಪ್ರಜ್ಞಾ ಆಂದೋಲನದಿಂದ ಸಾಧ್ಯವಾಗಿದೆ.

ಅಂತೆಯೇ ಇದು ಈ ಯುಗದಲ್ಲಿ ಭಗವಂತನ ಅವತಾರವೆಂದು ಶ್ರೀಮದ್ಭಾಗವತದಲ್ಲಿ ಹೇಳಲಾಗಿದೆ ಮತ್ತು ಆತನನ್ನು ಯಾರು ಪೂಜಿಸುತ್ತಾರೆ ? ವಿಧಾನವು ತೀರಾ ಸರಳ. ಆತನ ಸಂಗಾತಿಗಳೊಂದಿಗೆ ಶ್ರೀ ಚೈತನ್ಯರ ಒಂದು ಚಿತ್ರವನ್ನು ಇಟ್ಟುಕೊಳ್ಳಿ ಸಾಕು. ಶ್ರೀ ಚೈತನ್ಯರು ಮಧ್ಯದಲ್ಲಿದ್ದಾರೆ, ಸುತ್ತಲೂ ಅವರ ಮುಖ್ಯ ಸಂಗಡಿಗರು ನಿತ್ಯಾನಂದ, ಅದ್ವೈತ, ಗದಾಧರ

ಮತ್ತು ಶ್ರೀವಾಸ ಇದ್ದಾರೆ. ಕೇವಲ ಈ ಒಂದು ಚಿತ್ರವನ್ನಿಟ್ಟುಕೊಂಡರೆ ಸಾಕು. ಅದನ್ನು ಎಲ್ಲಿಯಾದರೂ ಇಟ್ಟು ಕೊಂಡಿರಬಹುದು. ಈ ಚಿತ್ರವನ್ನು ನೋಡಲು ನಮ್ಮಲ್ಲಿಗೇ ಬರಬೇಕಾಗಿಲ್ಲ. ಯಾರು ಬೇಕಾದರೂ ಈ ಚಿತ್ರವನ್ನು ತಮ್ಮ ಮನೆಯಲ್ಲಿಟ್ಟುಕೊಂಡು, ಹರೇ ಕೃಷ್ಣ ಮಂತ್ರ ಜಪಿಸಿ ಶ್ರೀ ಚೈತನ್ಯರನ್ನು ಪೂಜಿಸಬಹುದು. ಇದು ತುಂಬಾ ಸರಳ ವಿಧಾನ. ಆದರೆ ಈ ಕ್ರಮವನ್ನು ಕರಗತ ಮಾಡಿಕೊಳ್ಳುವವರು ಯಾರು ಗೊತ್ತೇ ? ಸದ್ಬುದ್ಧಿಯಿದ್ದವನು ಮಾತ್ರ. ಯಾವ ಹೆಚ್ಚಿನ ಆಡಂಬರವಿಲ್ಲದೆ, ಕೇವಲ ಶ್ರೀ ಚೈತನ್ಯ ಮಹಾಪ್ರಭುಗಳ ಚಿತ್ರವನ್ನು ಮನೆಯಲ್ಲಿಟ್ಟುಕೊಂಡು ಹರೇಕೃಷ್ಣ ಮಂತ್ರ ಜಪಿಸಿದರೆ, ದೇವರ ಸಾಕ್ಷಾತ್ಕಾರ ಪಡೆಯಬಹುದು. ಈ ಸರಳ ವಿಧಾನವನ್ನು ಯಾರು ಬೇಕಾದರೂ ಅನುಸರಿಸಬಹುದು. ಇದಕ್ಕೆ ಖರ್ಚಿಲ್ಲ, ತೆರಿಗೆಯಿಲ್ಲ, ಇದಕ್ಕಾಗಿ ಬಹು ದೊಡ್ಡ ಚರ್ಚನ್ನೋ ಮಂದಿರವನ್ನೋ ಕಟ್ಟಬೇಕಾಗಿಲ್ಲ. ಯಾರು ಬೇಕಾದರೂ, ಎಲ್ಲಿ ಬೇಕಾದರೂ, ರಸ್ತೆಯಲ್ಲೋ ಮರದ ಕೆಳಗೋ ಕುಳಿತು ಹರೇ ಕೃಷ್ಣ ಮಂತ್ರ ಜಪಿಸಬಹುದು ಮತ್ತು ದೇವರನ್ನು ಪೂಜಿಸಬಹುದು. ಆದುದರಿಂದ ಇದೊಂದು ಮಹದವಕಾಶ. ಉದಾಹರಣೆಗೆ ವ್ಯಾಪಾರದಲ್ಲಿಯೊ ರಾಜಕೀಯ ಜೀವನದಲ್ಲಿಯೇ ಒಬ್ಬನಿಗೆ ಒಂದು ದೊಡ್ಡ ಸುಸಂಧಿ ದೊರಕುತ್ತದೆ. ಬುದ್ಧಿವಂತರಾದ ರಾಜಕಾರಣಿಗಳು ಈ ಸುಂಸಧಿಯ ಅವಕಾಶ ಪಡೆದುಕೊಂಡು ಅದು ಸಿಕ್ಕಾಗಲೇ ಜಯಶೀಲರಾಗುತ್ತಾರೆ. ಹಾಗೆಯೇ ಈ ಯುಗದಲ್ಲಿ, ಸಾಕಷ್ಟು ಬುದ್ಧಿವಂತರಾದವರು ಈ ಸಂಕೀರ್ತನೆ ಆಂದೋಲನದ ಅವಕಾಶ ಪಡೆದುಕೊಳ್ಳುತ್ತಾರೆ, ಅವರು ಬಹು ಶೀಘ್ರ ಪ್ರಗತಿ ಪಥದಲ್ಲಿ ಸಾಗುತ್ತಾರೆ.

ಭಗವಾನ್ ಚೈತನ್ಯರನ್ನು "ಸವರ್ಣಾವತಾರ" ಎಂದು ಕರೆಯಲಾಗಿದೆ. ಅವತಾರ ಎಂದರೆ, "ಕೆಳಗಿಳಿಯುವುದು, ಕೆಳಗೆ ಬರುವುದು" ಒಬ್ಬನು ಕಟ್ಟಡದ ಐದನೆಯ ಮಹಡಿಯಿಂದಲೋ ನೂರನೆಯ ಮಹಡಿಯಿಂದಲೋ ಕೆಳಗಿಳಿದು ಬಂದ ಹಾಗೆ, ಅವತಾರವು ಪರವ್ಯೋಮದ ದಿವ್ಯ ಲೋಕಗಳಿಂದ ಕೆಳಗಿಳಿದು ಬರುತ್ತದೆ. ನಾವು ನಮ್ಮ ಈ ಭೌತಿಕ ಕಣ್ಣುಗಳಿಂದಲೋ ಅಥವಾ ದೂರದರ್ಶಕದ ಮೂಲಕವೋ ನೋಡುವ ಆಕಾಶವು ಕೇವಲ ಭೌತಿಕ ಮಾತ್ರ. ಇದರಾಚೆಗೆ ಪರವ್ಯೋಮವಿದೆ. ಅದನ್ನು ನಾವು ನಮ್ಮ ಈ ಕಣ್ಣುಗಳಿಂದ ಅಥವಾ ಯಂತ್ರ ಸಾಧನಗಳಿಂದ ಕಾಣುವುದು ಸಾಧ್ಯವಿಲ್ಲ. ಆ ಒಂದು ಅರಿವು ಭಗವದ್ಗೀತೆಯಲ್ಲಿ ಸಿಕ್ಕುತ್ತದೆ. ಅದು ಬರಿ ಕಲ್ಪನೆಯಲ್ಲ. ಈ ಭೌತಿಕ ಆಕಾಶದಾಚೆಗೆ ಪರವ್ಯೋಮವೆಂಬ ಮತ್ತೊಂದು ಆಕಾಶವಿದೆಯೆಂದು ಕೃಷ್ಣನು ಹೇಳುತ್ತಾನೆ.

ನಾವು ಕೃಷ್ಣನ ಮಾತುಗಳನ್ನು ಇದ್ದ ಹಾಗೆಯೇ ಗ್ರಹಿಸಬೇಕು. ಉದಾಹರಣೆಗೆ ಇಂಗ್ಲೆಂಡಿನಾಚೆಗೆ ಜರ್ಮನಿ, ಇಂಡಿಯಾ ಮೊದಲಾದ ಇತರ ದೇಶಗಳಿವೆ ಎಂದು ನಾವು ಚಿಕ್ಕ ಮಕ್ಕಳಿಗೆ ಹೇಳುತ್ತೇವೆ. ಅವು ಮಕ್ಕಳ ವ್ಯಾಪ್ತಿಗೆ ಮೀರಿದ ವಸ್ತುಗಳಾದುದರಿಂದ, ಅವು ಬೋಧಕನ ಮಾತಿನಿಂದಲೇ ಈ ಸ್ಥಳಗಳ ಬಗ್ಗೆ ಅರಿತುಕೊಳ್ಳಬೇಕಾಗುತ್ತದೆ. ಹಾಗೆಯೇ, ಈ ಆಕಾಶದಾಚೆಗೆ ಮತ್ತೊಂದು ಆಕಾಶವಿದೆ. ಚಿಕ್ಕ ಮಗು ಜರ್ಮನಿ ಅಥವಾ ಇಂಡಿಯವನ್ನು ಕಾಣಲು ಪ್ರಯೋಗ ನಡೆಸುವುದು ಹೇಗೆ ಅಸಾಧ್ಯವೋ ಹಾಗೆಯೇ ಈ ಪರವ್ಯೋಮವನ್ನು ಪ್ರಯೋಗ ನಡೆಸಿ ಕಂಡುಕೊಳ್ಳುವುದು ಸಾಧ್ಯವಿಲ್ಲ. ಅದು ಅಸಾಧ್ಯವಾದ ಮಾತು. ನಮಗೆ

ಜ್ಞಾನಬೇಕಾದರೆ, ನಾವು ಅಧಿಕೃತ ಮಾತುಗಳನ್ನು ನಂಬಬೇಕು. ಹಾಗೆಯೇ, ಈ ಭೌತಿಕ ಆಕಾಶದಾಚೆಗೆ ಏನಿದೆಯೆಂಬುದನ್ನು ನಾವು ತಿಳಿದುಕೊಳ್ಳಬಯಸಿದರೆ, ನಾವು ವೇದ ಪ್ರಾಮಾಣ್ಯವನ್ನು ಒಪ್ಪಿಕೊಳ್ಳಬೇಕು. ಅನ್ಯಥಾ ಅದನ್ನು ತಿಳಿಯುವುದು ಅಸಾಧ್ಯ. ಅದು ಭೌತಿಕ ಜ್ಞಾನವನ್ನು ಮೀರಿದ್ದಾಗಿದೆ, ಮನುಷ್ಯನು ಈ ವಿಶ್ವದ ಅತಿ ದೂರದ ಗ್ರಹಗಳಿಗೆಯೇ ಹೋಗಲಾರ ಎಂದ ಮೇಲೆ ಈ ವಿಶ್ವದಾಚೆಗೆ ಹೋಗುವ ಮಾತೇಕೆ. ಆಧುನಿಕ ಯಂತ್ರಸಾಧನಗಳನ್ನು ಬಳಸಿಕೊಂಡು ಈ ವಿಶ್ವದ ಅತ್ಯುನ್ನತ ಗ್ರಹಕ್ಕೆ ಹೋಗಲು ಕೂಡ ನಲವತ್ತು ಸಾವಿರ ಜ್ಯೋತಿರ್ವರ್ಷಗಳು ಹಿಡಿಯಬಹುದೆಂದು ಅಂದಾಜು ಮಾಡಲಾಗಿದೆ. ಆದುದರಿಂದ, ನಾವು ಈ ಭೌತಿಕ ವಿಶ್ವದಲ್ಲಿಯೇ ಎಲ್ಲ ಕಡೆಗೂ ಸಂಚರಿಸುವುದು ಸಾಧ್ಯವಿಲ್ಲ. ನಮ್ಮ ಆಯುರ್ಮಾನ ಮತ್ತು ಸಾಧನಗಳು ಎಷ್ಟು ಪರಿಮಿತವಾಗಿವೆಯೆಂದರೆ ನಮಗೆ ಈ ಭೌತಿಕ ಜಗತ್ತಿನ ವಿಷಯದಲ್ಲಿ ಕೂಡ ಸರಿಯಾದ ಜ್ಞಾನಲಾಭವಾಗುವುದು ಅಸಂಭವ.

ಭಗವದ್ಗೀತೆಯಲ್ಲಿ ಅರ್ಜುನನು "ನಿನ್ನ ಶಕ್ತಿಗಳ ಕಾರ್ಯವ್ಯಾಪ್ತಿಯೇನು ಎಂಬುದನ್ನು ದಯವಿಟ್ಟು ವಿವರಿಸುವಿಯಾ ?" ಎಂದು ಕೃಷ್ಣನನ್ನು ಕೇಳುತ್ತಾನೆ. ಭಗವಂತನು ಆತನಿಗೆ ಅನೇಕ ದೃಷ್ಟಾಂತಗಳನ್ನು ನೀಡಿದನು. ಕೊನೆಯಲ್ಲಿ, "ಹೇ ಪ್ರಿಯ ಅರ್ಜುನ, ನನ್ನ ಶಕ್ತಿಗಳ ಬಗ್ಗೆ ನಿನಗೆ ನಾನೇನು ಹೇಳಲಿ ? ಅದನ್ನು ತಿಳಿದುಕೊಳ್ಳುವುದು ಕಾರ್ಯತಃ ನಿನಗೆ ಅಸಾಧ್ಯ. ಆದರೆ ನೀನು ನನ್ನ ಶಕ್ತಿಗಳ ವಿಸ್ತರಣಗಳನ್ನು ಮಾತ್ರ ಊಹಿಸಬಹುದು. ಅನಂತಕೋಟಿ ಬ್ರಹ್ಮಾಂಡಗಳಿಂದ (ವಿಶ್ವಗಳಿಂದ) ಕೂಡಿದ ಈ ಭೌತಿಕ ಜಗತ್ತು ನನ್ನ ಸೃಷ್ಟಿಯ ಕೇವಲ ನಾಲ್ಕನೆಯ ಒಂದು ಪಾದ ಮಾತ್ರವಾಗಿದೆ" ಎಂದು ತಿಳಿಸಿದನು. ಲಕ್ಷೋಪಲಕ್ಷ ವಿಶ್ವಗಳಿವೆ. ನಾವು ಒಂದರ ಸ್ಥಿತಿಯನ್ನೇ ಅಂದಾಜು ಮಾಡುವುದು ಸಾಧ್ಯವಿಲ್ಲ. ಇವೆಲ್ಲವುಗಳಾಚೆಗೆ ಪರವ್ಯೋಮವಿದೆ. ಅಲ್ಲಿ ಲಕ್ಷೋಪಲಕ್ಷ ದಿವ್ಯ ಲೋಕಗಳಿವೆ. ಈ ಎಲ್ಲ ಮಾಹಿತಿಯು ವೈದಿಕ ಸಾಹಿತ್ಯದಲ್ಲಿ ದೊರೆಯುತ್ತದೆ. ವೈದಿಕ ಸಾಹಿತ್ಯವನ್ನು ಒಪ್ಪಿದರೆ, ಈ ಎಲ್ಲ ಜ್ಞಾನವನ್ನು ಸಂಪಾದಿಸಬಹುದು. ಒಪ್ಪದಿದ್ದರೆ, ಬೇರೆ ದಾರಿಯೇ ಇಲ್ಲ. ಇದು ನಮಗೆ ಬಿಟ್ಟದ್ದು. ಆದುದರಿಂದ, ವೈದಿಕ ಸಂಪ್ರದಾಯದ ಆಚಾರ್ಯರು ಮಾತನಾಡುವಾಗಲೆಲ್ಲ ವೇದ ವಾಕ್ಯಗಳನ್ನು ಕೂಡಲೇ ಉದಾಹರಿಸುತ್ತಾರೆ. ಆಗ ಇತರರು ಅದನ್ನು "ಹೌದು. ಅದು ಸರಿ" ಎಂದು ಒಪ್ಪಿಕೊಳ್ಳುತ್ತಾರೆ. ನ್ಯಾಯಾಲಯದಲ್ಲಿ ವಕೀಲನು ಹಿಂದಿನ ನ್ಯಾಯ ತೀರ್ಮಾನಗಳಿಂದ ಉಲ್ಲೇಖಿಸುತ್ತಾನೆ, ಅವನ ವಾದವು ಸರಿಯಿದ್ದರೆ, ನ್ಯಾಯಾಧೀಶನು ಅದನ್ನು ಒಪ್ಪಿಕೊಳ್ಳುತ್ತಾನೆ, ಹಾಗೆಯೇ ವೇದಾಧಾರಗಳನ್ನು ಉಲ್ಲೇಖಿಸಿದಾಗ ಅದು ನಿಶ್ಚಯಾತ್ಮಕ ಸಂಗತಿಯೆಂದೇ ಭಾವಿಸಲಾಗುತ್ತದೆ.

ಈ ಯುಗ ಅವತಾರವೆನಿಸಿದ ಭಗವಾನ್ ಚೈತನ್ಯರನ್ನು ವೈದಿಕ ಸಾಹಿತ್ಯದಲ್ಲಿ ವರ್ಣಿಸಸಲಾಗಿದೆ. ವೇದಶಾಸ್ತ್ರಗಳಲ್ಲಿ ವರ್ಣಿಸಿದ ಲಕ್ಷಣಗಳಿಲ್ಲದವರನ್ನು ಅವತಾರವೆಂದು ನಾವು ಒಪ್ಪಿಕೊಳ್ಳಲಾಗುವುದಿಲ್ಲ. ನಮ್ಮ ಖುಷಿ ಬಂದಂತೆ, ಮತಗಳ ಎಣಿಕೆ ಮಾಡಿ ನಾವು ಶ್ರೀ ಚೈತನ್ಯರನ್ನು ಅವತಾರವೆಂದು ಗ್ರಹಿಸುವುದಿಲ್ಲ. ಈಗಿನ ಕಾಲದಲ್ಲಿ ಯಾರು ಬೇಕಾದರು ಬಂದು ತಾವು ದೇವರು ಅಥವಾ ದೇವರ ಅವತಾರವೆಂದು ಹೇಳುವುದು ಒಂದು ಫ್ಯಾಷನ್ ಆಗಿ ಬಿಟ್ಟಿದೆ.

ಅದನ್ನು ಕೆಲವು ಮೂರ್ಖರೂ ಖೂಳರೂ ನಂಬುತ್ತಾರೆ. "ಓ ಅವರು ದೇವರು" ಎಂದೂ ಹೇಳುತ್ತಾರೆ. ನಾವು ಅವತಾರವನ್ನು ಅಷ್ಟು ಸುಲಭವಾಗಿ ಗ್ರಹಿಸುವುದಿಲ್ಲ. ನಾವು ವೇದಗಳ ಆಧಾರಗಳನ್ನು ನೋಡುತ್ತೇವೆ. ದೊರೆತರೆ ಒಪ್ಪುತ್ತೇವೆ. ಇಲ್ಲವೇ ಇಲ್ಲ. ಪ್ರತಿಯೊಂದು ಅವತಾರದ ಬಗ್ಗೆಯೂ ವೇದಗಳಲ್ಲಿ ವರ್ಣನೆಯಿದೆ. ದೇವರು ಇಂಥಿಂಥ ಸ್ಥಳದಲ್ಲಿ, ಇಂಥಿಂಥ ರೂಪದಲ್ಲಿ ಪ್ರಾದುರ್ಭಾವ ಹೊಂದುತ್ತಾನೆ, ಇಂಥಿಂಥ ಕಾರ್ಯ ಮಾಡುತ್ತಾನೆ ಎಂದೂ ಹೇಳಲಾಗಿದೆ. ಇದೇ ವೇದಾಧಾರದ ಮಹತ್ವದ ಸ್ವರೂಪ.

ಶ್ರೀ ಮದ್ಭಾಗವತದಲ್ಲಿ ಅವತಾರಗಳ ಒಂದು ಪಟ್ಟಿಯೇ ಇದೆ. ಅದರಲ್ಲಿ ಭಗವಾನ್ ಬುದ್ಧನ ಪ್ರಸ್ತಾಪವೂ ಇದೆ. ಈ ಶ್ರೀಮದ್ಭಾಗವತನ್ನು ಐದು ಸಾವಿರ ವರ್ಷಗಳ ಹಿಂದೆ ರಚಿಸಲಾಯಿತು. ಅದರಲ್ಲಿ ಭವಿಷ್ಯ ಕಾಲದ ಅನೇಕ ಹೆಸರುಗಳೂ ಉಲ್ಲೇಖಿಸಲ್ಪಟ್ಟಿವೆ. ಮುಂದೆ ಭಗವಾನ್ ಬುದ್ಧನು ಪ್ರಾದುರ್ಭೂತನಾಗುತ್ತಾನೆ, ಆತನ ತಾಯಿಯ ಹೆಸರು ಅಂಜನಾ, ಆತನು ಗಯಾದಲ್ಲಿ ಕಾಣಿಸಿಕೊಳ್ಳುತ್ತಾನೆ ಎಂದು ಹೇಳಲಾಗಿದೆ. ಹೀಗೆ ಆತನು ಎರಡು ಸಾವಿರದ ಆರುನೂರು ವರ್ಷಗಳ ಹಿಂದೆ ಪ್ರಾದುರ್ಭೂತನಾದನು. ಮುಂದೆ ಆತನು ಬರುವನೆಂದು ಐದು ಸಾವಿರ ವರ್ಷಗಳ ಹಿಂದೆ ರಚಿತವಾದ ಶ್ರೀ ಮದ್ಭಾಗವತದಲ್ಲಿ ಹೇಳಲಾಗಿತ್ತು. ಹಾಗೆಯೇ ಭಗವಾನ್ ಚೈತನ್ಯರ ಬಗ್ಗೆ ಪ್ರಸ್ತಾಪವಿದೆ ಮತ್ತು ಅದೇ ಪ್ರಕಾರ ಭಾಗವತದಲ್ಲಿ ಈ ಕಲಿ ಯುಗದ ಕೊನೆಯ ಅವತಾರದ ಪ್ರಸ್ತಾಪವೂ ಇದೆ. ಈ ಯುಗದ ಕೊನೆಯ ಅವತಾರವೇ 'ಕಲ್ಕಿ' ಎಂದು ಹೇಳಲಾಗಿದೆ. ಅವನು ವಿಷ್ಣು-ಯಶಾ ಎಂಬ ಬ್ರಾಹ್ಮಣನ ಪುತ್ರನಾಗಿ ಶಂಭಲ ಎಂಬ ಸ್ಥಳದಲ್ಲಿ ಹುಟ್ಟುತ್ತಾನೆ ಎಂದು ಹೇಳಲಾಗಿದೆ. ಭಾರತದಲ್ಲಿ ಆ ಹೆಸರಿನ ಒಂದು ಸ್ಥಳವೂ ಇದೆ. ಪ್ರಾಯಃ ಭಗವಂತನು ಅಲ್ಲಿ ಅವತರಿಸುವನು.

ಹೀಗೆ ಅವತಾರವೆಂಬುದು ಉಪನಿಷತ್ತು, ಶ್ರೀ ಮದ್ಭಾಗವತ, ಮಹಾಭಾರತ ಮತ್ತು ಇತರ ವೈದಿಕ ಸಾಹಿತ್ಯದ ಆಧಾರಗಳಿಗೆ ಅನುಗುಣವಾಗಿರಬೇಕು. ವೇದ ಪ್ರಾಮಾಣ್ಯದ ಮೇಲೆ ಮತ್ತು ಜಗತ್ತಿನಲ್ಲಿಯೇ ಮಹಾ ದಾರ್ಶನಿಕರೆನಿಸಿದ ಜೀವ ಗೋಸ್ವಾಮಿ ಅವರಂಥ ಮಹಾ ಪ್ರಚಂಡ ಗೋಸ್ವಾಮಿಗಳ ವ್ಯಾಖ್ಯಾನಗಳ ಆಧಾರದ ಮೇಲೆ ಭಗವಾನ್ ಚೈತನ್ಯರನ್ನು ಕೃಷ್ಣನ ಅವತಾರವೆಂದು ನಾವು ಗ್ರಹಿಸಬಹುದು.

ಭಗವಾನ್ ಚೈತನ್ಯರು ಪ್ರಾದುರ್ಭವಿಸಿದ್ದು ಏತಕ್ಕೆ ? ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು, "ಎಲ್ಲ ವೃತ್ತಿಗಳನ್ನು ಪರಿತ್ಯಜಿಸಿ ಕೇವಲ ನನ್ನ ಸೇವೆಯಲ್ಲಿ ನಿರತರಾಗಿರಿ, ನಾನು ನಿಮ್ಮನ್ನು ಸರ್ವ ಪಾಪಗಳಿಂದ ರಕ್ಷಿಸುತ್ತೇನೆ" ಎಂದಿದ್ದಾನೆ. ಈ ಭೌತಿಕ ಜಗತ್ತಿನ ಬದ್ಧ ಜೀವನದಲ್ಲಿ ನಾವು ಬರೀ ಪಾಪ ಕಾರ್ಯಗಳನ್ನು ಮಾಡುತ್ತಿದ್ದೇವೆ. ಅಷ್ಟೇ ಈ ಪಾಪಗಳ ಫಲವಾಗಿಯೇ ನಮಗೆ ಈ ದೇಹ ಬಂದಿದೆ. ನಮ್ಮ ಪಾಪಕರ್ಮಗಳು ನಿಂತು ಹೋದರೆ, ನಾವು ಮತ್ತೆ ಈ ಭೌತಿಕ ದೇಹ ಹೊಂದಬೇಕಾಗಿಲ್ಲ, ನಾವು ದಿವ್ಯ ದೇಹವನ್ನು ಪಡೆದುಕೊಳ್ಳಬೇಕು.

ದಿವ್ಯ (ಅಪ್ರಾಕೃತ) ದೇಹ ಯಾವುದು ? ಜನನ, ಮರಣ, ರೋಗ ಮತ್ತು ವೃದ್ಧಾಪ್ಯಗಳಿಂದ ಮುಕ್ತವಾದುದೇ ದಿವ್ಯ ದೇಹ. ಅದು ನಿತ್ಯವಾದ ಜ್ಞಾನಾನಂದಪೂರ್ಣವಾದ ದೇಹ.

ವಾಸನಾ ವೈವಿಧ್ಯಕ್ಕನುಸಾರವಾಗಿ ವಿವಿಧ ದೇಹಗಳು ಸೃಷ್ಟಿಯಾಗುತ್ತವೆ. ನಮಗೆ ನಾನಾ ಬಗೆಯ ಭೋಗಾಸಕ್ತಿಗಳಿರುವ ತನಕ ನಾವು ನಾನಾ ಬಗೆಯ ಭೌತಿಕ ದೇಹಗಳನ್ನು ಧರಿಸ ಬೇಕಾಗುತ್ತದೆ. ನಾವು ಬಯಸಿದ್ದನ್ನೇ ಕೊಡುವಷ್ಟು ಕೃಷ್ಣನು ದಯಾಮಯನಾಗಿದ್ದಾನೆ. ಪ್ರಾಣಿ ಗಳನ್ನು ಹಿಡಿದು ಅವುಗಳ ಬಿಸಿ ರಕ್ತವನ್ನು ಕುಡಿಯಲು ಅನುಕೂಲವಾದ ಹುಲಿ ಸದೃಶ ಬಲ ವನ್ನೂ ಹಲ್ಲುಗಳನ್ನೂ ಹೊಂದಿದ ಹುಲಿ ದೇಹವನ್ನು ನಾವು ಬಯಸುವುದಾದರೆ ಕೃಷ್ಣನು ನಮಗೆ ಆ ಅವಕಾಶವನ್ನು ಒದಗಿಸಿಕೊಡುತ್ತಾನೆ. ನಾವು ಭಗವತ್ಸೇವೆಯಲ್ಲಿಯೇ ತೊಡಗಿರುವ ಸಾಧು ಪುರುಷನ, ಭಕ್ತನ ದೇಹವನ್ನು ಬಯಸುವುದಾದರೆ ದೇವರು ನಮಗೆ ಅಂಥ ದೇಹ ವನ್ನೇ ನೀಡುತ್ತಾನೆ. ಇದು ಭಗವದ್ಗೀತೆಯಲ್ಲಿ ನಿರೂಪಿತವಾಗಿದೆ.

ಒಬ್ಬನು ಆತ್ಮ ಸಾಕ್ಷಾತ್ಕಾರ ವಿಧಾನದ ಯೋಗ ನಿರತನಾಗಿದ್ದು, ಕಾರಣಾಂತರಗಳಿಂದ ಅವನು ಅದನ್ನು ಪೂರ್ಣಗೊಳಿಸಲು ಸಾಧ್ಯವಾಗದಿದ್ದರೆ, ಅವನಿಗೆ ಮತ್ತೊಂದು ಅವಕಾಶ ದೊರೆ ಯುತ್ತದೆ; ಅವನು ಶುದ್ಧ ಬ್ರಾಹ್ಮಣನ ಅಥವಾ ಸಿರಿವಂತನ ಕುಟುಂಬದಲ್ಲಿ ಜನಿಸುತ್ತಾನೆ. ಒಬ್ಬನು ಅಂಥ ಕುಟುಂಬದಲ್ಲಿ ಹುಟ್ಟುವಷ್ಟು ಭಾಗ್ಯವಂತನಾಗಿದ್ದರೆ, ಆತ್ಮಸಾಕ್ಷಾತ್ಕಾರದ ಮಹತ್ವವನ್ನರಿತುಕೊಳ್ಳುವ ಎಲ್ಲ ಅನುಕೂಲಗಳು ಅವನಿಗೆ ಲಭಿಸುತ್ತವೆ. ನಮ್ಮ ಕೃಷ ಪ್ರಜ್ಞೆಯ ಮಕ್ಕಳು ಬಾಲ್ಯದಿಂದಲೇ ಕೀರ್ತಿಸುವುದನ್ನು, ನರ್ತಿಸುವುದನ್ನು ಕಲಿಯುವ ಸದವ ಕಾಶ ಪಡೆದಿರುತ್ತಾರೆ. ಅವರು ಬೆಳೆದು ದೊಡ್ಡವರಾದಾಗ ಅವರು ಬದಲಾಗುವುದಿಲ್ಲ, ಸ್ವಾಭಾ ವಿಕವಾಗಿಯೇ ಪ್ರಗತಿ ಹೊಂದುತ್ತಾರೆ. ಆ ಮಕ್ಕಳು ಬಹು ಭಾಗ್ಯಶಾಲಿಗಳು. ಮಗು ಅಮೆರಿಕ ದಲ್ಲಿ ಹುಟ್ಟಲಿ ಅಥವಾ ಯೂರೋಪಿನಲ್ಲಿ ಹುಟ್ಟಲಿ, ಅದರ ತಂದೆ ತಾಯಿಗಳು ಭಕ್ತರಾಗಿದ್ದರೆ, ಆ ಮಗು ಉತ್ಕೃಷ್ಟವಾಗಿ ಬೆಳೆಯುತ್ತದೆ. ಅದಕ್ಕೆ ಈ ಸದವಕಾಶ ಸಿಕ್ಕುತ್ತದೆ. ಒಂದು ಮಗು ಭಕ್ತರ ಕುಟುಂಬದಲ್ಲಿ ಜನಿಸಿದೆಯೆಂದರೆ, ಅದು ಹಿಂದಿನ ಜನ್ಮದಲ್ಲಿ ಆಗಲೇ ಯೋಗ ನಿರತವಾಗಿ ತ್ತೆಂದೇ ಅರ್ಥ. ಆದರೆ, ಏನು ಕಾರಣವೋ ಅದನ್ನು ಪೂರ್ಣಗೊಳಿಸಲಾಗಿರಲಿಲ್ಲ. ಅಂತೆಯೇ ಆ ಮಗುವಿಗೆ ಒಳ್ಳೆಯ ತಂದೆ ತಾಯಿಗಳ ರಕ್ಷಣೆಯಲ್ಲಿ ಪ್ರಗತಿ ಹೊಂದಲು ಮತ್ತೊಂದು ಅವಕಾಶವು ದೊರೆಯುತ್ತದೆ. ಹೀಗೆ ಒಬ್ಬನು ದೇವಪ್ರಜ್ಞೆಯ ತನ್ನ ಪ್ರಗತಿಯನ್ನು ಪೂರ್ಣಗೊಳಿಸಿದೊಡನೆಯೇ ಅವನು ಈ ಭೌತಿಕ ಜಗತ್ತಿನಲ್ಲಿ ಮತ್ತೆ ಜನ್ಮವೆತ್ತಬೇಕಾಗಿಲ್ಲ. ಅವನು ದಿವ್ಯಲೋಕಕ್ಕೆ ಮರಳುತ್ತಾನೆ.

"ಹೇ ಪ್ರಿಯ ಅರ್ಜುನನೇ, ಯಾರು ನನ್ನ ಪ್ರಾದುರ್ಭಾವ, ಅದೃಶ್ಯ ಮತ್ತು ಅವತಾರ ಕಾರ್ಯಗಳನ್ನು ಅರಿತುಕೊಳ್ಳುತ್ತಾರೋ, ಕೇವಲ ಹಾಗೆ ಅರಿತುಕೊಳ್ಳುವುದರಿಂದಲೇ ಅವರು ಈ ದೇಹ ವಿಸರ್ಜನೆಯ ಅನಂತರ ದಿವ್ಯ ಲೋಕದಲ್ಲಿ ಜನ್ಮವೆತ್ತುವ ಸದವಕಾಶವನ್ನು ಪಡೆ ಯುತ್ತಾರೆ" ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳುತ್ತಾನೆ. ಪ್ರತಿಯೊಬ್ಬನೂ ಇಂದಿಲ್ಲ ನಾಳೆ ಅಥವಾ ಕೆಲ ಕಾಲಾನಂತರ ಈ ದೇಹವನ್ನು ಬಿಡಲೇಬೇಕು, ಖಂಡಿತ ಬಿಡಲೇಬೇಕು ಆದರೆ ಕೃಷ್ಣನನ್ನರಿತವನು ಮತ್ತೆ ಭೌತಿಕ ದೇಹಧಾರಣ ಮಾಡಬೇಕಾಗಿಲ್ಲ. ಅವನು ನೇರವಾಗಿ ದಿವ್ಯ ಲೋಕವನ್ನು ಕುರಿತು ಪ್ರಯಾಣ ಮಾಡುತ್ತಾನೆ ಮತ್ತು ದಿವ್ಯ ಲೋಕಗಳಲ್ಲಿ ಜನ್ಮವೆತ್ತು ತ್ತಾನೆ. ಈ ದೇಹವು ಬಂದೊಡನೆಯೇ, ಅದು ಭಾರತದಲ್ಲಿರಲಿ, ಚಂದ್ರ ಸೂರ್ಯಾದಿ ಲೋಕ ಗಳಲ್ಲಿರಲಿ, ಬ್ರಹ್ಮಲೋಕದಲ್ಲಿರಲಿ ಅಥವಾ ಈ ವಿಶ್ವದಲ್ಲಿ ಎಲ್ಲಿಯೇ ಇರಲಿ- ಅದು ತನ್ನ ಪಾಪ

ರ್ಮಗಳ ಫಲವೆಂದೇ ಅರಿತುಕೊಳ್ಳಬೇಕು ಎನ್ನುತ್ತಾನೆ ಕೃಷ್ಣ. ಪಾಪ ಕರ್ಮಗಳಲ್ಲಿ ಹೆಚ್ಚು ಮೆ ಉಂಟು. ಆಯಾಯ ಪಾಪ ಕರ್ಮಕ್ಕನುಸಾರವಾಗಿ, ಜೀವನು ಭೌತಿಕ ದೇಹ ಧಾರಣೆ ಾಡುತ್ತಾನೆ. ಆದುದರಿಂದ, ಹೇಗೆ ತಿನ್ನಬೇಕು, ಹೇಗೆ ನಿದ್ರಿಸಬೇಕು, ಹೇಗೆ ಸಂಭೋಗಿಸ ಕು ಮತ್ತು ಹೇಗೆ ಆತ್ಮ ರಕ್ಷಣೆ ಮಾಡಿಕೊಳ್ಳಬೇಕು ಎಂಬುದು ನಮ್ಮ ನಿಜವಾದ ಸಮಸ್ಯೆ ಲ್ಲ-- ಭೌತಿಕವಲ್ಲದ ಮತ್ತು ದಿವ್ಯವಾದ ದೇಹವನ್ನು ಹೇಗೆ ಪಡೆದುಕೊಳ್ಳಬೇಕು–ಎಂಬುದು. ೇ ಎಲ್ಲ ಸಮಸ್ಯೆಗಳಿಗೆ ಅಂತಿಮ ಪರಿಹಾರ. ಜೀವನು ಕೃಷ್ಣನಿಗೆ ಶರಣಾಗತನಾದರೆ ಮತ್ತು ರ್ಣ ಕೃಷ್ಣಪ್ರಜ್ಞೆಯನ್ನು ಹೊಂದಿದರೆ, ಆಗ ಕೃಷ್ಣನು ಪಾಪಕರ್ಮ ಫಲಗಳಿಂದ ಮುಕ್ತ ದ ರಕ್ಷಣೆಯನ್ನು ನೀಡುವ ಭರವಸೆ ಕೊಟ್ಟಿದ್ದಾನೆ.

ಭಗವದ್ಗೀತೆಯಲ್ಲಿ ಕೃಷ್ಣನು ಈ ಭರವಸೆಯನ್ನು ನೀಡಿದ್ದಾನೆ. ಆದರೆ ಕೃಷ್ಣನನ್ನು ೇಕ ಮೂಢರು ಅರ್ಥಮಾಡಿಕೊಳ್ಳಲಿಲ್ಲ. ಭಗವದ್ಗೀತೆಯಲ್ಲಿ ಅವರನ್ನು ಮೂಢರೆಂದೇ ಯಲಾಗಿದೆ. "ಮೂಢ" ಎಂದರೆ "ಖೂಳ" ಎಂದ ಹಾಗೆ. "ನಾನು ವಾಸ್ತವಿಕವಾಗಿ ಏನಿದ್ದೇ ಬುದೇ ಅವರಿಗೆ ತಿಳಿದಿಲ್ಲ" ಎನ್ನುತ್ತಾನೆ ಗೀತೆಯಲ್ಲಿ ಶ್ರೀ ಕೃಷ್ಣ. ಹೀಗೆ ಅನೇಕರು ಷ್ಣನನ್ನು ತಪ್ಪಾಗಿ ಅರ್ಥಮಾಡಿಕೊಳ್ಳುತ್ತಾರೆ. ನಾವು ಅವನನ್ನು ಅರಿತುಕೊಳ್ಳಲು ಅವನು ಗವದ್ಗೀತೆಯ ಈ ಸಂದೇಶವನ್ನು ನಮಗೆ ನೀಡಿದ್ದರೂ, ಅನೇಕರು ಈ ಸದವಕಾಶವನ್ನು ದುಕೊಂಡಿದ್ದಾರೆ. ಅಂತೆಯೇ ಕೃಪಾಳುವಾದ ಕೃಷ್ಣನು ಮತ್ತೆ ಭಕ್ತನಾಗಿ ಧರೆಗಿಳಿದುಬಂದು, ಾವು ಕೃಷ್ಣನಿಗೆ ಹೇಗೆ ಶರಣಾಗಬೇಕೆಂಬುದನ್ನು ತೋರಿಸಿಕೊಟ್ಟಿದ್ದಾನೆ. ಹೇಗೆ ಶರಣಾಗ ೇಕೆಂಬುದನ್ನು ನಮಗೆ ತಿಳಿಸಲು ಸ್ವಯಂ ಕೃಷ್ಣನೇ ಬಂದ. ಶರಣಾಗತರಾಗಿ ಎಂದು ಹೇಳಿ ುದೇ ಭಗವದ್ಗೀತೆಯ ಅವನ ಕೊನೆಯ ಸಂದೇಶ, ಆದರೆ ಮೂಢರು, ಖೂಳರು"ನಾವೇಕೆ ರಣಾಗಬೇಕು ?" ಎನ್ನುತ್ತಾರೆ. ಆದುದರಿಂದ, ಚೈತನ್ಯ ಮಹಾಪ್ರಭುಗಳು ಸ್ವಯಂ ಕೃಷ್ಣನೇಕೆ ಿದ್ದರೂ, ಈ ಸಲ ಭಗವದ್ಗೀತೆಯ ಸಂದೇಶವನ್ನು ನಾವು ಹೇಗೆ ಕಾರ್ಯರೂಪಕ್ಕೆ ತರ ೇಕೆಂಬುದನ್ನು ಅವರು ಸಾಕ್ಷಾತ್ತಾಗಿ ನಮಗೆ ತಿಳಿಸಿಕೊಡುತ್ತಿದ್ದಾರೆ, ಅಷ್ಟೆ. ಚೈತನ್ಯ ಮಹಾ ಭುಗಳು ಅಸಾಧಾರಣವಾದುದೇನನ್ನೂ ಹೇಳುತ್ತಿಲ್ಲ. ಪರಮ ದೇವೋತ್ತಮ ಪುರುಷನಿಗೆ ರಣಾಗತರಾಗುವುದಕ್ಕಿಂತ ಹೆಚ್ಚಿನದೇನನ್ನೂ ಅವರು ಬೋಧಿಸುತ್ತಿಲ್ಲ- ಅದನ್ನು ಭಗವದ್ಗೀತೆ ಲ್ಲಿ ಹಿಂದೆಯೇ ತಿಳಿಸಲಾಗಿದೆ. ಹೊಸ ಬೋಧೆಯೇನೂ ಇಲ್ಲ. ನಾನಾ ಬಗೆಯ ಜನ ಅದನ್ನು ಗೀಕರಿಸಿ ದೇವರ ದರ್ಶನಕ್ಕೆ ಈ ಸದವಕಾಶವನ್ನು ಬಳಸಿಕೊಳ್ಳಲು ಅನೂಕೂಲವಾಗುವಂತೆ ುದೆ ಹೇಳಿದ್ದನ್ನೇ ವಿವಿಧ ವಿಧಾನಗಳಲ್ಲಿ ಚೈತನ್ಯರು ನಿರೂಪಿಸಿದ್ದಾರೆ.

ನಾವು ದೇವರನ್ನು ನೇರವಾಗಿ ಸಮೀಪಿಸುವ ವಿಧಾನವನ್ನು ಚೈತನ್ಯ ಮಹಾಪ್ರಭುಗಳು ುಗೆ ಹೇಳಿಕೊಡುತ್ತಿದ್ದಾರೆ.ಚೈತನ್ಯ ಮಹಾಪ್ರಭುಗಳ ಮುಖ್ಯ ಶಿಷ್ಯರಾದ ರೂಪಾಗೋಸ್ವಾಮಿ ವರು, ಮೊದಲನೆಯ ಸಲ ಚೈತನ್ಯ ಮಹಾಪ್ರಭುಗಳನ್ನು ಕಂಡಾಗ, (ರೂಪಗೋಸ್ವಾಮಿ) ಂಗಾಲ ಸರಕಾರದಲ್ಲಿ ಒಬ್ಬ ಮಂತ್ರಿಯಾಗಿದ್ದರು. ಅವರು ಚೈತನ್ಯ ಮಹಾಪ್ರಭುಗಳ ದೋಲನವನ್ನು ಸೇರ ಬಯಸಿದರು. ತಮ್ಮ ಮಂತ್ರಿ ಪದವಿಯನ್ನು ಪರಿತ್ಯಜಿಸಿದರು. ದೋಲನವನ್ನು ಸೇರಿದ ಬಳಿಕ, ಶರಣಾಗತರಾಗಿ ಶ್ರೀ ಚೈತನ್ಯರ ದಿವ್ಯಸ್ತೋತ್ರ ಮಾಡಿದ್ದಾರೆ.

ನಮೋ ಮಹಾ ವದಾನ್ಯಾಯ ಕೃಷ್ಣಪ್ರೇಮ ಪ್ರದಾಯತೇ।
ಕೃಷ್ಣಾಯ ಕೃಷ್ಣ-ಚೈತನ್ಯ-ನಾಮ್ನೇ ಗೌರತ್ವಿಷೇ ನಮ ಃ ॥

"ಹೇ ಪ್ರಿಯ ಭಗವಾನ್', ಎಲ್ಲ ಅವತಾರಗಳಲ್ಲಿ ನೀವು ಅತ್ಯಂತ ದಯಾಮಯನಾಗಿ (ಮಹಾ ವದನ್ಯ)ಇರುವಿರಿ". ಏಕೆ ? **ಕೃಷ್ಣ ಪ್ರೇಮ ಪ್ರದಾಯತೇ** "ನೀವು ನೇರವಾಗಿ ಭಗವತ್ಪ್ರೀತಿಯನ್ನು ನೀಡುತ್ತಿರುವಿರಿ. ನಿಮಗೆ ಬೇರೆ ಉದ್ದೇಶವೇ ಇಲ್ಲ. ನಿಮ್ಮ ವಿಧಾನವು ಎಷ್ಟು ಸೊಗಸಾಗಿದೆಯೆಂದರೆ, ಅದರಿಂದ ಯಾರಾದರೂ ದೇವರನ್ನು ಪ್ರೀತಿಸಲು ಒಡನೆಯೇ ಕಲಿತುಕೊಳ್ಳಬಹುದು. ಅಂತೆಯೇ ನೀವು ಎಲ್ಲ ಅವತಾರಗಳಲ್ಲಿ ಅತ್ಯಂತ ದಯಾಮಯರು. ಈ ಅನುಗ್ರಹ ಮಾಡುವುದು ಸ್ವಯಂ ಕೃಷ್ಣನನ್ನುಳಿದು ಇನ್ನಾರಿಗೂ ಸಾಧ್ಯವಿಲ್ಲ. ಅಂತೆಯೇ ನೀವೇ ಕೃಷ್ಣ ಎಂದು ನಾನು ಹೇಳುತ್ತೇನೆ". ಕೃಷ್ಣಾಯ ಕೃಷ್ಣ ಚೈತನ್ಯ ನಾಮ್ನೇ ಎಂದರೆ"ನೀವೇ ಕೃಷ್ಣ, ಆದರೆ ನೀವು ಕೃಷ್ಣ ಚೈತನ್ಯ ಎಂಬನಾಮಧಾರಣ ಮಾಡಿರುವಿರಿ. ನಿಮಗೆ ನಾನು ಪ್ರಪನ್ನನಾಗಿದ್ದೇನೆ."

ಇದು ವಿಧಾನ. ಚೈತನ್ಯ ಮಹಾಪ್ರಭುಗಳು ಸ್ವಯಂ ಕೃಷ್ಣನೇ. ಅವರು, ದೇವರಲ್ಲಿ ಪ್ರೀತಿಯನ್ನು ಹೇಗೆ ಬೆಳೆಸಿಕೊಳ್ಳಬೇಕೆಂಬುದನ್ನು ಬಲು ಸರಳ ವಿಧಾನದಲ್ಲಿ ಹೇಳಿಕೊಡುತ್ತಿದ್ದಾರೆ. ಹರೇ ಕೃಷ್ಣ ಮಂತ್ರವನ್ನು ಮಾತ್ರ ಜಪಿಸಿರಿ ಎಂದು ಹೇಳುತ್ತಾರೆ.

ಹರೇರ್ ನಾಮ ಹರೇರ್ ನಾಮ ಹರೇರ್ ನಾಮೈವ ಕೇವಲಮ್।
ಕಲೌ ನಾಸ್ತಿ ಏವ ನಾಸ್ತಿ ಏವ ನಾಸ್ತಿ ಏವ ಗತಿರ್ ಅನ್ಯಥಾ॥

"ಈ ಯುಗದಲ್ಲಿ ಕೇವಲ ಹರೇ ಕೃಷ್ಣ ಮಂತ್ರ ಜಪಿಸುತ್ತ ಹೋಗಿ ಸಾಕು. ಬೇರೆ ಮಾರ್ಗವೇ ಇಲ್ಲ." ಸಾಕ್ಷಾತ್ಕಾರ ಹೊಂದಬಹುದಾದ ನಾನಾ ವಿಧಾನಗಳಿಂದ ಜನ ದಿಗಿಲುಗೊಂಡಿದ್ದಾರೆ. ಅವರು ಧ್ಯಾನದ ವಿಧಿ ವಿಧಾನಗಳನ್ನು ಪಾಲಿಸುವುದು ಸಾಧ್ಯವಾಗುತ್ತಿಲ್ಲ. ಅದು ಸಾಧ್ಯವೂ ಇಲ್ಲ. ಆದುದರಿಂದ, ಈ ನಾಮ (ಜಪ) ಸಂಕೀರ್ತನೆಯ ವಿಧಾನವನ್ನು ಅನುಸರಿಸಿದರೆ ಮನುಷ್ಯನು ಕೂಡಲೇ ಸಾಕ್ಷಾತ್ಕಾರದ ವೇದಿಕೆಯನ್ನು ತಲುಪಬಲ್ಲನು ಎಂದು ಶ್ರೀ ಚೈತನ್ಯರು ಹೇಳುತ್ತಾರೆ.

ದೇವರ ಪ್ರೀತಿ ಸಂಪಾದನೆಗಾಗಿ, ಶ್ರೀ ಚೈತನ್ಯರು ಉಪದೇಶಿಸಿದ ಜಪ (ಕೀರ್ತನ) ವಿಧಾನವನ್ನು 'ಸಂಕೀರ್ತನ' ಎಂದು ಕರೆಯಲಾಗುತ್ತದೆ. ಸಂಕೀರ್ತನ ಎಂಬುದು ಸಂಸ್ಕೃತ ಪದ. ಸಮ್ ಎಂದರೆ ಸಮ್ಯಕ್– ಪೂರ್ಣ". ಕೀರ್ತನ ಎಂದರೆ "ಸ್ತುತಿಸುವುದು" ಅಥವಾ "ವರ್ಣಿಸುವುದು." ಪೂರ್ಣ ವರ್ಣನೆ ಎಂದರೆ ಪರಾತ್ಪರನ, ಪರಮ ಪೂರ್ಣನ ಪೂರ್ಣ ಗುಣಗಾನ ಮಾಡುವುದು. ಯಾವುದನ್ನೊ ಕುರಿತು ಸ್ತುತಿಸಿದ ಮಾತ್ರದಿಂದ ಅಥವಾ ವರ್ಣಿಸಿದ ಮಾತ್ರದಿಂದ ಅದು ಕೀರ್ತನವೆನಿಸಲಾರದು. ವ್ಯಾಕರಣ ಭಾಷೆಯಲ್ಲಿ ಅದು ಕೀರ್ತನ ಎನಿಸಬಹುದು. ಆದರೆ ವೇದ ವಿಧಿಯಲ್ಲಿ ಪರಮ ಸತ್ಯ ಸ್ವರೂಪನನ್ನು, ಪರಮ ದೇವೋತ್ತಮ ಪುರುಷನನ್ನು ಕುರಿತು ವರ್ಣಿಸುವುದೇ ಕೀರ್ತನವೆನಿಸಿಕೊಳ್ಳುತ್ತದೆ. ಇದೇ ಕೀರ್ತನ.

ಭಕ್ತಿಯುತ ಸೇವೆಯು ಶ್ರವಣದಿಂದಲೇ ಪ್ರಾರಂಭವಾಗುತ್ತದೆ. "ಶ್ರವಣ" ಎಂದರೆ ಕೇಳುವುದು, "ಕೀರ್ತನ" ಎಂದರೆ ವರ್ಣಿಸುವುದು. ಒಬ್ಬರು ಸ್ತುತಿಸಬೇಕು, ಮತ್ತೊಬ್ಬರು ಕೇಳಬೇಕು. ಒಬ್ಬನೇ ಸ್ವತಃ ಕೀರ್ತಿಸಬಹುದು ಮತ್ತು ತಾನೇ ಅದನ್ನು ಶ್ರವಣ ಮಾಡಬಹುದು. ಮತ್ತೊಬ್ಬರ ನೆರವು ಬೇಕಿಲ್ಲ. ನಾವು ಹರೇ ಕೃಷ್ಣ ಜಪ ಮಾಡುವಾಗ ಜಪ ಮಾಡುತ್ತ ನಾವೇ ಅದನ್ನು ಶ್ರವಣ ಮಾಡುತ್ತೇವೆ. ಇದು **ಪೂರ್ತಿ** ಆದಂತೆ. ಇದೇ ಪೂರ್ಣ ವಿಧಾನ. ಕೀರ್ತನ ಮತ್ತು ಶ್ರವಣ ಎಂದರೇನು ? ವಿಷ್ಣು ಅಥವಾ ಕೃಷ್ಣನನ್ನು ಕುರಿತು ಕೀರ್ತಿಸುವುದು ಮತ್ತು ಶ್ರವಣ ಮಾಡುವುದು, ಬೇರೊಂದನ್ನಲ್ಲ. ಶ್ರವಣಂ ಕೀರ್ತನಂ ವಿಷ್ಣೋಃ. ಶ್ರವಣ ಮೂಲಕ ಸರ್ವಾಂತರ್ಯಾಮಿ, ಪರಮ ಸತ್ಯ ಸ್ವರೂಪನೂ, ಪರಮ ದೇವೋತ್ತಮ ಪುರುಷನೂ ಆದ ಶ್ರೀ ವಿಷ್ಣುವನ್ನು ಅರಿತುಕೊಳ್ಳಬಹುದು.

ನಾವು ಶ್ರವಣ ಮಾಡಬೇಕು. ಕೇವಲ ಶ್ರವಣ ಮಾಡುವುದೇ ಮೊದಲ ಹೆಜ್ಜೆ. ಇದಕ್ಕೆ ಯಾವುದೇ ಶಿಕ್ಷಣ ಅಥವಾ ಭೌತಿಕ ಜ್ಞಾನದ ಬೆಳವಣಿಗೆಯ ಆವಶ್ಯಕತೆಯಿಲ್ಲ. ಮಗುವಿನ ಹಾಗೆ, ಅದು ಕೇಳಿದೊಡನೆಯೇ ಪ್ರತಿಸ್ಪಂದಿಸಿ ನರ್ತಿಸ ತೊಡಗುತ್ತದೆ. ಶ್ರವಣ ಮಾಡಲೆಂದೇ ದೇವರು ನಿಸರ್ಗದತ್ತವಾಗಿಯೇ ಸೊಗಸಾದ ಶ್ರವಣ ಸಾಧನಗಳನ್ನು ನಮಗೆ ನೀಡಿದ್ದಾನೆ. ಆದರೆ ನಾವು ಸರಿಯಾದ ಮೂಲದಿಂದ ಶ್ರವಣ ಮಾಡಬೇಕು. ಹೀಗೆ ಶ್ರೀ ಮದ್ಭಾಗವತದಲ್ಲಿ ಹೇಳಿದೆ. ಪರಮ ದೇವೋತ್ತಮ ಪುರುಷನ ಭಕ್ತರಿಂದಲೇ ಶ್ರವಣ ಮಾಡಬೇಕು. ಅವರನ್ನು **ಸತಾಂ** ಎಂದು ಕರೆಯುತ್ತಾರೆ. ಸರಿಯಾದ ಮೂಲದಿಂದ ಎಂದರೆ ಸಾಕ್ಷಾತ್ಕಾರ ಹೊಂದಿದವರಿಂದ ಶ್ರವಣ ಮಾಡಿದಾಗಲೇ ಅದು ಫಲಿಸುತ್ತದೆ. ಕೃಷ್ಣನ ಈ ಮಾತುಗಳು ಬಲು ಆಪ್ಯಾಯಮಾನವಾಗಿವೆ. ಬುದ್ಧಿಯಿದ್ದವರು ದಿವ್ಯಾತ್ಮರಿಂದ ಬಂದ ಮಾತುಗಳನ್ನು ಆಲಿಸುತ್ತಾರೆ. ಆಗ ಅವರು ಭೌತಿಕ ಬಂಧನಗಳಿಂದ ಬಲು ಬೇಗ ಮುಕ್ತರಾಗುತ್ತಾರೆ.

ಮೋಕ್ಷ ಮಾರ್ಗದಲ್ಲಿ ಮುಂದುವರಿಯುವುದೇ ಮಾನವ ಜೀವನದ ಗುರಿಯಾಗಿದೆ. ಇದನ್ನು **ಅಪವರ್ಗ** ಎಂದರೆ ಬಂಧನ ನಿವೃತ್ತಿ ಎಂದು ಕರೆಯುತ್ತಾರೆ. ನಾವೆಲ್ಲರೂ ಬಂಧನದಲ್ಲಿ ಸಿಲುಕಿದ್ದೇವೆ. ಈ ಭೌತಿಕ ದೇಹವನ್ನು ಪಡೆಯುವುದೆಂದರೆ ನಾವು ಈಗಾಗಲೇ ಬಂಧನದಲ್ಲಿ ಸಿಲುಕಿದ್ದೇವೆ ಎಂದರ್ಥ. ಆದರೆ ನಾವು ಈ ಬಂಧನ ವಿಧಾನದಲ್ಲಿ ಮುಂದುವರಿಯಬಾರದು. ಈ ಪ್ರಕ್ರಿಯೆಯನ್ನೇ **ಕರ್ಮ**ವೆಂದು ಕರೆಯುತ್ತೇವೆ. ಮನಸ್ಸು ಕರ್ಮಾಸಕ್ತವಾಗಿರುವತನಕ ನಾವು ಭೌತಿಕ ದೇಹವನ್ನು ಪಡೆಯುತ್ತಲೇ ಇರಬೇಕಾಗುವುದು. ಮರಣ ಒದಗಿದಾಗ ನಮ್ಮ ಮನಸ್ಸು "ಅಯ್ಯೋ ನಾನು ಈ ಕೆಲಸವನ್ನು ಪೂರೈಸಲಿಲ್ಲ, ನಾನು ಸಾಯುತ್ತಿದ್ದೇನೆ ! ಇದು ಮಾಡಬೇಕು, ಅದು ಮಾಡಬೇಕು" ಎಂದು ಯೋಚಿಸುತ್ತದೆ. ಹಾಗೆಂದರೆ ಕೃಷ್ಣನು ಅದನ್ನು ಮಾಡಲು ನಮಗೆ ಮತ್ತೊಂದು ಅವಕಾಶ ಕೊಡುತ್ತಾನೆ. ಆಗ ನಾವು ಮತ್ತೊಂದು ದೇಹವನ್ನು ಪಡೆಯಬೇಕಾಗುತ್ತದೆ. "ಆಗಲಿ ನಿಮಗದನ್ನು ಮಾಡಲಾಗಲಿಲ್ಲ. ಈಗಮಾಡಿ, ಈ ದೇಹವನ್ನು ಸ್ವೀಕರಿಸಿ" ಎಂದು ಹೇಳಿ ಮತ್ತೊಂದು ಅವಕಾಶವನ್ನು ನೀಡುತ್ತಾನೆ. ಭಾಗವತವು "ಈ ಮೂಢರು ಪ್ರಾಪಂಚಿಕ ವ್ಯಾಮೋಹದಿಂದ ಹುಚ್ಚರಾಗಿದ್ದಾರೆ; ಈ ಅತಿ ಲಂಪಟತ್ವದಲ್ಲಿ ಅವರು ಮಾಡಬಾರದ್ದನ್ನು ಮಾಡುತ್ತಿದ್ದಾರೆ" ಎಂದು ಹೇಳುತ್ತದೆ. ಅವರು ಏನು ಮಾಡುತ್ತಿದ್ದಾರೆ, ಇದಕ್ಕೆ ಧೃತರಾಷ್ಟ್ರ ಮಹಾರಾಜನು ಒಳ್ಳೆ ಉದಾಹರಣೆ. ಧೃತರಾಷ್ಟ್ರ ಮಹಾರಾಜನ

ತನ್ನ ಸ್ವಂತ ಮಕ್ಕಳಿಗೆ ಅನುಕೂಲ ಮಾಡಲು ಪಾಂಡವರನ್ನು ನಾಶ ಮಾಡಬೇಕೆಂದು ಕುಯುಕ್ತಿಯಿಂದ ಯೋಚಿಸುತ್ತಿದ್ದ. ಆಗ ಕೃಷ್ಣನು ಅವನಿಗೆ ಸರಿಯಾದ ಬುದ್ಧಿವಾದ ಹೇಳಲು ತನ್ನ ಚಿಕ್ಕಪ್ಪ (ಸೋದರ ಮಾವ) ಆಕ್ರೂರನನ್ನು ಕಳುಹಿಸಿದ. ಧೃತರಾಷ್ಟ್ರನು ಅಕ್ರೂರನ ಮಾತುಗಳನ್ನು ಅರಿತುಕೊಂಡ. ಆದರೆ "ಪ್ರಿಯ ಅಕ್ರೂರನೇ ನೀನು ಹೇಳುವುದೆಲ್ಲ ಸರಿ. ಅದಾವುದೂ ನನ್ನ ಹೃದಯದಲ್ಲಿ ನಿಲ್ಲುವುದಿಲ್ಲ. ನಾನು ನನ್ನ ನೀತಿಯನ್ನು ಬದಲಾಯಿಸಲಾರೆ. ಏನೇ ಸಂಭವಿಸಿದರೂ ನಾನು ನನ್ನ ಈ ನೀತಿಯನ್ನೇ ಅನುಸರಿಸಬೇಕಾಗಿದೆ" ಎಂದು ನುಡಿದನು.

ಹೀಗೆ ಜನ ತಮ್ಮ ಇಂದ್ರಿಯಗಳನ್ನು ತೃಪ್ತಿ ಪಡಿಸಲು ಬಯಸಿದಾಗ ಅವರು ಹುಚ್ಚರಾಗುತ್ತಾರೆ ಮತ್ತು ಈ ಬುದ್ಧಿ ಭ್ರಮಣೆಯಲ್ಲಿ ಅವರೇನೇನನ್ನೋ ಮಾಡಿಬಿಡುತ್ತಾರೆ. ಉದಾಹರಣೆಗೆ: ಪ್ರಾಪಂಚಿಕ ಜೀವನದಲ್ಲಿ ಕೆಲವರಿಗೆ ಯಾವುದೋ ಒಂದು ಹುಚ್ಚು ಹಿಡಿದ. ಆ ಭ್ರಮೆಯಲ್ಲಿ ಕೊಲೆ ಮಾಡಿ ಬಿಡುತ್ತಾರೆ. ಆ ವ್ಯಕ್ತಿ ತನ್ನ ಮನಸ್ಸನ್ನು ನಿಗ್ರಹಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ನಾವು ಹೀಗೆಯೇ ಇಂದ್ರಿಯ ಶೋಷಣಕ್ಕೆ ಒಗ್ಗಿ ಹೋಗಿದ್ದೇವೆ. ನಮಗೂ ಪ್ರಾಪಂಚಿಕ ಹುಚ್ಚು ಹಿಡಿದಿದೆ. ಅಂತೆಯೇ ನಮ್ಮ ಮನಸ್ಸುಗಳು ಸಂಪೂರ್ಣವಾಗಿ ಕರ್ಮನಿರತವಾಗಿವೆ. ಇದು ಬಹಳ ವಿಷಾದಕರ. ನಮ್ಮ ದೇಹವು ಅನಿತ್ಯವಾಗಿದ್ದರೂ, ಎಲ್ಲ ಬಗೆಯ ದುರಾದೃಷ್ಟ ಮತ್ತು ದುಃಖಗಳಿಗೆ ಆಗರ, ಅದು ನಮಗೆ ಸದಾ ದುಃಖದಾಯಕವಾಗಿದೆ ಈ ಅಂಶಗಳನ್ನು ನಾವು ಅಧ್ಯಯನ ಮಾಡಬೇಕು. ನಾವು ಹುಚ್ಚರಾಗಬಾರದು. ಮಾನವ ಜನ್ಮವು ಅದಕ್ಕಾಗಿ ಬಂದದ್ದಲ್ಲ. ಇಂದಿನ ನಾಗರಿಕತೆಯ ದೋಷವೆಂದರೆ ಜನ ಇಂದ್ರಿಯ ಶೋಷಣದ ಹುಚ್ಚುಹಿಡಿದು ಅದರ ಬೆನ್ನುಹತ್ತಿದ್ದಾರೆ ಅಷ್ಟೆ. ಅವರಿಗೆ ಜೀವನದ ನಿಜವಾದ ಮೌಲ ತಿಳಿದಿಲ್ಲ. ಅಂತೆಯೇ ಅವರು ಅತ್ಯಂತ ಅಮೂಲ್ಯವಾದ ಈ ಮಾನವ ಜನ್ಮವನ್ನು ನಿರ್ಲಕ್ಷಿಸುತ್ತಿದ್ದಾರೆ.

ಈ ಜನ್ಮವು ಕೊನೆಗೊಂಡಾಗ ಮುಂದೆ ಯಾವ ದೇಹ ಬರುತ್ತದೆ, ನಿಶ್ಚಿತವಿಲ್ಲ. ಮುಂದಿನ ಜನ್ಮದಲ್ಲಿ ನಾನು ಆಕಸ್ಮಿಕವಾಗಿ ಮರವಾಗಿ ಹುಟ್ಟಬಹುದು. ಆಗ ಸಾವಿರಾರು ವರ್ಷ ಹಾಗೆಯೇ ನಿಲ್ಲಬೇಕಾಗುತ್ತದೆ. ಆದರೆ ಜನ ಇದನ್ನು ಗಂಭೀರವಾಗಿ ಯೋಚಿಸುವುದಿಲ್ಲ. "ಅದೇನು ? ಹಾಗೆ ನಾನು ನಿಲ್ಲಬೇಕಾದರೂ ನಾನದನ್ನು ಮರೆಯುತ್ತೇನೆ" ಎಂದೂ ಕೆಲವರು ಹೇಳುತ್ತಾರೆ. ಕೆಳವರ್ಗದ ಪ್ರಾಣಿಗಳಲ್ಲಿ ವಿಸ್ಮೃತಿ ಇರುತ್ತದೆ. ಮರಕ್ಕೆ ಈ ಮರೆವು ಇಲ್ಲದಿದ್ದರೆ ಅದು ಜೀವಿಸುವುದೇ ಕಷ್ಟ. "ನೀವು ಮೂರು ದಿನಗಳ ತನಕ ಇಲ್ಲಿ ಹೀಗೇ ನಿಂತುಕೊಳ್ಳಿ" ಎಂದು ನಮಗೆ ಯಾರಾದರೂ ಹೇಳಿದರೆಂದು ಭಾವಿಸೋಣ. ನಮಗೆ ವಿಸ್ಮೃತಿ ಇಲ್ಲದಿರುವುದರಿಂದ ನಾವು ಹುಚ್ಚರಾಗುತ್ತೇವೆ. ಹೀಗೆ ಪ್ರಕೃತಿ ನಿಯಮದ ಪ್ರಕಾರ ಈ ಎಲ್ಲ ಕೆಳ ವರ್ಗದ ಯೋನಿಗಳು ವಿಸ್ಮೃತಿಯಲ್ಲಿರುತ್ತವೆ. ಅವುಗಳ ಪ್ರಜ್ಞೆ ಪ್ರಬುದ್ಧವಾಗಿರುವುದಿಲ್ಲ. ಮರಕ್ಕೆ ಜೀವವಿದೆ ಆದರೆ ಅದರ ಪ್ರಜ್ಞೆಯು ಪ್ರಬುದ್ಧವಲ್ಲವಾದ ಕಾರಣ ಅದನ್ನು ಕಡಿದು ಹಾಕಿದಾಗಲೂ ಅದರಲ್ಲಿ ಯಾವ ಪ್ರತಿಕ್ರಿಯೆ ಕಂಡು ಬರುವುದಿಲ್ಲ. ಆದ್ದರಿಂದ ನಮ್ಮ ಈ ಮಾನವ ಜನ್ಮವನ್ನು ಬಲು ಎಚ್ಚರಿಕೆಯಿಂದ ಉಪಯೋಗಿಸಿಕೊಳ್ಳಬೇಕು. ಜೀವನದಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದೇ ಕೃಷ್ಣ ಪ್ರಜ್ಞಾ ಆಂದೋಲನದ ಗುರಿ. ಇದು ಬರೀ ಮಾತಲ್ಲ ಅಥವಾ ಶೋಷಣೆಯೂ ಅಲ್ಲ.

ದುರ್ದೈವದಿಂದ ಜನ ಮೋಸದ ಮಾತುಗಳಿಗೆ ಒಗ್ಗಿ ಹೋಗಿದ್ದಾರೆ. ಒಬ್ಬ ಭಾರತೀಯ ಕವಿಯ ಒಂದು ಶ್ಲೋಕವಿದೆ: "ಸೊಗಸಾದ ಮಾತುಗಳನ್ನು ಹೇಳಿದರೆ ಏನು ಅಸಂಬದ್ಧ ಮಾತುಗಳನ್ನಾಡುತ್ತಿದ್ದೀಯೆ ಎಂದು ಜನ ಅವನೊಡನೆ ಜಗಳ ಕಾಯುತ್ತಾರೆ. ಆದರೆ ಅವನು ಅವರಿಗೆ ಸುಳ್ಳು ಹೇಳಿ ಮೋಸ ಮಾಡಿದರೆ ಅವರು ಸಂತೋಷಪಡುತ್ತಾರೆ." ಹಾಗೆಯೇ ಒಬ್ಬ ಮೋಸಗಾರನು, "ನೀವು ಇಷ್ಟನ್ನು ಮಾಡಿ, ನನಗೆ ನನ್ನ ಶುಲ್ಕವನ್ನು ಕೊಡಿ, ನೋಡಿ ಆರು ತಿಂಗಳೊಳಗೆ ನೀವು ದೇವರೇ ಆಗುವಿರಿ" ಎಂದು ಹೇಳುತ್ತಾನೆ. ಆಗ ಅವರು ಒಪ್ಪಿ "ಆಗಲಿ ನೀನು ನಿನ್ನ ಶುಲ್ಕ ತೆಗೆದುಕೊ, ನಾನು ಆರುತಿಂಗಳೊಳಗಾಗಿ ದೇವರಾಗುತ್ತೇನೆ" ಎನ್ನುತ್ತಾರೆ. ಇಂಥ ಮೋಸದ ವಿಧಾನಗಳು ನಮ್ಮ ಸಮಸ್ಯೆಗೆ ಎಂದೂ ಪರಿಹಾರವನ್ನು ಒದಗಿಸುವುದಿಲ್ಲ. ಈ ಯುಗದಲ್ಲಿ ಜೀವನದ ಸಮಸ್ಯೆಗಳನ್ನು ನಿಜವಾಗಿ ಪರಿಹರಿಸಕೊಳ್ಳಬಯಸುವವನು ಕೀರ್ತನ ಪದ್ಧತಿಯನ್ನು ಅನುಸರಿಸಬೇಕು. ಶಾಸ್ತ್ರಗಳು ಇದನ್ನೇ ಸೂಚಿಸಿವೆ.

ಹರೇರ್‌ನಾಮ ಹರೇರ್‌ನಾಮ ಹರೇರ್ ನಾಮೈವ ಕೇವಲಮ್ ।
ಕಲೌ ನಾಸ್ತಿ ಏವ, ನಾಸ್ತಿ ಏವ ನಾಸ್ತಿ ಏವ ಗತಿರ್ ಅನ್ಯಥಾ ॥

ಈ ಯುಗದಲ್ಲಿ ಅಂದರೆ ಕಲಿಯುಗದಲ್ಲಿ ಕೀರ್ತನವನ್ನುಳಿದು ಆತ್ಮ ಸಾಕ್ಷಾತ್ಕಾರ ಅಥವಾ ಪರಿಪೂರ್ಣತೆಯನ್ನು ಮಾನವನು ಇನ್ನಾವ ವಿಧಾನದಿಂದಲೂ ಸಾಧಿಸಲಾರನು. ಈ ಯುಗದಲ್ಲಿ ಕೀರ್ತನವೇ ಅತ್ಯವಶ್ಯವಾದುದು.

ಎಲ್ಲ ವೇದ ಶಾಸ್ತ್ರಗಳಲ್ಲಿ ಪರಮ ಸತ್ಯ ಸ್ವರೂಪನಾದ ವಿಷ್ಣುವನ್ನೇ ಕುರಿತು ಧ್ಯಾನ ಮಾಡಬೇಕು, ಮತ್ತಾವುದನ್ನು ಅಲ್ಲ ಎಂದು ದೃಢವಾಗಿ ಹೇಳಲಾಗಿದೆ. ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ಧ್ಯಾನ ಮಾರ್ಗಗಳನ್ನು ಹೇಳಲಾಗಿದೆ. ಮಾನವರು ಸಾವಿರಾರು ವರ್ಷ ಜೀವಿಸುತ್ತಿದ್ದ ಸತ್ಯ ಯುಗದಲ್ಲಿ ಧ್ಯಾನ ಯೋಗವು ಸಾಧ್ಯವಿತ್ತು. ಈಗ ಜನ ಇದನ್ನು ನಂಬಲಾರರು· ಹಿಂದಿನ ಯುಗಗಳಲ್ಲಿ ಮನುಷ್ಯರು ಸಾವಿರಾರು ವರ್ಷ ಬದುಕುತ್ತಿದ್ದರು. ಆ ಯುಗವನ್ನು ಸತ್ಯ ಯುಗವೆಂದು ಕರೆಯುತ್ತಿದ್ದರು· ಆಗ ಈ ಅದ್ಭುತ ಧ್ಯಾನ ಯೋಗವು ಸಾಧ್ಯವಿತ್ತು. ಆ ಯುಗದಲ್ಲಿ ಮಹಾಯೋಗಿಯಾದ ವಾಲ್ಮೀಕಿ ಮುನಿಯು ಅರುವತ್ತು ಸಾವಿರ ವರ್ಷ ಧ್ಯಾನಮಗ್ನನಾಗಿದ್ದನು. ಇದು ಬಹು ದೀರ್ಘ ಕಾಲದ ಸಾಧನ. ಈ ಯುಗದಲ್ಲಿ ಇದು ಅಸಾಧ್ಯ. ಆದರೆ ಒಬ್ಬನು ಸುಮ್ಮನೆ ಮೋಸ ಮಾಡಲು ಪ್ರಯತ್ನಿಸಿದರೆ ಅದು ಬೇರೆ ವಿಷಯ. ನಿಜವಾಗಿ ಇಂಥ ಧ್ಯಾನ ಯೋಗವನ್ನು ಯಾರಾದರೂ ಮಾಡ ಬಯಸಿದರೂ ಬಹು ದೀರ್ಘಕಾಲ ಹಿಡಿಯುವುದು. ಅನಂತರದ ಯುಗವೆಂದರೆ ತ್ರೇತಾ ಯುಗದಲ್ಲಿ ಸಾಕ್ಷಾತ್ಕಾರವನ್ನು ಪಡೆಯಲು ನಾನಾ ಬಗೆಯ ಯಜ್ಞ ಯಾಗಾದಿಗಳನ್ನು ಮಾಡಬೇಕೆಂದು ವೇದಗಳಲ್ಲಿ ಹೇಳಿದೆ. ಅನಂತರದ ದ್ವಾಪರ ಯುಗದಲ್ಲಿ ಮಂದಿರಗಳಲ್ಲಿ ಭಗವಂತನನ್ನು ಅರ್ಚಿಸುವುದು ವಿಧಾನವಾಗಿತ್ತು. ಇಂದಿನ ಈ ಕಲಿ ಯುಗದಲ್ಲಿ ಹರಿಕೀರ್ತನ ಕ್ರಮದಿಂದ ಎಂದರೆ ಪರಮ ದೇವೋತ್ತಮ ಪುರುಷನಾದ ಹರಿಯ, ಕೃಷ್ಣನ ಸ್ತೋತ್ರದಿಂದ ಅದೇ ಫಲವನ್ನು ಪಡೆದುಕೊಳ್ಳಬಹುದಾಗಿದೆ.

ಇನ್ನಾವ ಕೀರ್ತನವನ್ನೂ ಹೇಳಿಲ್ಲ. ಈ ಹರಿ ಕೀರ್ತನ ಪದ್ಧತಿಯನ್ನು ಐನೂರು ವರ್ಷಗಳ ಹಿಂದೆ ಬಂಗಾಲದಲ್ಲಿ ಶ್ರೀ ಚೈತನ್ಯರು ಪ್ರಾರಂಭಿಸಿದರು. ಬಂಗಾಲದಲ್ಲಿ ವೈಷ್ಣವರಿಗೂ ಶಾಕ್ತರಿಗೂ ಸದಾ ಪೈಪೋಟಿ ಇರುತ್ತದೆ. ಶಾಕ್ತರು ಕಾಳಿ ಕೀರ್ತನ ಎಂಬ ವಿಶಿಷ್ಟ ಕೀರ್ತನ ಪದ್ಧತಿಯೊಂದನ್ನು ಬಳಕೆಗೆ ತಂದಿದ್ದಾರೆ. ಆದರೆ ವೇದ ಶಾಸ್ತ್ರಗಳಲ್ಲಿ ಕಾಳಿ ಕೀರ್ತನವನ್ನು ಎಲ್ಲಿಯೂ ಹೇಳಿಲ್ಲ. ಕೀರ್ತನ ಎಂದರೆ ಹರಿ ಕೀರ್ತನವೊಂದೇ. "ಓಹೋ ನೀವು ವೈಷ್ಣವರು ನೀವು ಹರಿ ಕೀರ್ತನವನ್ನು ಮಾಡಿ, ನಾನು ಶಿವ ಕೀರ್ತನ ಅಥವಾ ದೇವೀ ಕೀರ್ತನ ಅಥವಾ ಗಣೇಶ ಕೀರ್ತನ ಮಾಡುತ್ತೇನೆ" ಎಂದು ಯಾರೂ ಹೇಳುವಂತಿಲ್ಲ. ಅದು ಹಾಗಿಲ್ಲ. ವೇದಶಾಸ್ತ್ರಗಳು ಹರಿಕೀರ್ತನವನ್ನುಳಿದು ಇನ್ನಾವ ಕೀರ್ತನವನ್ನು ಪುರಸ್ಕರಿಸುವುದಿಲ್ಲ. ಕೀರ್ತನ ಎಂದರೆ ಹರಿ ಕೀರ್ತನವೇ, ಕೃಷ್ಣನ ಗುಣಗಾನವೇ.

ಹೀಗೆ ಈ ಹರಿ ಕೀರ್ತನವು ಬಹಳ ಸರಳವಾದುದು. ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ ಹರೇ ರಾಮ ಹರೇ ರಾಮ, ರಾಮ ರಾಮ, ಹರೇ ಹರೇ, ನಿಜವಾಗಿ ಇವು ಮೂರೇ ಪದಗಳು ಹರೇ, ಕೃಷ್ಣ, ಮತ್ತು ರಾಮ. ಆದರೆ ಅವುಗಳನ್ನು ಕೀರ್ತನಕ್ಕೆ ಅನುಕೂಲವಾಗುವಂತೆ ಸೊಗಸಾಗಿ ಹೊಂದಿಸಲಾಗಿದೆ. ಪ್ರತಿಯೊಬ್ಬನೂ ಈ ಮಂತ್ರವನ್ನು ಗ್ರಹಿಸಿ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ ಎಂದು ಕೀರ್ತಿಸಬಹುದು. ನಾವು ಈ ಆಂದೋಲನವನ್ನು ಪಾಶ್ಚಾತ್ಯ ದೇಶಗಳಲ್ಲಿ ಪ್ರಾರಂಭಿಸಿರುವುದರಿಂದ ಯೂರೋಪಿನವರು, ಅಮೆರಿಕದವರು, ಆಫ್ರಿಕನ್ನರು, ಈಜಿಪ್ಟಿನವರು ಮತ್ತು ಜಪಾನಿನ ಜನಗಳೆಲ್ಲರೂ ಈ ಮಂತ್ರ ಜಪ ಮಾಡುತ್ತಿದ್ದಾರೆ. ಯಾವ ತೊಂದರೆ ಇಲ್ಲ. ಅವರು ಸಂತೋಷದಿಂದ ಕೀರ್ತನೆ ಮಾಡುತ್ತಿದ್ದಾರೆ ಮತ್ತು ಫಲ ಪಡೆಯುತ್ತಿದ್ದಾರೆ. ತೊಂದರೆ ಏನಿದೆ ಹೇಳಿ ? ನಾವು ಈ ಕೀರ್ತನವನ್ನು ಉಚಿತವಾಗಿ ಹಂಚುತ್ತಿದ್ದೇವೆ. ಇದು ಬಲು ಸರಳವಾದದ್ದು. ಕೇವಲ ಕೀರ್ತನೆ ಮಾಡಿ ಆತ್ಮ ಸಾಕ್ಷಾತ್ಕಾರ, ಬ್ರಹ್ಮ ಸಾಕ್ಷಾತಾರವನ್ನು ಪಡೆಯಬಹುದು. ಬ್ರಹ್ಮ ಸಾಕ್ಷಾತ್ಕಾರವಾದ ಮೇಲೆ ಪ್ರಕೃತಿ ಸಾಕ್ಷಾತ್ಕಾರವೂ ಅದರಲ್ಲಿ ಸೇರಿರುತ್ತದೆ. ಉದಾಹರಣೆಗೆ: ಒಬ್ಬನು ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಬತ್ತು, ಮತ್ತು ಸೊನ್ನೆ ಇವುಗಳನ್ನು ಕಲಿತರೆ ಅವನು ಇಡೀ ಗಣಿತವನ್ನು ಕಲಿತಂತೆ. ಏಕೆಂದರೆ ಗಣಿತ ಎಂದರೆ ಈ ಹತ್ತು ಅಂಕಿಗಳ ಸ್ಥಾನ ಬದಲಾಯಿಸುವುದು ಮಾತ್ರ ಅಷ್ಟೆ ತಾನೆ! ಹಾಗೆಯೇ ಕೃಷ್ಣನನ್ನು ಕುರಿತು ಅಧ್ಯಯನ ಮಾಡಿದರೆ ಎಲ್ಲ ಜ್ಞಾನವು ಪರಿಪೂರ್ಣವಾದಂತೆ. ಕೃಷ್ಣನು ಹರೇಕೃಷ್ಣ ಮಂತ್ರ ಜಪದ ಸುಲಭ ಮಾರ್ಗದಿಂದ ತಿಳಿಯಲ್ಪಡುತ್ತಾನೆ. ಹೀಗಿರುವಾಗ ಈ ಸದವಕಾಶವನ್ನು ಏಕೆ ಪಡೆದುಕೊಳ್ಳಬಾರದು ?

ಮಾನವನಿಗೆ ದೊರೆತ ಈ ಸದವಕಾಶದ ಲಾಭ ಪಡೆಯಬೇಕು. ಇದು ಬಲು ಪ್ರಾಚೀನ ಮತ್ತು ವೈಜ್ಞಾನಿಕವಾದದ್ದು. ಇದು ಕೇವಲ ಮೂರು ನಾಲ್ಕು ವರ್ಷ ಇದ್ದು ಹೋಗುವಂಥ ಕಲ್ಪಿತ ವಸ್ತುವಲ್ಲ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ "ಈ ತತ್ವಜ್ಞಾನವು ಅವ್ಯಯ ಮತ್ತು ನಾಶವಾಗುವುದಲ್ಲ" ಎಂದು ಹೇಳುತ್ತಾನೆ. ಅದು ತಾತ್ಕಾಲಿಕವಾಗಿ ಆಚ್ಛಾದಿತವಾಗಬಹುದು, ಆದರೆಂದೂ ನಾಶವಾಗುವುದಿಲ್ಲ. ಅಂತೆಯೇ ಇದನ್ನು ಅವ್ಯಯಂ ಎನ್ನುತ್ತಾರೆ. ವ್ಯಯ ಎಂದರೆ

"ತೀರಿ ಹೋಗುವುದು." ಉದಾಹರಣೆಗೆ: ಒಬ್ಬನಲ್ಲಿ ನೂರು ರೂಪಾಯಿ ಇರಬಹುದು. ಅವನು ಒಂದೊಂದನ್ನೇ ಖರ್ಚು ಮಾಡುತ್ತಾ ಹೋದರೆ ಒಂದು ದಿನ ಅದು ಇಲ್ಲದಂತಾಗುತ್ತದೆ. ಇದೇ ವ್ಯಯ, ಎಂದರೆ ತೀರಿಕೆ. ಆದರೆ ಕೃಷ್ಣ ಪ್ರಜ್ಞೆ ಹಾಗಲ್ಲ. ನೀವು ಕೃಷ್ಣ ಪ್ರಜ್ಞೆಯನ್ನು ಬೆಳೆಸಿಕೊಂಡರೆ, ಅದು ವೃದ್ಧಿ ಹೊಂದುತ್ತಲೇ ಹೋಗುತ್ತದೆ. ಶ್ರೀ ಚೈತನ್ಯ ಮಹಾ ಪ್ರಭುಗಳು ಆನಂದಾಂಬುಧಿವರ್ಧನಂ ಎಂದು ದೃಢಪಡಿಸಿದ್ದಾರೆ. ಆನಂದ ಎಂದರೆ (ಸುಖ) "ದಿವ್ಯಾನಂದ" ಮತ್ತು ಅಂಬುಧಿ ಎಂದರೆ "ಸಾಗರ". ಭೌತಿಕ ಜಗತ್ತಿನಲ್ಲಿ ಸಮುದ್ರವು ವೃದ್ಧಿಯಾಗುವುದಿಲ್ಲ. ಇದನ್ನು ನಾವು ಕಂಡಿದ್ದೇವೆ. ಆದರೆ ಕೃಷ್ಣಪ್ರಜ್ಞೆಯನ್ನು ರೂಢಿಸಿಕೊಂಡರೆ ದಿವ್ಯಾನಂದವು ಏಕ ಪ್ರಕರವಾಗಿ ಹೆಚ್ಚುತ್ತಲೇ ಹೋಗುತ್ತದೆ. ಆನಂದಾಂಬುಧಿ ವರ್ಧನಂ. ಈ ವಿಧಾನವು ಬಲು ಸರಳವಾದುದು ಎಂದು ನಾನು ಪ್ರತಿಯೊಬ್ಬರಿಗೂ ಪದೇ ಪದೇ ಹೇಳಬಯಸುತ್ತೇನೆ. ಯಾರು ಬೇಕಾದರೂ ಎಲ್ಲಿ ಬೇಕಾದರೂ ಸುಂಕತೆರದೆ, ಯಾವ ಹಾನಿಯೂ ಇಲ್ಲದೆ, ಕೀರ್ತನೆ ಮಾಡ ಬಹುದು. ಆದರೆ ದೊರೆಯುವ ಲಾಭ ಮಾತ್ರ ಅಪಾರವಾದುದು.

ಶ್ರೀ ಚೈತನ್ಯ ಮಹಾ ಪ್ರಭುಗಳು ಈ ಕೀರ್ತನ ಆಂದೋಲನದ ಬಗ್ಗೆ ತಮ್ಮ ಶಿಕ್ಷಾಷ್ಟಕ ದಲ್ಲಿ ವಿವರಿಸಿದ್ದಾರೆ. ಶಿಕ್ಷ ಎಂದರೆ "ಉಪದೇಶ" ಮತ್ತು ಅಷ್ಟಕ ಎಂದರೆ "ಎಂಟು". ಅವರ ಈ ಕೃಷ್ಣಾ ಪ್ರಜ್ಞಾ ಆಂದೋಲನವನ್ನು ಅರಿತುಕೊಳ್ಳಲು ಸಹಾಯಕವಾಗುವ ಎಂಟು ಶ್ಲೋಕ ಗಳನ್ನು ನಮಗೆ ನೀಡಿದ್ದಾರೆ ಮತ್ತು ಈ ಉಪದೇಶಗಳಲ್ಲಿ ಮೊದಲನೆಯದನ್ನು ನಿಮಗೆ ವಿವರಿ ಸುತ್ತೇನೆ. ಚೈತನ್ಯರು, **ಚೇತೋ- ದರ್ಪಣ- ಮಾರ್ಜನಂ** – ಮನುಷ್ಯನು ಹೃದಯವನ್ನು ಶುದ್ಧಿಗೊಳಿಸಿಕೊಳ್ಳಬೇಕು. ನಾನು ಇದನ್ನು ಅನೇಕ ಸಲ ವಿವರಿಸಿದ್ದೇನೆ. ಇದು ಬೇಸರ ತರು ವುದಲ್ಲ. ಇದು ಕೂಡ ಹರೇಕೃಷ್ಣ ಮಂತ್ರ ಜಪಿಸಿದ ಹಾಗೆ, ಇದರಿಂದ ಆಯಾಸವಾಗುವುದಿಲ್ಲ. ನಮ್ಮ ಶಿಷ್ಯರು ದಿನದ ಇಪ್ಪತ್ನಾಲ್ಕು ಗಂಟೆಯೂ ಹರೇಕೃಷ್ಣ ಮಂತ್ರವನ್ನು ಜಪಿಸಬಹುದು. ಅವರಿಗೆ ಆಯಾಸವೇ ಎನಿಸುವುದಿಲ್ಲ. ಅವರು ನರ್ತನವನ್ನು, ಕೀರ್ತನೆಯನ್ನು ಹಾಗೆಯೇ ಮುಂದುವರಿಸುತ್ತಾರೆ. ಯಾರು ಬೇಕಾದರೂ ಇದನ್ನು ಪ್ರಯತ್ನಿಸಬಹುದು. ಇದು ಭೌತಿಕ ವಾದುದಲ್ಲ. ಆದುದರಿಂದ ಈ ಹರೇಕೃಷ್ಣ ಮಂತ್ರ ಜಪದಿಂದ ಯಾರಿಗೂ ಆಯಾಸವಾಗು ವುದಿಲ್ಲ. ಭೌತಿಕ ಜಗತ್ತಿನಲ್ಲಿ ಯಾವುವೇ ಇಷ್ಟ ಬಂದ ಹೆಸರನ್ನು ಅಥವಾ ಮತ್ತಾವುದನ್ನೋ ಮೂರು ನಾಲ್ಕು ಸಲ ಅಥವಾ ಹತ್ತು ಸಲ ಪುನರುಚ್ಚರಿಸಿದರೆ ಆಯಾಸವೆನಿಸುತ್ತದೆ. ಇದು ಸತ್ಯ ಸಂಗತಿ. ಆದರೆ ಹರೇಕೃಷ್ಣ ಎಂಬುದು ಭೌತಿಕವಾದುದಲ್ಲ. ಆದುದರಿಂದ ಈ ಮಂತ್ರ ಜಪಿಸಿದರೆ ಕಿಂಚಿತ್ತೂ ಆಯಾಸವಾಗುವುದಿಲ್ಲ. ಜಪಿಸಿದಷ್ಟು ಮನುಷ್ಯನ ಹೃದಯವು ಸಾಂಸಾರಿಕ ಕಶ್ಮಲ ಕಳೆದು ಹೆಚ್ಚು ಹೆಚ್ಚು ಶುದ್ಧಿಗೊಳ್ಳುತ್ತದೆ ಮತ್ತು ಜಪಿಸುವವನ ಜೀವನದಲ್ಲಿ ಈ ಪ್ರಪಂಚದ ಅನೇಕ ಸಮಸ್ಯೆಗಳು ತಾವಾಗಿಯೇ ಪರಿಹಾರವನ್ನು ಕಂಡುಕೊಳ್ಳುತ್ತವೆ.

ನಮ್ಮ ಜೀವನದ ಸಮಸ್ಯೆಗಳೇನು ? ನಮಗದು ಗೊತ್ತಿಲ್ಲ. ಜೀವನದ ನಿಜವಾದ ಸಮಸ್ಯೆಯ ಬಗ್ಗೆ ಇಂದಿನ ಶಿಕ್ಷಣ ಎಂದೂ ಬೆಳಕು ಚೆಲ್ಲಲಾರದು. ಭಗವದ್ಗೀತೆಯಲ್ಲಿ ಈ ವಿಷಯ ಹೇಳಲಾಗಿದೆ. ಶಿಕ್ಷಣ ಪಡೆದು ಜ್ಞಾನದ ಮುನ್ನಡೆಯಲ್ಲಿರುವವರು ಜೀವನದ ಸಮಸ್ಯೆ ಏನೆಂಬು ದನ್ನು ತಿಳಿದುಕೊಳ್ಳಬೇಕು. ಸಮಸ್ಯೆ ಏನು ಎಂಬುದನ್ನು ಭಗವದ್ಗೀತೆಯಲ್ಲಿ ಹೇಳಲಾಗಿದೆ.

ಜನನ, ಮರಣ, ವೃದ್ಧಾಪ್ಯ ಮತ್ತು ಜಾಡ್ಯ ಇವುಗಳಿಂದ ಉಂಟಾಗುವ ಅನನುಕೂಲಗಳನ್ನು ಸಧಾ ಗಮನದಲ್ಲಿಡಬೇಕು. ದುರ್ದೈವದಿಂದ ಯಾರೂ ಈ ಕಡೆಗೆ ಗಮನ ಹರಿಸುತ್ತಿಲ್ಲ. ಮನುಷ್ಯನಿಗೆ ರೋಗ ಬಂದಾಗ "ಸರಿ, ನಾನು ವೈದ್ಯನಲ್ಲಿಗೆ ಹೋಗುತ್ತೇನೆ. ಆತನು ನನಗೆ ಯಾವುದೋ ಔಷಧ ಕೊಡುತ್ತಾನೆ. ನನ್ನ ರೋಗ ವಾಸಿಯಾಗುತ್ತದೆ" ಎಂದು ಭಾವಿಸುತ್ತಾನೆ. ಅವನು ಈ ಸಮಸ್ಯೆಯ ಬಗ್ಗೆ ಗಂಭೀರವಾಗಿ ಯೋಚಿಸುವುದಿಲ್ಲ. "ನಾನೇನೂ ಈ ರೋಗ ಬರಲಿ ಎಂದು ಬಯಸದ್ದಿಲ್ಲ. ಅದೇಕೆ ಬರಬೇಕು ? ಅದರಿಂದ ಮುಕ್ತನಾಗುವುದು ಸಾಧ್ಯ ವಿಲ್ಲವೇ ?" ಅವನು ಹೀಗೆ ಎಂದೂ ಚಿಂತಿಸುವುದಿಲ್ಲ. ಅವನ ಬುದ್ಧಿ ಮಟ್ಟವು ಪಶು ಬುದ್ಧಿ ಯಷ್ಟು ಕೆಳಮಟ್ಟದ್ದಾಗಿರುವುದರಿಂದಲೇ ಅವನು ಹಾಗೆ ಚಿಂತಿಸುತ್ತಾನೆ. ಪ್ರಾಣಿಯೂ ದುಃಖ ಅನುಭವಿಸುತ್ತದೆ, ಆದರೆ ಅದಕ್ಕೆ ಬುದ್ಧಿ ಇಲ್ಲ. ಒಂದು ಪ್ರಾಣಿಯನ್ನು ಕೊಲೆ ಮನೆಗೆ ತಂದಾಗ ತನಗಿಂತ ಮುಂಚೆ ಬಂದ ಪ್ರಾಣಿಯ ವಧೆ ನಡೆಯುತ್ತಿರುವುದನ್ನು ನೋಡಿಯೂ ಅದು ಅಲ್ಲಿ ಹಾಯಾಗಿ ಹುಲ್ಲು ಮೇಯುತ್ತಿರುತ್ತದೆ. ಇದು ಪಶು ಜೀವನ. ಮುಂದಿನ ಸರದಿ ತನ್ನದು ಎಂಬುದು ಅದಕ್ಕೆ ತಿಳಿಯುವುದಿಲ್ಲ. ನಾನಿದನ್ನು ಕಂಡಿದ್ದೇನೆ. ಕಾಳಿ ಮಂದಿರದಲ್ಲಿ ಒಂದು ಆಡು ಕೊಲೆಗಾಗಿ ಕಾದು ನಿಂತಿತ್ತು, ಮತ್ತೊಂದು ಹಾಯಾಗಿ ಹುಲ್ಲು ಮೇಯುತ್ತಿತ್ತು.

ಇದೇ ಪ್ರಕಾರ, "ಈ ಜಗತ್ತಿನಲ್ಲಿ ಅತ್ಯಂತ ಆಶ್ಚರ್ಯದ ಸಂಗತಿ ಯಾವುದು ನೀನಿದನ್ನು ಹೇಳುವಿಯಾ" ? ಎಂದು ಯಮರಾಜನು ಯುಧಿಷ್ಠಿರ ಮಹರಾಜನನ್ನು ಕೇಳಿದನು. "ಹೇಳು ತ್ತೇನೆ. ಪ್ರತಿಕ್ಷಣವೂ ತನ್ನ ಸ್ನೇಹಿತರು, ತನ್ನ ತಂದೆ ತಾಯಿಗಳು, ತನ್ನ ಬಂಧುಬಳಗದವರು ಸತ್ತಿರುವುದನ್ನು ಮಾನವನು ಕಾಣುತ್ತಾನೆ. ಆದರೆ "ನಾನು ಮಾತ್ರ ಚಿರಂಜೀವಿ" ಎಂದು ಅವನು ಭಾವಿಸುತ್ತಾನೆ. ಇದೇ ಅತ್ಯಂತ ಆಶ್ಚರ್ಯದ ಸಂಗತಿ" ಎಂದು ಯುಧಿಷ್ಠಿರ ಮಹಾ ರಾಜನು ಉತ್ತರಿಸಿದನು. ಮರುಕ್ಷಣ ತಾನು ಹೇಗೆ ಕೊಲ್ಲಲ್ಪಡುವೆನೆಂಬುದನ್ನು ಪ್ರಾಣಿಯು ಹೇಗೆ ಅರಿಯದೋ ಹಾಗೆಯೇ ಮಾನವನು ಕೂಡ ತಾನು ಸಾಯುವನೆಂದು ಅರಿಯುವುದಿಲ್ಲ. ಅವನು ಹುಲ್ಲಿನಿಂದ ತೃಪ್ತನಾಗಿದ್ದಾನೆ ಅಷ್ಟೆ, ಅವನು ಇಂದ್ರಿಯ ತೃಪ್ತಿಯಿಂದ ಸಂತುಷ್ಟನಾಗಿ ದ್ದಾನೆ. ತಾನು ಸಾಯುವೆನೆಂದು ಅವನು ಅರಿತುಕೊಂಡಿಲ್ಲ.

ನನ್ನ ತಂದೆ ಸತ್ತುಹೋಗಿದ್ದಾರೆ, ನನ್ನ ತಾಯಿ ಸತ್ತು ಹೋಗಿದ್ದಾಳೆ, ಅವನು ಸತ್ತಿ ದ್ದಾನೆ, ಇವನು ಸತ್ತಿದ್ದಾನೆ, ನಾನೂ ಸಾಯುತ್ತೇನೆ. ಹಾಗಾದರೆ ಮರಣಾನಂತರ ಏನು ? ನನಗೆ ಗೊತ್ತಿಲ್ಲ. ಇದೇ ಸಮಸ್ಯೆ. ಜನ ಸಮಸ್ಯೆಯನ್ನು ಗಂಭೀರವಾಗಿ ಯೋಚಿಸುತ್ತಿಲ್ಲ. ಆದರೆ ಇದನ್ನರಿಯುವುದೇ ನಿಜವಾದ ಶಿಕ್ಷಣ ಎಂದು ಭಗವದ್ಗೀತೆ ತಿಳಿಸುತ್ತದೆ. ನಾವು ಸಾಯಬಯಸ ದಿದ್ದರೂ ಸಾವು ಏಕೆ ಬರುತ್ತದೆ ಎಂಬುದನ್ನು ಕುರಿತು ವಿಚಾರ ಮಾಡುವುದೇ ನಿಜವಾದ ಶಿಕ್ಷಣ. ಅದೇ ನಿಜವಾದ ಶೋಧನೆ. ನಾವು ಮುದುಕರಾಗಬಯಸುವುದಿಲ್ಲ. ಆದರೆ ನಮಗೆ ವೃದ್ಧಾಪ್ಯ ಏಕೆ ಬರುತ್ತದೆ ? ಅನೇಕ ಸಮಸ್ಯೆಗಳಿವೆ, ಆದರೆ ಇದು ಅವೆಲ್ಲವುಗಳ ಸಾರ ಭೂತವಾದದ್ದು.

ಈ ಸಮಸ್ಯೆಯನ್ನು ಪರಿಹರಿಸಲು ಶ್ರೀ ಚೈತನ್ಯ ಮಹಾಪ್ರಭುಗಳು ಹರೇ ಕೃಷ್ಣ ಮಂತ್ರ ಜಪ ಹೇಳಿದ್ದಾರೆ. ಈ ಹರೇಕೃಷ್ಣ ಮಂತ್ರಜಪದಿಂದ ನಮ್ಮ ಹೃದಯವು ಶುದ್ಧಿಗೊಂಡೊಡನೆಯೇ

ಸಮಸ್ಯಾ ರೂಪವಾದ ನಮ್ಮ ಭೌತಿಕ ಅಸ್ತಿತ್ವದ ಜ್ವಾಲಾಗ್ನಿಯು ನಂದಿ ಹೋಗುತ್ತದೆ. ಅದು ಹೇಗೆ ನಂದಿಹೋಯಿತು ? ನಮ್ಮ ಹೃದಯವು ಶುದ್ಧವಾದಾಗ, ನಾವು ಈ ಭೌತಿಕ ಜಗತ್ತಿಗೆ ಸೇರಿದವರಲ್ಲ ಎಂಬುದನ್ನು ನಾವು ಅರಿಯುತ್ತೇವೆ. ಜನ ತಾವು ಈ ಪ್ರಪಂಚಕ್ಕೆ ಸೇರಿದವರೆಂದು ತಿಳಿದಿರುವುದರಿಂದಲೇ, "ನಾನು ಭಾರತೀಯ, ನಾನು ಆಂಗ್ಲ, ನಾನು ಇದು, ನಾನು ಅದು" ಎಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ಮನುಷ್ಯನು ಹರೇ ಕೃಷ್ಣ ಮಂತ್ರ ಜಪಿಸಿದರೆ, ತಾನು ಈ ಭೌತಿಕ ದೇಹವಲ್ಲ ಎಂಬುದನ್ನು ಅರಿತುಕೊಳ್ಳುತ್ತಾನೆ. "ನಾನು ಈ ಭೌತಿಕ ದೇಹಕ್ಕೆ ಅಥವಾ ಭೌತಿಕ ಪ್ರಪಂಚಕ್ಕೆ ಸೇರಿದವನಲ್ಲ, ನಾನು ಜೀವಾತ್ಮ, ಪರಮಾತ್ಮನ ವಿಭಿನ್ನಾಂಶ. ನಾನು ಪರಮಾತ್ಮನಿಗೆ ನಿತ್ಯ ಸಂಬಂಧಿ, ಈ ಭೌತಿಕ ಪ್ರಪಂಚಕ್ಕೂ ನನಗೂ ಯಾವ ಸಂಬಂಧವಿಲ್ಲ." ಹೀಗೆ ಅರಿಯುವುದೇ ಮೋಕ್ಷ, ಇದೇ ಜ್ಞಾನ. ನನಗೂ ಈ ಭೌತಿಕ ಪ್ರಪಂಚಕ್ಕೂ ಯಾವ ಸಂಬಂಧವಿಲ್ಲ ಎಂದು ತಿಳಿದರೆ ನಾನು ಮುಕ್ತ. ಈ ಜ್ಞಾನವನ್ನೇ **ಬ್ರಹ್ಮಭೂತ** ಎಂದು ಕರೆಯಲಾಗಿದೆ

ಈ ಸಾಕ್ಷಾತ್ಕಾರ ಹೊಂದಿದವನು ಮಾಡಬೇಕಾದ ಕರ್ತವ್ಯ ಕರ್ಮವೇನೂ ಇಲ್ಲ. ನಾವೀಗ ಭೌತಿಕ ಜಗತ್ತಿಗೆ ಸೇರಿದವರೆಂದು ತಿಳಿದಿದ್ದರಿಂದ ನಮಗೆ ಅನೇಕ ಕರ್ತವ್ಯಗಳು ಅಂಟಿಕೊಂಡಿವೆ. ನಾವು ಆತ್ಮಸಾಕ್ಷಾತ್ಕಾರ ಹೊಂದದ ತನಕ ನಮಗೆ ಅನೇಕ ಕರ್ತವ್ಯ ಕರ್ಮಗಳೂ, ಋಣಗಳೂ ಇವೆ ಎಂದು ಶ್ರೀಮದ್ಭಾಗವತವು ಹೇಳುತ್ತದೆ. ನಾವು ದೇವತೆಗಳಿಗೆ ಋಣಿಗಳಾಗಿದ್ದೇವೆ. ದೇವತೆಗಳು ಕೇವಲ ಕಾಲ್ಪನಿಕರಲ್ಲ. ಅವರು ಸತ್ಯ ಸ್ವರೂಪರು. ಅವರು ಸೂರ್ಯ, ಚಂದ್ರ, ವಾಯುಗಳ ನಿಯಂತ್ರಕ ಅಭಿಮಾನಿ ದೇವತೆಗಳಾಗಿರುತ್ತಾರೆ. ಸರಕಾರೀ ಇಲಾಖೆಗಳ ನಿರ್ದೇಶಕರಿದ್ದ ಹಾಗೆ. ಶಾಖೋತ್ಪತ್ತಿ ಇಲಾಖೆಗೆ ಸೂರ್ಯದೇವನಿದ್ದಾನೆ, ವಾಯು ಇಲಾಖೆಗೆ ವರುಣನಿದ್ದಾನೆ, ಹೀಗೆಯೇ ಅನೇಕ ವಿಭಾಗದ ದೇವತೆಗಳಿದ್ದಾರೆ. ವೇದಗಳಲ್ಲಿ ಇವರನ್ನು ನಿಯಾಮಕ ದೇವತೆಗಳೆಂದು ಕರೆಯಲಾಗಿದೆ. ನಾವು ಅವರನ್ನು ಉಪೇಕ್ಷಿಸುವಂತಿಲ್ಲ. ಇದಲ್ಲದೆ ನಮಗೆ ಜ್ಞಾನದಾತರಾದ ಅನೇಕ ಮಹರ್ಷಿಗಳೂ ತತ್ವದರ್ಶಿಗಳೂ ಇದ್ದಾರೆ, ಅವರಿಗೂ ನಾವು ಋಣಿಗಳಾಗಿದ್ದೇವೆ. ಹೀಗೆ ನಾವು ಜನ್ಮವೆತ್ತಿದೊಡನೆಯೇ ಅನೇಕ ಜೀವರುಗಳಿಗೆ ಋಣಿಗಳಾಗಿಯೇ ಹುಟ್ಟುತ್ತೇವೆ. ಈ ಎಲ್ಲ ಋಣಗಳನ್ನು ತೀರಿಸುವುದು ಅಸಾಧ್ಯವಾದ ಮಾತು. ಆದುದರಿಂದ ಜೀವನು ಕೃಷ್ಣನ ಪಾದಾರವಿಂದದಲ್ಲಿ ಶರಣು ಹೋಗಬೇಕೆಂದು ವೇದ ಶಾಸ್ತ್ರಗಳು ಹೇಳುತ್ತವೆ. "ಜೀವನು ನನ್ನನ್ನು ಶರಣು ಹೋದರೆ, ಮತ್ತಾರಿಗೂ ಶರಣಾಗಬೇಕಿಲ್ಲ" ಎಂದು ಕೃಷ್ಣನು ಹೇಳುತ್ತಾನೆ.

ಅಂತೆಯೇ ಕೃಷ್ಣಪ್ರಜ್ಞೆಯುಳ್ಳ ಭಕ್ತರು ಕೃಷ್ಣನಿಗೆ ಶರಣು ಹೋಗಿದ್ದಾರೆ. ಶ್ರವಣ ಮಾಡುವುದು, ಕೀರ್ತನ ಮಾಡುವುದು ಇದೇ ಪ್ರಾರಂಭ. **ಶ್ರವಣಂ ಕೀರ್ತನಂ ವಿಷ್ಣೋಃ** ಈ ಕೀರ್ತನ ವಿಧಾನವನ್ನು ದಯವಿಟ್ಟು ಅಂಗೀಕರಿಸಿರಿ ಎಂದು ನಾವು ಪ್ರತಿಯೊಬ್ಬರನ್ನೂ ಕಳಕಳಿಯಿಂದ ಮತ್ತು ವಿನಯಪೂರ್ವಕವಾಗಿ ಕೇಳಿಕೊಳ್ಳುತ್ತೇವೆ. ಈ ಕೃಷ್ಣ ಪ್ರಜ್ಞಾ ಆಂದೋಲನವನ್ನು ಶ್ರೀ ಚೈತನ್ಯರು ಬಂಗಾಲದಲ್ಲಿ ಐದು ನೂರು ವರ್ಷಗಳ ಹಿಂದೆ ಪ್ರಾರಂಭಿಸಿದರು. ಈಗ ಇಡೀ ಭಾರತದಲ್ಲಿ ಮತ್ತು ವಿಶೇಷವಾಗಿ ಬಂಗಾಲದಲ್ಲಿ ಚೈತನ್ಯ ಮಹಾಪ್ರಭುಗಳ ಲಕ್ಷಾವಧಿ ಅನುಯಾಯಿಗಳಿದ್ದಾರೆ. ಈಗ ಇದು ಪಾಶ್ಚಾತ್ಯ ದೇಶಗಳಲ್ಲಿ ಪ್ರಾರಂಭವಾಗುತ್ತಿದೆ.

ಆದಕಾರಣ ಇದನ್ನು ಗಂಭೀರಚಿತ್ತದಿಂದ ತಿಳಿದುಕೊಳ್ಳಿರಿ. ನಾವು ಯಾವ ಧರ್ಮವನ್ನೂ ಟೀಕಿಸುವುದಿಲ್ಲ. ನೀವು ಆ ರೀತಿ ಭಾವಿಸಕೂಡದು. ಇನ್ನಾವುದೇ ಧರ್ಮಪ್ರಕ್ರಿಯೆಯನ್ನು ಟೀಕಿಸಲು ನಮಗೆ ಯಾವ ಹಕ್ಕೂ ಇಲ್ಲ. ಕೃಷ್ಣ ಪ್ರಜ್ಞೆಯು ಜನತೆಗೆ ಅತ್ಯಂತ ಪವಿತ್ರ ಧರ್ಮವನ್ನು-ಕೃಷ್ಣಪ್ರೇಮವನ್ನು ನೀಡುತ್ತಿದೆ. ಅಷ್ಟೆ. ದೇವರನ್ನು ಪ್ರೀತಿಸಿ ಎಂದು ಮಾತ್ರ ನಾವು ಬೋಧಿಸುತ್ತಿದ್ದೇವೆ. ಪ್ರೀತಿಯನ್ನು ಪ್ರತಿಯೊಬ್ಬರೂ ಮಾಡುತ್ತಿದ್ದಾರೆ. ಆದರೆ ಅದು ಸ್ಥಾನ ಪಲ್ಲಟವಾಗಿದೆ. ನಾವು ಈ ಹುಡಗನನ್ನೋ, ಆ ಹುಡುಗಿಯನ್ನೋ ಅಥವಾ ಈ ದೇಶವನ್ನೋ ಅಥವಾ ಆ ಸಮಾಜವನ್ನೋ, ಅಷ್ಟೇಕೆ ಬೆಕ್ಕು ನಾಯಿಗಳನ್ನೂ ಪ್ರೀತಿಸುತ್ತಿದ್ದೇವೆ. ಆದರೆ ನಮಗೆ ತೃಪ್ತಿ ದೊರಕಿಲ್ಲ. ಅಂತೆಯೇ ನಾವು ನಮ್ಮ ಪ್ರೀತಿಯನ್ನು ಭಗವಂತನ ಕಡೆಗೆ ತಿರುಗಿಸಬೇಕು. ದೇವರಲ್ಲಿ ಪ್ರೀತಿ ಇರಿಸಲು ಬಂದರೆ, ಮಾನವನು ಸುಖಿಯಾಗುತ್ತಾನೆ.

ಈ ಕೃಷ್ಣ ಪ್ರಜ್ಞಾ ಆಂದೋಲನವು ಒಂದು ಹೊಸ ಬಗೆಯ ಧರ್ಮ ಎಂದು ಸರ್ವಥಾ ಭಾವಿಸಬೇಡಿ. ದೇವರನ್ನು ಗುರುತಿಸದ ಧರ್ಮ ಯಾವುದಿದೆ ? ದೇವರನ್ನು "ಅಲ್ಲಾ", "ಕೃಷ್ಣ" ಎಂದೋ ಅಥವಾ ಮತ್ತಾವುದೋ ಹೆಸರಿನಿಂದ ಕರೆಯಬಹುದು. ಆದರೆ ದೇವರನ್ನು ಗುರುತಿಸದ ಧರ್ಮ ಯಾವುದಾದರೂ ಇದೆಯೇ? ಕೇವಲ ದೇವರನ್ನು ಪ್ರೀತಿಸಲು ಯತ್ನಿಸಿ ಎಂದು ಮಾತ್ರ ನಾವು ಬೋಧಿಸುತ್ತಿದ್ದೇವೆ. ನಾವು ಅನೇಕ ವಿಷಯಗಳಿಂದ ಆಕರ್ಷಿತರಾಗುತ್ತೇವೆ. ನಮ್ಮ ಪ್ರೀತಿಯು ದೇವರಲ್ಲಿ ಕೇಂದ್ರೀಕೃತವಾದರೆ, ನಾವು ಸುಖಿಗಳಾಗುತ್ತೇವೆ. ನಾವು ಬೇರೇನನ್ನೂ ಪ್ರೀತಿಸಲು ಕಲಿಯಬೇಕಾಗಿಲ್ಲ. ದೇವರ ಪ್ರೀತಿಯಲ್ಲಿ ಎಲ್ಲವೂ ತಾನಾಗಿಯೇ ಸೇರಿಕೊಳ್ಳುತ್ತದೆ. ದೇವರನ್ನು ಮಾತ್ರ ಪ್ರೀತಿಸಲು ಯತ್ನಿಸಿರಿ. ಗಿಡ ಮರಗಳನ್ನೋ ಪಶು ಜಂತುಗಳನ್ನೋ ಪ್ರೀತಿಸಲು ಯತ್ನಿಸಬೇಡಿ. ಅದು ಎಂದೂ ತೃಪ್ತಿಯನ್ನು ನೀಡದು. ದೇವರನ್ನು ಪ್ರೀತಿಸಲು ಕಲಿಯಿರಿ. ಇದೇ ಚೈತನ್ಯ ಮಹಾಪ್ರಭುಗಳ ಸಂದೇಶ; ಇದೇ ನಮ್ಮ ಸಂದೇಶ.



# ಹರೇಕೃಷ್ಣ ಮಂತ್ರ ಸಂಕೀರ್ತನೆ

**ಹರೇಕೃಷ್ಣ ಎಂಬುದು ಮನೆಮಾತಾಗಿ ಬಳಕೆಯಾಗುತ್ತಿದ್ದರೂ, ನಿಜವಾಗಿ ಅದನ್ನು ಯಾರೂ ಅರ್ಥಮಾಡಿಕೊಂಡಿಲ್ಲ. ಅದು, ಅದನ್ನು ಜಪಿಸುವವರನ್ನು ಮಂತ್ರ ಮುಗ್ಧರನ್ನಾಗಿ ಮಾಡಲು ವಿರಚಿಸಿದ ಕೇವಲ ಒಂದು ಪುನಶ್ಚರಣ ಕ್ರಮವಾಗಿದೆಯೇ ? ಅಥವಾ ಅದು ಹೊಣೆ ತಪ್ಪಿಸಿಕೊಳ್ಳುವ ಒಂದು ವಿಧಾನವೇ ? ಅಥವಾ ಮೇಲ್ಮಟ್ಟದ ಪ್ರಜ್ಞೆಯನ್ನು ತಂದುಕೊಡುವ ಒಂದು ನಿಜವಾದ ಧ್ಯಾನ ಕ್ರಮವಾಗಿದೆಯೇ? 1966 ರಲ್ಲಿ ಮೊದಲನೆಯ ಸಲ ಎಲ್ ಪಿ ರಿಕಾರ್ಡ್ ಆಗಿರುವ ಈ ಚಿಕ್ಕ ಪ್ರಬಂಧದಲ್ಲಿ ಶ್ರೀಲ ಪ್ರಭುಪಾದರು ಹರೇಕೃಷ್ಣ ಮಂತ್ರದ ಅಂತರಾರ್ಥದ ಮೇಲೆ ಬೆಳಕು ಚಲ್ಲಿದ್ದಾರೆ.**

ಹರೇಕೃಷ್ಣ, ಹರೇಕೃಷ್ಣ, ಕೃಷ್ಣ ಕೃಷ್ಣ, ಹರೇಹರೇ, ಹರೇರಾಮ, ಹರೇರಾಮ, ರಾಮ ರಾಮ, ಹರೇ ಹರೇ ಮಂತ್ರ ಜಪದಿಂದುಂಟಾಗುವ ದಿವ್ಯ ನಾದವು ನಮ್ಮ ದಿವ್ಯಪ್ರಜ್ಞೆಯನ್ನು ಪುನಶ್ಚೇತನಗೊಳಿಸಲು ಒಂದು ಪವಿತ್ರ ಸಾಧನವಾಗಿದೆ. ಜೀವಾತ್ಮರಾಗಿ ನಾವೆಲ್ಲ ಮೂಲತಃ ಕೃಷ್ಣಪ್ರಜ್ಞೆಯುಳ್ಳ ಜೀವರುಗಳಾಗಿದ್ದೇವೆ. ಆದರೆ ಅನಾದಿ ಕಾಲದ ನಮ್ಮ ಪ್ರಕೃತಿ ಸಂಬಂಧದಿಂದ; ನಮ್ಮ ಪ್ರಜ್ಞೆಯು ಈಗ ಭೌತಿಕ ಪರಿಸರದಿಂದ ಕಲುಷಿತವಾಗಿದೆ. ನಾವೀಗ ಇರುವ ಭೌತಿಕ ಪರಿಸ್ಥಿತಿಯನ್ನು ಮಾಯೆ ಎಂದು ಹೇಳುತ್ತಾರೆ. ಮಾಯೆ ಎಂದರೆ, "ಇಲ್ಲದಿರುವುದು". ಈ ಮಾಯೆ ಎಂಬುದು ಏನು ? ನಾವು ಕಠೋರ ಪ್ರಕೃತಿ ನಿಯಮಗಳ ಹಿಡಿತದಲ್ಲಿ ಸಿಲುಕಿಕೊಂಡಿದ್ದರೂ, ನಾವೇ ಈ ಪ್ರಕೃತಿ-ಸೃಷ್ಟಿಯ ಸ್ವಾಮಿಯಾಗಲು ಪ್ರಯಿತ್ನಿಸುತ್ತಿದ್ದೇವೆ, ಇದೇ ಮಾಯೆ. ಸೇವಕನು ಕೃತಕ ರೀತಿಯಲ್ಲಿ ತಾನೇ ಸರ್ವ ಸ್ವಾಮಿಯಂತೆ ನಟಿಸಲೆತ್ನಿಸಿದರೆ, ಅವನು ಮಾಯಾಗ್ರಸ್ತನಾಗಿದ್ದಾನೆ ಎಂದು ಹೇಳುತ್ತಾರೆ. ನಾವು ಪ್ರಾಕೃತಿಕ ಸಂಪನ್ಮೂಲಗಳನ್ನು ಶೋಷಿಸಲು ಪ್ರಯತ್ನಿಸುತ್ತಿದ್ದೇವೆ. ಆದರೆ ನಾವು ಆ ಪ್ರಯತ್ನದಲ್ಲಿ ಇನ್ನೂ ಹೆಚ್ಚು ಹೆಚ್ಚು ಪ್ರಕೃತಿ ಜಂಜಡಗಳಲ್ಲಿ ಸಿಕ್ಕಿಹಾಕಿಕೊಳ್ಳುತ್ತಿದ್ದೇವೆ. ನಾವು ನಿಸರ್ಗದ ಮೇಲೆ ವಿಕ್ರಮ ಸಾಧಿಸಲು ಬಲು ಪ್ರಯಾಸಪಡುತ್ತಿದ್ದರೂ, ನಾವು ಮತ್ತಷ್ಟು ಅದನ್ನೇ ಅವಲಂಬಿಸಬೇಕಾಗಿದೆ. ನಮ್ಮ ಅನಾದಿ ನಿತ್ಯವಾದ ಕೃಷ್ಣ ಪ್ರಜ್ಞೆಯ ಮೂಲಕ ಭೌತಿಕ ಸೃಷ್ಟಿಯ ವಿರುದ್ಧ ನಾವು ನಡೆಸುತ್ತಿರುವ ಮಾಯಾರೂಪದ ಹೋರಾಟವನ್ನು ತಡೆಗಟ್ಟಬಹುದು.

ಪರಿಶುದ್ಧವಾದ ಪ್ರಜ್ಞೆಯನ್ನು ಪುನಃಶ್ಚೇತನಗೊಳಿಸಿಕೊಳ್ಳಲು ಹರೇಕೃಷ್ಣ, ಹರೇ

ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ ಎಂಬುದು ಉತ್ಕೃಷ್ಟ ವಿಧಾನವಾಗಿದೆ. ಈ ಜಪದ ದಿವ್ಯ ನಾದ ಸ್ಪಂದನದಿಂದ ನಮ್ಮ ಹೃದಯದಲ್ಲಿರುವ ಎಲ್ಲ ತಪ್ಪು ತಿಳುವಳಿಕೆಗಳನ್ನು ತೊಡೆದು ಹಾಕಬಹುದು. ನನ್ನ ಕಣ್ಣಿಗೆ ಕಾಣುವುದರೆಲ್ಲದರ ಸ್ವಾಮಿ ನಾನೇ ಎಂಬ ಮಿಥ್ಯಾ ಪ್ರಜ್ಞೆಯೇ ನಮ್ಮ ಈ ಎಲ್ಲ ತಪ್ಪು ತಿಳುವಳಿಕೆಗಳಿಗೆ ಆಧಾರವಾಗಿದೆ.

ಕೃಷ್ಣ ಪ್ರಜ್ಞೆ ಎಂಬುದು ಮನಸ್ಸಿನ ದೇಲೆ ಒಂದು ಕೃತಕ ಹೇರಿಕೆಯಲ್ಲ. ಈ ಪ್ರಜ್ಞೆಯು ಮೂಲಭೂತವಾದದ್ದು ಮತ್ತು ಜೀವರ ಸ್ವಾಭಾವಿಕ ಶಕ್ತಿಯಾಗಿದೆ. ನಾವು ಈ ದಿವ್ಯ ನಾದ ವನ್ನು ಕೇಳಿದಾಗ ನಮ್ಮ ಪ್ರಜ್ಞೆಯು ಪುನಶ್ಚೇತನಗೊಳ್ಳುತ್ತದೆ. ಈ ಯುಗದಲ್ಲಿ ಈ ಸರಳವಾದ ಧ್ಯಾನ ಪದ್ಧತಿಯನ್ನೇ ಸೂಚಿಸಲಾಗಿದೆ. ನಮ್ಮ ನಿತ್ಯ ಅನುಭವದಿಂದಲೂ ಕೂಡ, ಈ ಮಹಾ ಮಂತ್ರ ಜಪದಿಂದ ಕೀರ್ತನ ಮಾಡುವವನು ಯಾವುದೋ ದಿವ್ಯ ಸ್ತರದಿಂದ ದಿವ್ಯ ಆನಂದೋ ದ್ರೇಕವು ತನ್ನೆಡೆಗೆ ಬರುತ್ತಿರುವಂತೆ ಕೂಡಲೇ ಅನುಭವಿಸಬಹುದು. ಭೌತಿಕ ಕಲ್ಪನೆಯ ಜೀವನ ದಲ್ಲಿ ನಾವು ಇಂದ್ರಿಯ ತೋಷಣ ವಿಷಯದಲ್ಲಿಯೇ, ನಿಮ್ನ ವರ್ಗದ ಪಶುಗಳಂತೆ ಸದಾ ಆಸಕ್ತ ರಾಗಿರುತ್ತೇವೆ. ಈ ಇಂದ್ರಿಯ ತೋಷಣದ ಸ್ತರದಿಂದ ಸ್ವಲ್ಪ ಮೇಲೆ ಹೋಗಿ ಈ ಭೌತಿಕ ಬಂಧನಗಳಿಂದ ತಪ್ಪಿಸಿಕೊಳ್ಳುವ ಮನೋಮಯ ಚಿಂತನೆಯಲ್ಲಿ ತೊಡಗಬೇಕು. ಈ ಚಿಂತನದ ಸ್ತರದಿಂದ ಸ್ವಲ್ಪ ಮೇಲೆ ಹೋದರೆ, ಬುದ್ಧಿವಂತನಾದವನು ಒಳಗೊ, ಹೊರಗೊ ಸಕಲ ಕಾರಣಗಳ ಪರಮ ಕಾರಣವನ್ನು ಕಂಡುಕೊಳ್ಳಲು ಯತ್ನಿಸುತ್ತಾನೆ. ಯಾವಾಗ ಒಬ್ಬನು ದಿವ್ಯ ಪ್ರಜ್ಞೆಯ ವೇದಿಕೆಗೆ ತಲುಪುತ್ತಾನೋ– ಇಂದ್ರಿಯ, ಮನಸ್ಸು ಮತ್ತು ಬುದ್ಧಿಯ ಹಂತಗಳನ್ನು ದಾಟಿಕೊಂಡು– ಆಗ ಅವನು ದಿವ್ಯ ಹಂತದಲ್ಲಿದ್ದಾನೆ, ಎಂದೇ ಹೇಳಬಹುದು. ಈ ಹರೇಕೃಷ್ಣ ಮಂತ್ರ ಜಪವನ್ನು ದಿವ್ಯ ವೇದಿಕೆಯಲ್ಲಿಯೇ ಆಚರಿಸಲಾಗುತ್ತದೆ. ಆದುದರಿಂದ ಈ ನಾದ ತರಂಗಗಳು ಎಲ್ಲ ಕೆಳವರ್ಗದ ಪ್ರಜ್ಞೆಯನ್ನು ಎಂದರೆ; ಇಂದ್ರಿಯ, ಮನಸ್ಸು ಮತ್ತು ಬುದ್ಧಿ ಇವುಗಳನ್ನು ದಾಟಿ ಹೋಗುತ್ತವೆ. ಆದುದರಿಂದ ಈ ಮಂತ್ರ ಭಾಷೆಯನ್ನು ಅರಿತುಕೊಳ್ಳು ವುದಾಗಲೀ ಅಥವಾ ಯಾವುದೇ ಮಾನಸಿಕ ಊಹಾಪೋಹವಾಗಲೀ ಅಥವಾ ಈ ಮಂತ್ರ ಜಪಕ್ಕಾಗಿ ಯಾವುದೇ ಬೌದ್ಧಿಕ ಹೊಂದಾಣಿಕೆಯಾಗಲೀ ಅಗತ್ಯವಿಲ್ಲ. ದಿವ್ಯ ವೇದಿಕೆಯಿಂದ ಅದು ಸ್ವಾಭಾವಿಕವಾಗಿ ಬರುತ್ತದೆ. ಆ ಕಾರಣ, ಯಾವುದೇ ಪೂರ್ವ ಅರ್ಹತೆಯಿಲ್ಲದೆ ಯಾರಾದರೂ ಈ ಕೀರ್ತನೆಯಲ್ಲಿ ಭಾಗವಹಿಸಬಹುದು. ಇನ್ನೂ ಉತ್ಕೃಷ್ಟ ದೆಸೆಯಲ್ಲಿ, ಆಧ್ಯಾತ್ಮಿಕ ಅರಿವಿನ ಆಧಾರದ ಮೇಲೆ ಯಾರೂ ನಾಮಾಪರಾಧ ಮಾಡಲಿಕ್ಕಿಲ್ಲವೆಂದು ನಿರೀಕ್ಷಿಸ ಬಹುದು.

ಪ್ರಾರಂಭದಲ್ಲಿ ಎಲ್ಲ ಎಂಟು ಬಗೆಯ ದಿವ್ಯ ಆನಂದೋತ್ಕರ್ಷಗಳು ಉಂಟಾಗುವುದು ಸಾಧ್ಯವಾಗಲಿಕ್ಕಿಲ್ಲ. ಇವು (1) ಮೂಕನ ಹಾಗೆ ಸ್ತಂಭಿಭೂತನಾಗುವುದು, (2) ಸ್ವೇದನವಾಗು ವುದು, (3) ಪುಲಕತಗೊಳ್ಳುವುದು, (4) ಗದ್ಗದಿತರಾಗುವುದು, (5)ಕಂಪನಗೊಳ್ಳುವುದು, (6) ದೇಹಕೃಶನಾಗುವುದು, (7) ಆನಂದೋದ್ರೇಕದ ಆರ್ತನಾದ ಮತ್ತು (8) ಸಮಾಧಿ. ಆದರೆ ಕ್ಷಣ ಕಾಲ ಕೀರ್ತಿಸಿದರು ಕೂಡ ಮನುಷ್ಯನು ಕೂಡಲೇ ದಿವ್ಯ ವೇದಿಕೆಯನ್ನು ತಲುಪು ತ್ತಾನೆ ಎಂಬುದರಲ್ಲಿ ಸಂದೇಹವಿಲ್ಲ. ಮಂತ್ರಜಪದೊಂದಿಗೆ ನರ್ತಿಸಬೇಕೆಂಬ ಲವಲವಿಕೆಯೂ ಪ್ರಥಮ ಚಿಹ್ನೆಯಾಗಿ ಕಂಡುಬರುತ್ತದೆ. ನಾವಿದನ್ನು ಕಣ್ಣಾರೆ ಕಂಡಿದ್ದೇವೆ. ಮಗು ಕೂಡ

ಕೀರ್ತನೆಯಲ್ಲಿ ಮತ್ತು ನರ್ತನದಲ್ಲಿ ಭಾಗವಹಿಸಬಹುದು. ಆದರೆ ಪ್ರಾಪಂಚಿಕ ಜೀವನದಲ್ಲಿ ಬಹಳಷ್ಟು ಸಿಕ್ಕಿ ಬಿದ್ದವನು ಈ ಮಟ್ಟಕ್ಕೆ ಬರಲು ಹೆಚ್ಚು ಕಾಲ ಹಿಡಿಯುವುದು. ಅಂಥ ಪ್ರಾಪಂಚಿಕ ಜಂಜಡದ ಮನುಷ್ಯನು ಕೂಡ ಬಲು ತೀವ್ರ ಈ ದಿವ್ಯ ವೇದಿಕೆಗೆ ಬರಬಹುದು. ಭಗವಂತನ ಶುದ್ಧ ಭಕ್ತನು ಪ್ರೇಮಾತಿಶಯದಿಂದ ಈ ಮಂತ್ರವನ್ನು ಕೀರ್ತಿಸಿದಾಗ ಅದು ಶ್ರೋತೃಗಳ ಮೇಲೆ ಅಪಾರ ಪ್ರಭಾವ ಬೀರುತ್ತದೆ. ಅಂತೆಯೇ ಈ ಕೀರ್ತನೆಯನ್ನು ಭಗವಂತನ ಅನನ್ಯ ಭಕ್ತನ ಬಾಯಿಯಿಂದ ಕೇಳಬೇಕು. ಅದರಿಂದ ಕೂಡಲೇ ಸತ್ಪರಿಣಾಮಗಳನ್ನು ಹೊಂದ ಬಹುದು. ಸಾಧ್ಯವಿದ್ದ ಮಟ್ಟಿಗೂ, ಅಭಕ್ತರ ಬಾಯಿಯಿಂದ ಇದನ್ನು ಕೇಳಕೂಡದು. ಸರ್ಪದ ಬಾಯಿ ಸೋಕಿದ ಹಾಲು ಕೂಡ ವಿಷ ಪರಿಣಾಮಗಳನ್ನು ಹೊಂದಿರುತ್ತದೆ.

ಹರಾ ಎಂದರೆ ಭಗವಂತನ ಶಕ್ತಿಯನ್ನು ಸಂಬೋಧಿಸಿದಂತೆ, ಹಾಗೂ ಕೃಷ್ಣ ಮತ್ತು ರಾಮ ಎಂದರೆ ಸ್ವಯಂ ಭಗವಂತನನ್ನು ಸಂಬೋಧಿಸಿದಂತೆ ಕೃಷ್ಣ ಮತ್ತು ರಾಮ ಎಂದರೆ "ಪರಮಾನಂದ". ಹರಾ ಎಂಬುದು ಭಗವಂತನ ಪರಮಾನಂದ ಸ್ವರೂಪದ ಶಕ್ತಿಯಾಗಿದ್ದು ಹರೇ ಎಂಬ ಸಂಬೋಧಾನಾತ್ಮಕ ವಿಭಕ್ತಿ ಪಲ್ಲಟವಾಗಿದೆ ಅಷ್ಟೆ. ಭಗವಂತನ ಪರಮಾನಂದ ರೂಪದ ಶಕ್ತಿಯು ಭಗವಂತನನ್ನು ತಲುಪಿಸಲು ನಮಗೆ ಸಹಾಯ ಮಾಡುತ್ತದೆ.

ಮಾಯೆ ಎಂದು ಕರೆಯಲ್ಪಡುವ ಭೌತಿಕ ಶಕ್ತಿಯೂ ಕೂಡ ಭಗವಂತನ ಅನಂತ ಶಕ್ತಿಗಳಲ್ಲಿ ಒಂದಾಗಿದೆ. ನಾವು ಎಂದರೆ ಜೀವಾತ್ಮರು ಕೂಡ ಶಕ್ತಿಯೇ. ಭಗವಂತನ ತಟಸ್ಥ ಶಕ್ತಿ ಅಷ್ಟೆ. ಜೀವಾತ್ಮರು ಭೌತಿಕ ಶಕ್ತಿಗಿಂತ ಶ್ರೇಷ್ಠರು ಎಂದು ಹೇಳಲಾಗಿದೆ. ಶ್ರೇಷ್ಠಶಕ್ತಿಯು ಕನಿಷ್ಠ ಶಕ್ತಿಯ ಸಂಪರ್ಕ ಹೊಂದಿದಾಗ, ಒಂದು ಅಸಮಂಜಸ ಸನ್ನಿವೇಶ ಉಂಟಾಗುತ್ತದೆ. ಆದರೆ ಶ್ರೇಷ್ಠ ತಟಸ್ಥ ಶಕ್ತಿಯು ಹಣ ರೂಪದ ಶ್ರೇಷ್ಠ ಶಕ್ತಿಯೊಂದಿಗೆ ಸಂಪರ್ಕ ಹೊಂದಿದಾಗ ಅದು ತನ್ನ ಸಾಮಾನ್ಯ ಸ್ಥಿತಿಯ ಆನಂದದಲ್ಲಿ ಸ್ಥಿತವಾಗುತ್ತದೆ.

ಈ ಮೂರು ಪದಗಳು ಎಂದರೆ ಹರೇ, ಕೃಷ್ಣ ಮತ್ತು ರಾಮ ಮಹಾಮಂತ್ರದ ದಿವ್ಯ ಬೀಜಗಳಾಗಿವೆ. ಕೀರ್ತನೆಯು ಭಗವಂತನನ್ನು ಮತ್ತು ಅವನ ಶಕ್ತಿಯನ್ನು ಬದ್ಧ ಜೀವಕ್ಕೆ ರಕ್ಷಣೆ ನೀಡಲು ಕೊಟ್ಟ ದಿವ್ಯ ಕರೆಯಾಗಿದೆ. ಈ ಕೀರ್ತನೆಯು ತಾಯಿಯನ್ನು ಕೂಡ ಕರೆಯುವ ಮಗುವಿನ ಅಕ್ಕರೆಯ ಕರೆಯೇ ಸರಿ. ತಾಯಿ ಹರಾ, ತಂದೆ ಭಗವಂತನ ಕೃಪೆಯನ್ನು ಭಕ್ತನು ಪಡೆಯಲು ಸಹಾಯ ಮಾಡುತ್ತಾಳೆ. ಈ ಮಂತ್ರವನ್ನು ಮನಃಪೂರ್ವಕವಾಗಿ ಜಪಿಸುವವನಿಗೆ ಭಗವದ್‌ಪರೋಕ್ಷವಾಗುತ್ತದೆ.

ಈ ಕದನ ಕೈತವಗಳ ಯುಗದಲ್ಲಿ, ಈ ಹರೇ ಕೃಷ್ಣ, ಹರೇಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ- ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂಬ ಮಹಾಮಂತ್ರ ಕೀರ್ತನೆಯನ್ನು ಬಿಟ್ಟರೆ ಆತ್ಮ ಸಾಕ್ಷಾತ್ಕಾರಕ್ಕೆ ಇಷ್ಟು ಪರಿಣಾಮಕಾರಿಯಾದ ಬೇರಾವ ಮಾರ್ಗವೂ ಇಲ್ಲ.



# ಕೃಷ್ಣಪ್ರಜ್ಞೆ-ಆಧುನಿಕ ಯುಗಕ್ಕಾಗಿ ಯೋಗ

ಈ ದಿನಗಳಲ್ಲಿ ಯೋಗವನ್ನು ಅನೇಕ ಪಥ್ಯ ಕ್ರಮಗಳಲ್ಲಿ ಸೇರಿಸಿ ಹೇಳಿ ಕೊಡಲಾಗುತ್ತಿದೆ. ಆರೋಗ್ಯ ಹೊಂದಲು, ತೂಕ ಕಡಿಮೆ ಮಾಡಿಕೊಳ್ಳಲು ಇತರರ ಮೇಲೆ ಮಾನಸಿಕ ಪ್ರಭಾವ ಬೀರಲು, ಅಪಾರ ಹಣ ಗಳಿಸಲು ಅಥವಾ ಲೈಂಗಿಕ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಯೋಗವನ್ನು ಸಾಧನವಾಗಿ ಬಳಸುವಂತೆ ಪ್ರಚಾರ ಮಾಡುವ ಪುಸ್ತಕಗಳು ಕೂಡ ಮಾರುಕಟ್ಟೆಯಲ್ಲಿ ಅಪಾರ ಸಂಖ್ಯೆಯಲ್ಲಿ ಬರುತ್ತಿವೆ. ಆದರೆ ನಿಜವಾದ ಯೋಗವು ಇವುಗಳಿಂದ ಭಿನ್ನವಾಗಿದೆ. ಇಲ್ಲಿ, ನಿಜ ಸಂಗತಿಯ ಬಗ್ಗೆ ಶ್ರೀಲ ಪ್ರಭುಪಾದರು ನಮಗೆ ಕೆಲವು ಪ್ರಾಚೀನ ರಹಸ್ಯಗಳನ್ನು ತಿಳಿಸಿಕೊಡುತ್ತಿದ್ದಾರೆ.

ಚೇತೋ–ದರ್ಪಣ-ಮಾರ್ಜನಂ ಭವ–ಮಹಾದಾವಾಗ್ನಿ-ನಿರ್ವಾಪಣಮ್
ಶ್ರೇಯಃ-ಕೈರವ–ಚಂದ್ರಿಕಾ-ವಿತರಣಂ-ವಿದ್ಯಾ-ವಧೂ-ಜೀವನಮ್
ಆನಂದಾಂಬುಧಿ-ವರ್ಧನಂ–ಪ್ರತಿಪದಂ-ಪೂರ್ಣಾಮೃತಾಸ್ವಾದನಮ್
ಸರ್ವಾತ್ಮಾ-ಸ್ನಪನಂ ಪರಂ ವಿಜಯತೇ ಶ್ರೀ-ಕೃಷ್ಣ-ಸಂಕೀರ್ತನಮ್

ಸಂಕೀರ್ತನ ಆಂದೋಲನಕ್ಕೆ ಸರ್ವಜಯವಾಗಲಿ, ಪರಂ ವಿಜಯತೇ. ಶ್ರೀ ಕೃಷ್ಣ ಸಂಕೀರ್ತನಂ, ಭಗವಾನ್ ಚೈತನ್ಯ ಮಹಾ ಪ್ರಭುಗಳು, 16 ವರ್ಷದ ಹುಡುಗರಾಗಿರುವಾಗಲೇ, ಭಾರತದಲ್ಲಿ ನವ ದ್ವೀಪದಲ್ಲಿ 500 ವರ್ಷಗಳ ಹಿಂದೆ ಈ ಸಂಕೀರ್ತನ ಆಂದೋಲನವನ್ನು ಪ್ರಾರಂಭಿಸಿದರು. ಈ ಕಾಲದಲ್ಲಿ ಅನೇಕ ಬಗೆಯ ಧರ್ಮಗಳನ್ನು ತಯಾರಿಸುವಂತೆ ಅವರು ಯಾವುದೇ ಬಗೆಯ ವಿಶಿಷ್ಟ ಧರ್ಮವನ್ನು ರೂಪಿಸಲಿಲ್ಲ. ನಿಜವಾಗಿ; ಧರ್ಮವನ್ನು ತಯಾಸರಿಲು ಬರುವುದಿಲ್ಲ **ಧರ್ಮಂತು ಸಾಕ್ಷಾತ್ ಭಗವತ್ ಪ್ರಣೀತಮ್.** ಧರ್ಮ ಎಂದರೆ ದೇವರ ನಿಯಮಗಳು, ದೇವರ ನ್ಯಾಯ, ಅಷ್ಟೆ. ನಾವು ರಾಜ್ಯ ಕಾನೂನುಗಳನ್ನು ಪಾಲಿಸದೆ ಜೀವಿಸುವುದು ಸಾಧ್ಯವಿಲ್ಲ ಮತ್ತು ಅದೇ ರೀತಿಯಲ್ಲಿ ದೇವರ ನಿಯಮಗಳನ್ನು ಪಾಲಿಸದೆ ನಾವು ಬದುಕುವುದು ಸಾಧ್ಯವಿಲ್ಲ. ಧರ್ಮ ಕ್ಷೇತ್ರದಲ್ಲಿ ಗ್ಲಾನಿ ಉಂಟಾದಾಗ (ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ ಭವತಿ ಭಾರತ) ಮತ್ತು ಅಧರ್ಮ ಕಾರ್ಯಗಳು ಹೆಚ್ಚಾದಾಗ (ಅಭ್ಯುತ್ಥಾನಂ ಅಧರ್ಮಸ್ಯ) ನಾನು (ಕೃಷ್ಣ) ಅವತರಿಸುತ್ತೇನೆ. (ತದಾತ್ಮಾನಮ್ ಶೃಜಾಮ್ಯಹಮ್) ಭೌತಿಕ ಜಗತ್ತಿನಲ್ಲಿಯೂ ಕೂಡ ಈ ತತ್ವವೇ ಪ್ರಚಲಿತವಾಗಿರುವುದನ್ನು ನಾವು ಕಾಣಬಹುದು. ರಾಜ್ಯ ಕಾನೂನುಗಳನ್ನು ಉಲ್ಲಂಘಿಸಿದಾಗಲೆಲ್ಲ ವಿಶಿಷ್ಟ ರಾಜ್ಯಾಧಿಕಾರಿಯೊ

ಅಥವಾ ಪೊಲೀಸೋ ಸ್ಥಿತಿಯನ್ನು "ಸರಿಪಡಿಸಲು" ಬರುತ್ತಾನೆ.

ಭಗವಾನ್ ಚೈತನ್ಯ ಮಹಾಪ್ರಭುಗಳನ್ನು ಗೋಸ್ವಾಮಿಗಳು ಆರಾಧಿಸುತ್ತಾರೆ ಗೋಸ್ವಾಮಿಗಳು 6 ಜನ; ರೂಪಾ ಗೋಸ್ವಾಮಿ. ಸನಾತನ ಗೋಸ್ವಾಮಿ, ರಘುನಾಥಭಟ್ಟ ಗೋಸ್ವಾಮಿ, ಜೀವ ಗೋಸ್ವಾಮಿ, ಗೋಪಾಲಭಟ್ಟ ಗೋಸ್ವಾಮಿ ಮತ್ತು ಶ್ರೀ ರಘುನಾಥ ದಾಸ ಗೋಸ್ವಾಮಿ. ಗೋ ಎಂಬುದಕ್ಕೆ ಮೂರು ಅರ್ಥಗಳಿವೆ. ಗೋ ಎಂದರೆ "ಭೂಮಿ" ಗೋ ಎಂದರೆ "ಹಸು" ಮತ್ತು ಗೋ ಎಂದರೆ "ಇಂದ್ರಿಯಗಳು". ಸ್ವಾಮಿ ಎಂದರೆ "ಒಡೆಯ". ಹೀಗೆ ಗೋಸ್ವಾಮಿ ಎಂದರೆ ಅವರು ಇಂದ್ರಿಯಗಳನ್ನು ಜಯಿಸಿದವರಾಗಿದ್ದವರು. ಮನುಷ್ಯನು ಇಂದ್ರಿಯಗಳ ಒಡೆಯನಾದಾಗ ಎಂದರೆ ಗೋಸ್ವಾಮಿಯಾದಾಗ, ಅವನು ಆಧ್ಯಾತ್ಮ ಜೀವನದಲ್ಲಿ ಪ್ರಗತಿ ಹೊಂದಬಹುದು. ಸ್ವಾಮಿ ಎಂಬುದರ ನಿಜವಾದ ಅರ್ಥ ಇದೇ. ಸ್ವಾಮಿ ಎಂದರೆ ಇಂದ್ರಿಯಗಳ ದಾಸನಾಗದವನು, ಇಂದ್ರಿಯಗಳನ್ನು ನಿಗ್ರಹಿಸಿದವನು ಎಂದು ಅರ್ಥ.

ಈ ಆರು ಗೋಸ್ವಾಮಿಗಳಲ್ಲಿ ರೂಪಾ ಗೋಸ್ವಾಮಿಯೇ ಮುಖ್ಯರಾಗಿದ್ದರು ಮತ್ತು ಅವರು ಭಗವಾನ್ ಚೈತನ್ಯ ಮಹಾ ಪ್ರಭುಗಳ ಗುಣಗಾನ ಮಾಡುವ ಒಂದು ಸುಂದರ ಶ್ಲೋಕ ವನ್ನು ರಚಿಸಿದ್ದಾರೆ. ಅವರು ಹೀಗೆ ಹೇಳುತ್ತಾರೆ:

ಅನರ್ಪಿತ-ಚರೀಂ-ಚಿರಾತ್ ಕಾರುಣ್ಯಾವತೀರ್ಣಃ ಕಲೌ
ಸಮರ್ಪಯಿತುಂ ಉನ್ನತೋಜ್ವಲ-ರಸಾಂ ಸ್ವ-ಭಕ್ತಿ–ಶ್ರೀಯಮ್
**ಹರಿಃಪುರತ-ಸುಂದರ-ದ್ಯುತಿ-ಕದಂಬ-ಸಂದೀಪಿತಃ**
**ಸದಾ ಹೃದಯ–ಕಂದರೇ ಸ್ಫುರತು ವಃ ಶಚಿ-ನಂದನಃ**
(ಚೈತನ್ಯ ಚರಿತಾಮೃತ, ಆದಿ 1-4)

**ಕಲೌ** ಎಂದರೆ ಈ ಕಲಿಯುಗ, ಲೋಹಯುಗ. ಇದು ಬಹಳ ಕಲುಷಿತಗೊಂಡಿದೆ. ಈ ಯುಗ ಕದನ ಕೋಲಾಹಲಗಳ ಯುಗ. ಈ ಕಲಿಯುಗದಲ್ಲಿ ಎಲ್ಲವೂ ಕದನ ಕೋಲಾಹಲಮಯ ವಾಗಿರುವಾಗ, "ನೀವು ದೇವರ ಅತ್ಯುನ್ನತ ಪ್ರೀತಿಯನ್ನು ನೀಡಲು ಅವತರಿಸಿ ಬಂದಿದ್ದೀರಿ" ಎಂದು ರೂಪಾ ಗೋಸ್ವಾಮಿ ಸ್ತುತಿಸುತ್ತಾರೆ. **ಸಮರ್ಪಯಿತುಮ್ ಉನ್ನತೋಜ್ವಲರಸಾಂ** ಕೇವಲ ಅತ್ಯುನ್ನತವಾದುದಷ್ಟೇ ಅಲ್ಲ, ಇದು ಉತ್ಕೃಷ್ಟವಾದ ಅಥವಾ ದಿವ್ಯವಾದ ರಸಾ. **ಪುರತ-ಸುಂದರ ದ್ಯುತಿಃ-** ನಿಮ್ಮ ಬಣ್ಣವು ಬಂಗಾರದ ಬಣ್ಣವಾಗಿದೆ. "ನೀವು ಎಷ್ಟು ದಯಾ ಮಯರಾಗಿದ್ದೀರೆಂದರೆ, ನಾನು, ಈ ಚೈತನ್ಯ ಮಹಾಪ್ರಭುಗಳ ರೂಪವು ಎಲ್ಲರ ಹೃದಯದಲ್ಲಿ ಸದಾ ನರ್ತಿಸಲಿ ಎಂದು (ಗೋಸ್ವಾಮಿಗಳು ಜಿತೇಂದ್ರಿಯರಾಗಿರುವುದರಿಂದ ಅವರು ಯಾರ ನ್ನಾದರೂ ಆಶೀರ್ವದಿಸಬಹುದು) ಆಶೀರ್ವದಿಸುತ್ತೇನೆ."

ರೂಪಾ ಗೋಸ್ವಾಮಿಗಳು ಮೊದಲನೆಯ ಸಲ ಪ್ರಯಾಗದಲ್ಲಿ ಶ್ರೀ ಚೈತನ್ಯ ಮಹಾಪ್ರಭು ಗಳನ್ನು ಕಂಡಾಗ, ಶ್ರೀ ಚೈತನ್ಯ ಮಹಾಪ್ರಭುಗಳು ಬೀದಿಯಲ್ಲಿ " ಹರೇ ಕೃಷ್ಣ, ಹರೇ ಕೃಷ್ಣ"

ಎಂದು ಕೀರ್ತನೆ ಮಾಡುತ್ತಿದ್ದರು. ಆ ಸಮಯದಲ್ಲಿ ಕೂಡ ರೂಪಾ ಗೋಸ್ವಾಮಿಗಳು ಸ್ತೋತ್ರ ಮಾಡಿದ್ದಾರೆ. **ನಮೋ ಮಹಾ ವದಾ ನ್ಯಾಯ ಕೃಷ್ಣ ಪ್ರೇಮ ಪ್ರದಾಯತೇ**- "ಓ ನೀವು ಎಲ್ಲ ಅವತಾರಗಳಿಗಿಂತ ಈಗ ಅತ್ಯಂತ ದಯಾಮಯರಾಗಿದ್ದೀರಿ. ಭಗವತ್ಪ್ರೀತಿಯನ್ನು ಹಂಚುತ್ತಿದ್ದೀರಿ." **ಕೃಷ್ಣ ಪ್ರೇಮ ಪ್ರದಾಯತೇ ಕೃಷ್ಣಾಯ ಕೃಷ್ಣ ಚೈತನ್ಯ ನಾಮ್ನೇ ಗೌರತ್ವಿಷೇ ನಮಃ**-"ನೀವು ಸ್ವಯಂ ಕೃಷ್ಣನೇ, ನೀವು ಕೃಷ್ಣರಾಗಿರದಿದ್ದರೆ ಕೃಷ್ಣ ಪ್ರೇಮವನ್ನು ಹಂಚುತ್ತಿರಲಿಲ್ಲ. ಕೃಷ್ಣ ಪ್ರೇಮವನ್ನು ಅಷ್ಟು ಸುಲಭವಾಗಿ ಆರ್ಜಿಸಲಾಗದು. ಆದರೆ ನೀವು ಈ ಕೃಷ್ಣ ಪ್ರೇಮವನ್ನು ಲೀಲಾಜಾಲವಾಗಿ ಎಲ್ಲರಿಗೂ ಹಂಚುತ್ತಿದ್ದೀರಿ."

ಹೀಗೆ ಭಾರತದಲ್ಲಿ ಬಂಗಾಲದ ನವದ್ವೀಪದಲ್ಲಿ ಸಂಕೀರ್ತನ ಆಂದೋಲನವು ಪ್ರಾರಂಭ ವಾಯಿತು. ಈ ದೃಷ್ಟಿಯಿಂದ ನೋಡಿದಾಗ, ಭಗವಾನ್ ಚೈತನ್ಯರು ಈ ಆಂದೋಲನವನ್ನು ಬಂಗಾಲದಲ್ಲಿ ಪ್ರಾರಂಭಿಸಿದ್ದರಿಂದ ಬಂಗಾಲಿಗಳು ಬಲು ಸುದೈವಿಗಳು. ಚೈತನರು ಭವಿಷ್ಯ ನುಡಿದಿದ್ದರು.

ಪೃಥ್ವೀತೇ ಅಚ್ಛೆ ಯತ ನಗರಾದಿಗ್ರಾಮ
ಸರ್ವತ್ರ ಪ್ರಚಾರ ಹೈಬೆ ಮೋರ ನಾಮ

"ಜಗತ್ತಿನಲ್ಲೆಲ್ಲ ಎಲ್ಲ ಹಳ್ಳಿ ಪಟ್ಟಣಗಳಲ್ಲಿ ಈ ಸಂಕೀರ್ತನ ಆಂದೋಲನವು ಪ್ರಚಾರ ವಾಗುವುದು." ಇದು ಅವರ ಭವಿಷ್ಯವಾಣಿಯಾಗಿತ್ತು.

ಹಾಗೆಯೇ ಭಗವಾನ್ ಚೈತನ್ಯರ ಅನುಗ್ರಹದಿಂದ, ಈ ಆಂದೋಲನವು ನ್ಯೂಯಾರ್ಕಿ ನಿಂದ ಆರಂಭಗೊಂಡು ಈಗಾಗಲೇ ಪಾಶ್ಚಾತ್ಯ ದೇಶಗಳಲ್ಲಿ ಪ್ರಚಲಿತಗೊಂಡಿದೆ. ನಮ್ಮ ಸಂಕೀರ್ತನ ಆಂದೋಲನವನ್ನು ಪ್ರಥಮ ಸಲ 1966ರಲ್ಲಿ ನ್ಯೂಯಾರ್ಕಿನಲ್ಲಿ ಪ್ರಾರಂಭಿಸಿದೆವು. ಆ ಸಮಯದಲ್ಲಿ ನಾನು ಟಾಂಪ್‌ಕಿನ್ಸ್ ಸ್ಕ್ವೇರಿನಲ್ಲಿ ಹರೇ ಕೃಷ್ಣ ಮಂತ್ರವನ್ನು ಕೀರ್ತಿಸ ತೊಡಗಿದೆ. ಒಂದು ಸಣ್ಣ ಮೃದಂಗದೊಂದಿಗೆ ನಾನು ಅಲ್ಲಿ ಮೂರು ಗಂಟೆಗಳ ಕಾಲ ಕೀರ್ತನೆ ಮಾಡಿದೆ. ಆಗ ಈ ಅಮೆರಿಕನ್ನರೆಲ್ಲ ಬಂದು ಸುತ್ತುವರಿದರು ಮತ್ತು ಒಬ್ಬೊಬ್ಬರಾಗಿ ಮೆಲ್ಲ ಮೆಲ್ಲನೆ ಕೀರ್ತನೆಯಲ್ಲಿ ಸೇರಿಕೊಂಡರು. ಹೀಗೆ ಇದು ಬೆಳೆಯುತ್ತಿದೆ. ಮೊಟ್ಟ ಮೊದಲು ಇದು ನ್ಯೂಯಾರ್ಕಿನ 26 ಸೆಕೆಂಡ್ ಅವೆನ್ಯೂ ಸ್ಟೋರ್ ಫ್ರಂಟಿನಲ್ಲಿ ಪ್ರಾರಂಭವಾಯಿತು. ಆಮೇಲೆ ನಾವು ಸ್ಯಾನ್‌ಫ್ರಾನ್ಸಿಸ್ಕೊ, ಮಾಂಟ್ರಿಯಾಲ್, ಬಾಸ್ಟನ್, ಲಾಸ್ ಏಂಜಲಿಸ್, ಬಫ್ಯಾಲೋ, ಕೊಲಂಬಸ್ ಮೊದಲಾದ ಸ್ಥಳಗಳಲ್ಲಿ ನಮ್ಮ ಶಾಖೆಗಳನ್ನು ಪ್ರಾರಂಭಿಸಿದೆವು. ನಾವೀಗ (1970) ಇಪ್ಪತ್ನಾಲ್ಕು ಶಾಖೆಗಳನ್ನು ಹೊಂದಿದ್ದೇವೆ, ಲಂಡನ್ನಿನಲ್ಲಿ ಒಂದು ಮತ್ತು ಹ್ಯಾಂಬರ್ಗಿನಲ್ಲಿ ಒಂದು–ಇವೂ ಸೇರಿ. ಲಂಡನ್ ಶಾಖೆಯಲ್ಲಿರುವವರೆಲ್ಲ ಅಮೆರಿಕನ್ ಹುಡುಗ ಹುಡುಗಿಯರು. ಅವರು ಪ್ರಚಾರ ಮಾಡುತ್ತಿದ್ದಾರೆ. ಅವರು ಸನ್ಯಾಸಿಗಳಲ್ಲ, ವೇದಾಂತಿಗಳಲ್ಲ, ಹಿಂದೂಗಳೂ ಅಲ್ಲ, ಭಾರತೀಯರೂ ಅಲ್ಲ. ಆದರೆ ಅವರು ಈ ಆಂದೋಲನದಲ್ಲಿ ಬಹಳ ಆಸಕ್ತಿವಹಿಸಿದ್ದಾರೆ. ಲಂಡನ್ ಟೈಮ್ಸ್‌ನಲ್ಲಿ ಕೂಡ "ಕೃಷ್ಣ ಕೀರ್ತನ ಲಂಡನ್ನನ್ನು ಬೆರಗು ಗೊಳಿಸಿದೆ" ಎಂಬ ತಲೆಬರಹದ ಒಂದು ಲೇಖನವಿತ್ತು. ಈಗ ನಮ್ಮ ಆಂದೋಲನಕ್ಕೆ ಬಹಳ ಜನ ಸೇರಿದ್ದಾರೆ. ನನ್ನ ಎಲ್ಲ ಶಿಷ್ಯರು, ಕನಿಷ್ಠ ಈ ದೇಶದಲ್ಲಂತೂ ಕೇವಲ ಅಮೆರಿಕನ್ನರೇ,

ಯೂರೋಪಿಯನ್ನರೇ ಆಗಿದ್ದಾರೆ. ಅವರು ಕೀರ್ತನ ಮಾಡುತ್ತಾರೆ, ನರ್ತಿಸುತ್ತಾರೆ ಮತ್ತು "ಮರಳಿ ದೇವತ್ವಡೆಗೆ" ಎಂಬ ಪತ್ರಿಕೆಯನ್ನು ಹಂಚುತ್ತಿದ್ದಾರೆ. ನಾವು ಈಗ ಶ್ರೀಮದ್ಭಾಗವತ, ಭಗವದ್ಗೀತಾ-ಯಥಾರೂಪ, ಭಗವಾನ್ ಚೈತನ್ಯರ ಉಪದೇಶಗಳು ಮತ್ತು ಈಶೋಪನಿಷದ್–ಇಂಥ ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದೇವೆ. ಈ ಆಂದೋಲನವು ಕೇವಲ ಒಂದು ಭಾವನಾತ್ಮಕ ಆಂದೋಲನವೆಂದಲ್ಲ. ಈ ಯುವಕರು ಕೇವಲ ಯಾವುದೋ ಧಾರ್ಮಿಕ ಭಾವನೆಯಿಂದಲೋ ಅಥವಾ ಧರ್ಮಾಂಧರಾಗಿಯೋ ನರ್ತಿಸುತ್ತಿದ್ದಾರೆಂದು ತಿಳಿಯಬೇಡಿ. ಸರ್ವಥಾ ಇಲ್ಲ. ನಮಗೆ ಅತ್ಯುಚ್ಚಮಟ್ಟದ ದಾರ್ಶನಿಕ ಮತ್ತು ದೈವೀಶಾಸ್ತ್ರದ ಹಿನ್ನೆಲೆ ಇದೆ

ಉದಾಹರಣೆಗಾಗಿ, ನಾವು ಚೈತನ್ಯ ಮಹಾಪ್ರಭುಗಳ ದೃಷ್ಟಾಂತವನ್ನೇ ತೆಗೆದು ಕೊಳ್ಳೋಣ. ಅವರು ಪ್ರಚಾರ ಮಾಡುತ್ತ, ವಾರಾಣಸಿಗೆ ಹೋದರು ; ಅದು ಮಾಯಾವಾದೀ ಸನ್ಯಾಸಿಗಳ ಕೇಂದ್ರಸ್ಥಾನವಾಗಿತ್ತು. ದಾರಿಯಲ್ಲಿ ಹೆಚ್ಚಾಗಿ ಶಂಕರಾಚಾರ್ಯರ ಅನುಯಾಯಿಗಳೇ ಕಾಣಸಿಕ್ಕುತ್ತಾರೆ. ಚೈತನ್ಯ ಮಹಾ ಪ್ರಭುಗಳು ಅಲ್ಲಿದ್ದಾಗ ಕೀರ್ತನ ಮತ್ತು ನರ್ತನ ಮಾಡುತ್ತಿದ್ದರು. ಕೆಲವು ಜನ ಇದನ್ನು ಬಹಳ ಮೆಚ್ಚಿಕೊಂಡರು. ಅಂತೆಯೇ ಚೈತನ್ಯರು ಬಲು ಬೇಗನೆ ಪ್ರಸಿದ್ಧರಾದರು. ಸಾವಿರಾರು ಮಾಯಾವಾದಿ ಸನ್ಯಾಸಿಗಳ ಮುಖ್ಯರಾಗಿದ್ದ ಪ್ರಕಾಶಾನಂದ ಸರಸ್ವತಿ ಎಂಬ ಪ್ರಸಿದ್ಧ ಸನ್ಯಾಸಿಗಳಿಗೆ "ಓ, ಬಂಗಾಲದಿಂದ ಒಬ್ಬ ಯುವ ಸನ್ಯಾಸಿ ಬಂದಿದ್ದಾನೆ, ಅವನು ಬಲು ಸೊಗಸಾಗಿ ಕೀರ್ತಿಸುತ್ತಾನೆ, ನರ್ತಿಸುತ್ತಾನೆ" ಎಂದು ತಿಳಿಸಿದರು. ಪ್ರಕಾಶಾನಂದ ಸರಸ್ವತಿಗಳು ಬಹಳ ದೊಡ್ಡ ವೇದಾಂತಿಗಳಾಗಿದ್ದರು. ಅವರಿಗೆ ಇದು ಹಿಡಿಸಲಿಲ್ಲ. "ಓ, ಅವನೊಬ್ಬ ಸುಳ್ಳು ಸನ್ಯಾಸಿ. ಅವನು ಕೀರ್ತಿಸುತ್ತಿದ್ದಾನೆ, ನರ್ತಿಸುತ್ತಿದ್ದಾನೆ. ಇದು ಸನ್ಯಾಸಿ ಮಾಡಬೇಕಾದ ಕಾರ್ಯವಲ್ಲ. ಸನ್ಯಾಸಿಯಾದವನು ಸದಾ ತತ್ವಾಧ್ಯಯನದಲ್ಲಿ ಮತ್ತು ವೇದಾಂತದಲ್ಲಿ ನಿರತನಾಗಿರಬೇಕು" ಎಂದು ನುಡಿದರು.

ಪ್ರಕಾಶಾನಂದ ಸರಸ್ವತಿ ಅವರ ಟೀಕೆಯನ್ನು ಮೆಚ್ಚದ ಅಲ್ಲಿದ್ದ ಭಕ್ತನೊಬ್ಬನು ಶ್ರೀ ಚೈತನ್ಯರಿದ್ದಲ್ಲಿಗೆ ಬಂದು, ಅವರನ್ನು ಟೀಕಿಸಲಾಗುತ್ತಿದೆಯೆಂದು ಚೈತನ್ಯರಿಗೆ ತಿಳಿಸಿದನು. ಆಗ ಆ ಭಕ್ತನು ಎಲ್ಲ ಸನ್ಯಾಸಿಗಳ ಒಂದು ಸಭೆ ಕರೆದನು. ಆ ಸಭೆಯಲ್ಲಿ ಪ್ರಕಾಶಾನಂದ ಸರಸ್ವತಿ ಮತ್ತು ಶ್ರೀ ಚೈತನ್ಯ ಮಹಾಪ್ರಭುಗಳ ನಡುವೆ ವೇದಾಂತ ವಿಷಯದಲ್ಲಿ ತಾತ್ತ್ವಿಕ ಚರ್ಚೆ ನಡೆಯಿತು. ಈ ವಿವರಗಳನ್ನು ಮತ್ತು ತಾತ್ವಿಕ ಚರ್ಚೆಗಳನ್ನು 'ಭಗವಾನ್ ಚೈತನ್ಯರ ಉಪದೇಶಗಳು' ಎಂಬ ನಮ್ಮ ಗ್ರಂಥದಲ್ಲಿ ಕೊಟ್ಟಿದ್ದೇವೆ. ಆಶ್ಚರ್ಯದ ಸಂಗತಿಯೆಂದರೆ ಪ್ರಕಾಶಾನಂದ ಸರಸ್ವತಿ ಅವರು ತಮ್ಮ ಎಲ್ಲ ಶಿಷ್ಯ ಸಮೇತರಾಗಿ ವೈಷ್ಣವ ದೀಕ್ಷೆ ಹೊಂದಿದರು.

ಹೀಗೆಯೇ ಆ ಕಾಲದ ಮಹಾ ತಾರ್ಕಿಕರೂ, ಮಾಯಾವಾದಿಗಳೂ, ನಿರಾಕಾರವಾದಿಗಳೂ ಆಗಿದ್ದ ಸಾರ್ವಭೌಮ ಭಟ್ಟಾಚಾರ್ಯರೊಂದಿಗೆ ಚೈತನ್ಯ ಮಹಾ ಪ್ರಭುಗಳು ಭಾರೀ ವಾದ ಮಾಡಿದರು, ಕೊನೆಗೆ ಭಟ್ಟಾಚಾರ್ಯರೂ ವೈಷ್ಣವ ದೀಕ್ಷೆ ವಹಿಸಿದರು. ಹೀಗೆ ಚೈತನ್ಯ ಮಹಾ ಪ್ರಭುಗಳ ಆಂದೋಲನವು ಕೇವಲ ಭಾವನಾತ್ಮಕವಾದುದಾಗಿರಲಿಲ್ಲ. ತತ್ವಜ್ಞಾನ ಮತ್ತು ತರ್ಕ ಶಾಸ್ತ್ರದ ಬಲದಿಂದ ಈ ಸಂಕೀರ್ತನ ಆಂದೋಲನವನ್ನು ಅರಿತುಕೊಳ್ಳಬಯಸಿದರೆ, ಅದಕ್ಕೆ ಬಲಾ ಅಮೂಲ್ಯವಾದ ಹಿನ್ನೆಲೆ ಇದೆ. ಬೇಕಾದಷ್ಟು ಅವಕಾಶವಿದೆ. ಈ ಆಂದೋಲನವು

ವೈಜ್ಞಾನಿಕ ತಳಹದಿಯನ್ನು ವೇದಾಧಾರವನ್ನೂ ಹೊಂದಿದೆ. ಆದರೆ ಅದೆಲ್ಲವನ್ನೂ ಸರಳಗೊಳಿಸಲಾಗಿದೆ. ಇದೇ ಈ ಆಂದೋಲನದ ಸೊಬಗು. ಒಬ್ಬನು ಮಹಾ ಪಂಡಿತನಾಗಿರಲಿ, ದಾರ್ಶನಿಕನಾಗಿರಲಿ ಅಥವಾ ಮಗುವಾಗಿರಲಿ, ಎಲ್ಲರೂ ಯಾವ ತೊಂದರೆಯಿಲ್ಲದೆ ಇದರಲ್ಲಿ ಭಾಗವಹಿಸಬಹುದು. ಜ್ಞಾನಪ್ರಕ್ರಿಯೆ, ಯೋಗ ಪ್ರಕ್ರಿಯೆ ಮೊದಲಾದ ಇತರ ಸಾಕ್ಷಾತ್ಕಾರ ವಿಧಾನಗಳೂ ಮನ್ನಿತವಾಗಿವೆ ನಿಜ. ಆದರೆ ಈ ಯುಗದಲ್ಲಿ ಅವುಗಳನ್ನು ಆಚರಿಸುವುದು ಸಾಧ್ಯವಾಗುವುದಿಲ್ಲ. ವೇದಗಳೇ ಹಾಗೆ ಹೇಳಿವೆ.

ಕೃತೇ ಯದ್ ಧ್ಯಾಯತೋ ವಿಷ್ಣುಮ್ ತ್ರೇತಾಯಾಂ ಮಜತೋ ಮಖೈಃ।
ದ್ವಾಪರೇ ಪರಿಚರ್ಯಾಯಾಮ್ ಕಲೌ ತದ್ಧರಿಕೀರ್ತನಾತ್॥
(ಶ್ರೀಮದ್ಭಾಗವತ 12-3-52)

ಸತ್ಯಯುಗದಲ್ಲಿ ಎಂದರೆ ಸುವರ್ಣಯುಗದಲ್ಲಿ ಧ್ಯಾನವು ಸಾಧ್ಯವಿತ್ತು. ಉದಾಹರಣೆಗೆ. ವಾಲ್ಮೀಕಿ ಮುನಿಯು ಸಿದ್ಧಿಯನ್ನು ಪಡೆಯಲು ಅರವತ್ತು ಸಾವಿರ ವರ್ಷ ತಪಸ್ಸನ್ನಾಚರಿಸಿದ ಆಗ ವೃದ್ಧಾಪ್ಯವೆಂಬುದೆಲ್ಲಿತ್ತು ? ಇದಲ್ಲದೆ ಭಗವದ್ಗೀತೆಯಲ್ಲಿ ಹೇಳಿದ ಹಾಗೆ ಧ್ಯಾನ, ತಪಸ್ಸುಗಳಿಗೆ ಒಂದು ಪ್ರಶಾಂತ ಸ್ಥಳವನ್ನು ಹುಡುಕಿಕೊಳ್ಳಬೇಕಾಗುತ್ತಿತ್ತು. ಏಕಾಕಿಯಾಗಿ ಆಚರಿಸಬೇಕಾಗುತ್ತಿತ್ತು. ಕಠೋರ ಭಂಗಿಗಳಲ್ಲಿ ಕುಳಿತುಕೊಳ್ಳಬೇಕಾಗುತ್ತಿತ್ತು. ಅಖಂಡ ಬ್ರಹ್ಮಚರ್ಯ ವ್ರತಸ್ಥನಾಗಿರಬೇಕಾಗುತ್ತಿತ್ತು. ಹೀಗೆಯೇ ಇನ್ನೂ ಅನೇಕ–ನೀತಿ ನಿಯಮಗಳಿದ್ದುವು. ಒಟ್ಟಿನಲ್ಲಿ ಅಷ್ಟಾಂಗ ಯೋಗ ಧ್ಯಾನವು ಈಗ ಸಾಧ್ಯವಿಲ್ಲ. ಬರೀ ನಟನೆ ಮಾಡುವುದಾದರೆ ಅದು ಬೇರೆ ಮಾತು. ಸಿದ್ಧಿಯನ್ನು ಬಯಸುವುದಾದರೆ ಅಷ್ಟಾಂಗ ಯೋಗದ ಎಲ್ಲ ವಿಧಾನಗಳನ್ನು ಪಾಲಿಸಬೇಕಾಗುವುದು. ಅದು ಸಾಧ್ಯವಾಗದಿದ್ದರೆ, ವ್ಯರ್ಥಕಾಲಹರಣವಾಗುವುದು.

ಯೋಗ ಸಾಧನದ ಅಥವಾ ಧ್ಯಾನದ ಅಂತಿಮ ಧ್ಯೇಯವೇನು ? ಪರಮ ವಸ್ತುವಿನೊಂದಿಗೆ, ಪರಮಾತ್ಮನೊಂದಿಗೆ ಪರಮ ಪುರುಷನೊಂದಿಗೆ, ಸಂಪರ್ಕ ಹೊಂದುವುದೇ ಎಲ್ಲ ಯೋಗ ಸಾಧನಗಳ ಗುರಿ ಮತ್ತು ಉದ್ದೇಶವಾಗಿದೆ. ಹಾಗೆಯೇ ತಾತ್ವಿಕ ಶೋಧನೆ ಎಂದರೆ ಜ್ಞಾನವಿಧಾನ ಕೂಡ ಪರಬ್ರಹ್ಮನನ್ನರಿತುಕೊಳ್ಳುವ ಉದ್ದೇಶ ಹೊಂದಿದೆ. ನಿಸ್ಸಂದೇಹವಾಗಿ ಇವು ಅಂಗೀಕೃತ ವಿಧಾನಗಳು. ಆದರೆ ಅವು ಪ್ರಮಾಣ ಪುರಸ್ಸರವಾದ ವಿವರಣೆಗಳ ಮೇರೆಗೆ ಈ ಕಲಿಯುಗದಲ್ಲಿ ಕಾರ್ಯ ಸಾಧ್ಯವಾಗಿರಲಿಲ್ಲ. ಆದುದರಿಂದ ಮನುಷ್ಯನು ಈ ಹರಿಕೀರ್ತನ ವಿಧಾನವನ್ನನುಸರಿಸಬೇಕು. ಇದನ್ನು ಯಾವ ಪೂರ್ವ ಸಿದ್ಧತೆ ಇಲ್ಲದೆ ಯಾರು ಬೇಕಾದರೂ ಆಚರಿಸಬಹುದು. ಇದಕ್ಕಾಗಿ ಯಾರೂ ತತ್ವಜ್ಞಾನವನ್ನಾಗಲಿ, ವೇದಾಂತವನ್ನಾಗಲೀ ಅಧ್ಯಯನ ಮಾಡಬೇಕಾಗಿಲ್ಲ. ಭಗವಾನ್ ಚೈತನ್ಯರು ಪ್ರಕಾಶಾನಂದ ಸರಸ್ವತಿಯವರೊಂದಿಗೆ ಮಾಡಿದ ಚರ್ಚೆಯ ತಾತ್ಪರ್ಯ ಇದು.

ಭಗವಾನ್ ಚೈತನ್ಯರು ಮತ್ತು ಪ್ರಕಾಶಾನಂದ ಸರಸ್ವತಿಯವರು ವೇದಾಂತ ದರ್ಶನವನ್ನು ಸಾಕಷ್ಟು ಗಹನವಾಗಿ ಚರ್ಚಿಸುತ್ತಿದ್ದಾಗ, ಪ್ರಕಾಶಾನಂದ ಸರಸ್ವತಿಯವರು ಚೈತನ್ಯ ಪ್ರಭುಗಳಿಗೆ ತಾವೇ ಮುಂದಾಗಿ, ಹೀಗೆ ಪ್ರಶ್ನಿಸಿದರು : "ನೀವು ಜೀವನದಲ್ಲಿ ಈ ಹಿಂದೆ

ಒಳ್ಳೆಯ ವಿದ್ವಾಂಸರಾಗಿದ್ದಿರೆಂದು ತಿಳಿದಿದ್ದೇನೆ. (ಭಗವಾನ್ ಚೈತನ್ಯರು ನಿಜವಾಗಿಯೂ ಬಹುದೊಡ್ಡ ವಿದ್ವಾಂಸರಾಗಿದ್ದರು. ಅವರ ಹೆಸರು ನಿಮಾಯ್ ಪಂಡಿತ ಎಂದಿತ್ತು. ಅವರು ತಮ್ಮ ಹದಿನಾರರ ವಯಸ್ಸಿನಲ್ಲಿ ಕೇಶವ ಕಾಶ್ಮೀರಿ ಎಂಬ ಕಶ್ಮೀರದ ಬಹುದೊಡ್ಡ ಪಂಡಿತ ನನ್ನು ಪರಾಜಯ ಗೊಳಿಸಿದ್ದರು.) ನೀವು ಬಹು ದೊಡ್ಡ ಸಂಸ್ಕೃತ ಪಂಡಿತರಾಗಿರುವಿರೆಂದು ನಾನು ಭಾವಿಸಿದ್ದೇನೆ. ವಿಶೇಷವಾಗಿ ತರ್ಕಶಾಸ್ತ್ರದಲ್ಲಂತೂ ನೀವು ಘನ ಪಂಡಿತರಾಗಿದ್ದೀರಿ. ನೀವು ಬ್ರಾಹ್ಮಣ ಕುಟುಂಬದಲ್ಲಿಯೂ ಹುಟ್ಟಿದ್ದೀರಿ. ಈಗ ನೀವು ಒಬ್ಬ ಸನ್ಯಾಸಿ. ಹೀಗಿದ್ದೂ ನೀವು ವೇದಾಂತ ಅಧ್ಯಯನ ಮಾಡುವುದು ಬಿಟ್ಟು ಈ ಕೀರ್ತನ ಮತ್ತು ನರ್ತನದಲ್ಲಿ ಏಕೆ ತೊಡಗಿದ್ದೀರಿ ?" ಇದು ಪ್ರಕಾಶಾನಂದ ಸರಸ್ವತಿಯವರು ಕೇಳಿದ ಮೊದಲನೆಯ ಪ್ರಶ್ನೆ. ಅದಕ್ಕೆ ಭಗವಾನ್ ಚೈತನ್ಯರು, "ಹೌದು ನನಗೆ ಮೊದಲು ನನ್ನ ಗುರುಗಳು ದೀಕ್ಷೆ ನೀಡಿದಾಗ ನಾನೊಬ್ಬ ಪರಮ ಮೂರ್ಖನೆಂದು ಹೇಳಿದ್ದರು. 'ನೀನು ವೇದಾಂತವನ್ನು ಕುರಿತು ಚರ್ಚಿಸ ಬೇಡ' ಎಂದು ಅವರು ನನಗೆ ಹೇಳಿದರು. 'ನೀನು ವ್ಯರ್ಥ ಕಾಲಹರಣ ಮಾಡುವಿ. ನೀನು ಸುಮ್ಮನೆ ಈ ಹರೇಕೃಷ್ಣ ಕೀರ್ತನೆ ಮಾಡು, ನೀನು ಜಯಶಾಲಿಯಾಗುವೆ' ಎಂದು ಉತ್ತರಿಸಿ ದರು. ಇದೇ ಅವರ ಉತ್ತರವಾಗಿತ್ತು. ಚೈತನ್ಯ ಮಹಾ ಪ್ರಭುಗಳು ಮೂರ್ಖರೇನೂ ಆಗಿರ ಲಿಲ್ಲ ಮತ್ತು ವೇದಾಂತವು ಖಂಡಿತವಾಗಿ ಮೂರ್ಖರಿಗಾಗಿ ಅಲ್ಲ. ವೇದಾಂತವನ್ನು ಅರಿತು ಕೊಳ್ಳಬೇಕಾದರೆ ಸಾಕಷ್ಟು ಶಿಕ್ಷಣ ಬೇಕು ಮತ್ತು ವಿಶಿಷ್ಟ ಸಾಧನ ಮಾಡಿರಬೇಕು. ಪ್ರತಿ ಯೊಂದು ಶಬ್ದದಲ್ಲಿಯೂ ಅಪಾರ ಅರ್ಥ ತುಂಬಿದೆ ಮತ್ತು ಶಂಕರಾಚಾರ್ಯರು ಹಾಗೂ ರಾಮಾನುಜಾಚಾರ್ಯರು ಸಂಸ್ಕೃತದಲ್ಲಿ ರಚಿಸಿದ ಬೃಹತ್ ಗಾತ್ರದ ಅನೇಕ ವ್ಯಾಖ್ಯಾನಗಳಿವೆ. ಆದರೆ ನಾವು ವೇದಾಂತವನ್ನು ತಿಳಿದುಕೊಳ್ಳುವುದು ಹೇಗೆ ಸಾಧ್ಯ ? ಅದು ಅಸಾಧ್ಯ. ಇದು ಒಬ್ಬರಿಗೋ ಇಬ್ಬರಿಗೋ ಸಾಧ್ಯವಾಗಬಹುದು. ಆದರೆ ಜನಸಾಮಾನ್ಯರಿಗೆ ಅದು ಅಸಾಧ್ಯ. ಯೋಗ ಸಾಧನವೂ ಸಾಧ್ಯವಿಲ್ಲ ಆದುದರಿಂದ ಚೈತನ್ಯ ಮಹಾಪ್ರಭುಗಳ ಮಾರ್ಗವನ್ನು ಎಂದರೆ ಹರೇಕೃಷ್ಣ ಕೀರ್ತನೆಯನ್ನು ಮಾಡಲಾರಂಭಿಸಿದರೆ ದೊರೆಯುವ ಮೊದಲನೆಯ ಲಾಭ ವೆಂದರೆ **ಚೇತೋದರ್ಪಣ ಮಾರ್ಜನಂ.** ಈ ಕೀರ್ತನೆಯಿಂದ ಹೃದಯದಲ್ಲಿರುವ ಕಶ್ಮಲವೂ ನಾಶವಾಗುತ್ತದೆ. ಕೀರ್ತನೆ ಮಾಡಿ. ಇದಕ್ಕೆ ಖರ್ಚು ಇಲ್ಲ ಹಾನಿಯೂ ಇಲ್ಲ. ಒಂದು ವಾರ ಕೀರ್ತನೆ ಮಾಡಿದರೆ ಸಾಕು, ಆಧ್ಯಾತ್ಮ ಜ್ಞಾನದಲ್ಲಿ ಅವನು ಎಷ್ಟು ಪ್ರಗತಿ ಹೊಂದುತ್ತಾನೆ ಎಂಬುದು ತಾನಾಗಿಯೇ ತಿಳಿಯುವುದು.

ನಾವು ಕೇವಲ ಕೀರ್ತನೆ ಮಾಡಿ ಅನೇಕ ವಿದ್ಯಾರ್ಥಿ ಶಿಷ್ಯರನ್ನು ಆಕರ್ಷಿಸುತ್ತಿದ್ದೇವೆ. ಅವರು ನಮ್ಮ ಈ ಇಡೀ ತತ್ವವನ್ನರಿತುಕೊಂಡು ಪರಿಶುದ್ಧರಾಗುತ್ತಿದ್ದಾರೆ. ಈ ಸಂಘದ ಆಂದೋಲನವು ಕೇವಲ ನಾಲ್ಕು ವರ್ಷಗಳ ಹಿಂದೆ 1966 ರಲ್ಲಿ ಪ್ರಾರಂಭವಾಯಿತು. ಈಗಾಗಲೇ ನಾವು ಅನೇಕ ಶಾಖೆಗಳನ್ನು ಹೊಂದಿದ್ದೇವೆ. ಅಮೆರಿಕದ ಹುಡುಗ ಹುಡುಗಿಯರು ಇದರಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದಾರೆ. ಅದರಿಂದ ಅವರಿಗೆ ಸಂತೋಷವೆನಿಸಿದೆ. ಅವರಲ್ಲಿ ನೀವು ಯಾರನ್ನಾದರೂ ಕೇಳಿ. **ಚೇತೋದರ್ಪಣ ಮಾರ್ಜನಂ** ಹರೇಕೃಷ್ಣ, ಹರೇಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೆ, ಹರೇರಾಮ, ಹರೇರಾಮ, ರಾಮ ರಾಮ, ಹರೇ ಹರೇ, ಕೇವಲ ಈ ಮಂತ್ರ ಜಪ ಮಾಡಿ ಅವರು ತಮ್ಮ ಹೃದಯವನ್ನು ಶುದ್ಧಿಗೊಳಿಸಿಕೊಳ್ಳುತ್ತಿದ್ದಾರೆ.

ಮುಂದಿನ ಅಂಶವೆಂದರೆ **ಭವ, ಮಹಾದಾವಾಗ್ನಿ ನಿರ್ವಾಪಣಂ**-ಹೃದಯವು ಸಕಲ ಕಲ್ಮಶಗಳನ್ನು ಕಳೆದುಕೊಂಡು ಶುದ್ಧವಾದೊಡನೆಯೇ ಭೌತಿಕ ಅಸ್ತಿತ್ವದ ಎಲ್ಲ ಸಮಸ್ಯೆಗಳೂ ಕೂಡಲೇ ಪರಿಹಾರವಾಗುತ್ತವೆ. ಈ ಜಗತ್ತನ್ನು ದಾವಾಗ್ನಿಗೆ ಎಂದರೆ ಪ್ರಜ್ವಲಿಸುವ ಕಾಡ್ಗಿಚ್ಚಿಗೆ ಹೋಲಿಸಲಾಗಿದೆ. ಈ ಭೌತಿಕ ಅಸ್ತಿತ್ವದಲ್ಲಿ ಯಾರೂ ಅಸಂತುಷ್ಟರಾಗಲು ಬಯಸುವುದಿಲ್ಲ. ಆದರೆ ಅದು ಬಂದೇ ಬರುತ್ತದೆ. ಇದು ಭೌತಿಕ ಪ್ರಪಂಚದ ನಿಯಮ. ಯಾರೂ ಬೆಂಕಿಯನ್ನು ಬಯಸುವುದಿಲ್ಲ. ಆದರೆ ನಗರದಲ್ಲಿ ಎಲ್ಲಿ ಹೋದರೂ ಅಗ್ನಿ ಶಾಮಕ ದಳವು ಸದಾ ಕಾರ್ಯಗತವಾಗಿರುತ್ತದೆ. ಬೆಂಕಿ ಸದಾ ಇದ್ದೇ ಇದೆ. ಅದೇ ರೀತಿಯಲ್ಲಿ ಮಾನವನು ಬಯಸದ ಎಷ್ಟೋ ವಿಷಯಗಳಿವೆ. ಮರಣವನ್ನು ಯಾರೂ ಬಯಸುವುದಿಲ್ಲ. ಆದರೆ ಮರಣ ಇದೆ. ರೋಗ ಯಾರೂ ಬಯಸುವುದಿಲ್ಲ- ಆದರೂ ರೋಗಗಳಿವೆ. ವೃದ್ಧಾಪ್ಯ ಯಾರೂ ಬಯಂಸುವುದಿಲ್ಲ-ವೃದ್ಧಾಪ್ಯ ಇದೆ. ಇವೆಲ್ಲ ನಮ್ಮ ಇಚ್ಛೆಗೆ ವಿರುದ್ಧವಾಗಿ ನಾವು ಬಯಸದಿದ್ದರೂ ಇವೆ.

ನಾವು ಭೌತಿಕ ಅಸ್ತಿತ್ವದ ಈ ಸ್ಥಿತಿಗತಿಗಳನ್ನು ಕುರಿತು ಯೋಚಿಸಬೇಕು. ಈ ಮಾನವ ಜನ್ಮವು ಜ್ಞಾನ ಸಂಪಾದನೆಗಾಗಿ ಇದೆಯೇ ಹೊರತು ಕೇವಲ ಪಶುಗಳ ಹಾಗೆ ತಿನ್ನಲು ನಿದ್ರಿಸಲು, ಸಂಭೋಗಿಸಲು ಮತ್ತು ಆತ್ಮ ರಕ್ಷಣೆ ಮಾಡಿಕೊಳ್ಳಲು ಅಮೂಲ್ಯ ಜೀವನವನ್ನು ಹಾಳು ಮಾಡಲು ಅಲ್ಲ. ಅದು ನಾಗರಿಕತೆಯ ಮುನ್ನಡೆ ಎನಿಸಲಾರದು. ಈ ದೇಹವು ಕೇವಲ ಇಂದ್ರಿಯ ತೋಷಣಕ್ಕಾಗಿ ಕಷ್ಟಪಡಲು ಬಂದದ್ದಲ್ಲ ಎಂದು ಭಾಗವತವು ಹೇಳುತ್ತದೆ :

ನಾಯಮ್ ದೇಹೋ ದೇಹ-ಭಾಜಾಯ್ ನೃ-ಲೋಕೇ ಕಷ್ಟಾನ್ ಕಾಮಾನ್ ಅರ್ಹತೇ ವಿದ್-ಭುಜಾಮ್‌ಯೇ (ಭಾಗವತ 5-5-1)

ಬಲು ಕಷ್ಟ ಪಟ್ಟು ಇಂದ್ರಿಯಗಳನ್ನು ತೃಪ್ತಿಪಡಿಸುವುದು ಹಂದಿ ನಾಯಿಗಳ ಕೆಲಸವೇ ಹೊರತು ಮಾನವರ ಕೆಲಸವಲ್ಲ. ಮಾನವನು ತಪಸ್ಸನ್ನಾಚರಿಸಬೇಕು. ವಿಶೇಷವಾಗಿ ಭಾರತದಲ್ಲಿ ಮತ್ತೆ ತಮಸ್ಸಿಗೆ ಹೋಗಬಾರದೆಂಬ ದೃಷ್ಟಿಯಿಂದ ಅನೇಕ ಸಾಧು ಸಂತರು ದೊಡ್ಡ ದೊಡ್ಡ ರಾಜರು ಅನೇಕಾನೇಕ ಬ್ರಹ್ಮಚಾರಿಗಳು ಮತ್ತು ಸನ್ಯಾಸಿಗಳು ತಮ್ಮ ಇಡೀ ಜೀವನವನ್ನು ತಪಸ್ಸಿನಲ್ಲಿಯೇ ಕಳೆದಿದ್ದಾರೆ. ಭಗವಾನ್ ಬುದ್ಧನು ದೊಡ್ಡ ರಾಜಪುತ್ರನಾಗಿದ್ದ. ಆದರೂ ಸರ್ವಸಂಗ ಪರಿತ್ಯಾಗ ಮಾಡಿ ತಪಸ್ಸಿಗೆ ತೊಡಗಿದ. ಇದೇ ಜೀವನ. ಭಾರತಕ್ಕೆ ಯಾವನ ಹೆಸರಿನಿಂದ ಭಾರತ ವರ್ಷ ಎಂಬ ನಾಮಾಭಿದಾನವು ದೊರಕಿತೋ ಆ ಭರತ ಮಹಾರಾಜನು ತನ್ನ ರಾಜ್ಯವನ್ನು, ತನ್ನ ಯುವ ಹೆಂಡತಿ ಮತ್ತು ಎಳೆಯ ಮಕ್ಕಳನ್ನು ಪರಿತ್ಯಾಗ ಮಾಡಿ ತಪಸ್ಸಿಗೆ ಹೊರಟಾಗ, ಅವನಿಗೆ ಕೇವಲ ಇಪ್ಪತ್ತಾಲ್ಕು ವರ್ಷ ವಯಸ್ಸು. ಅವನು ತನ್ನ ಯುವ ಹೆಂಡತಿಯನ್ನು, ತಾಯಿಯನ್ನು ಎಲ್ಲವನ್ನು ಬಿಟ್ಟ. ಇಂಥ ಅನೇಕಾನೇಕ ದೃಷ್ಟಾಂತಗಳಿವೆ. ಭಾರತವು ತಪೋ ಭೂಮಿ, ನಾವದನ್ನು ಮರೆಯುತ್ತಿದ್ದೇವೆ. ನಾವು ಈಗ ಅದನ್ನು ತಂತ್ರ ಭೂಮಿಯನ್ನಾಗಿ ಮಾಡುತ್ತಿದ್ದೇವೆ. ಭಾರತವು ಧರ್ಮ- ಭೂಮಿಯಾಗಿದ್ದು-ಧರ್ಮಕ್ಷೇತ್ರ-ಕುರಕ್ಷೇತ್ರೇ-ಈಗ ಭಾರತವು ತಪಸ್ಸನ್ನು ಕುರಿತು ಪ್ರಚಾರವನ್ನೇ ಮಾಡುತ್ತಿಲ್ಲದಿರುವುದು ನಿಜವಾಗಿಯೂ ಆಶ್ಚರ್ಯದ ಸಂಗತಿ.

ಭಾರತದಲ್ಲಿ ಅಷ್ಟೆ ಅಲ್ಲ; ಈ ಕಲಿಯುಗದಲ್ಲಿ ಪರಿಸ್ಥಿತಿಯು ಎಲ್ಲ ಕಡೆಯೂ ಹದಗೆಟ್ಟಿದೆ.

ಹದಗೆಟ್ಟಿದೆ ಎಂದರೆ, ಪ್ರಾಯೇಣಾಲ್ಪಾಯುಷಃ ಸಭ್ಯ ಕಲಾವ ಅಸೀನ್ ಯುಗೇಜನಾಃ (ಭಾಗವತ 1-1-10). ಈ ಕಲಿಯುಗದಲ್ಲಿ ಆಯುಷ್ಯ ಪ್ರಮಾಣವು ಕಡಿಮೆ ಆಗುತ್ತದೆ. ಮನುಷ್ಯರು ಆತ್ಮ ಸಾಕ್ಷಾತ್ಕಾರದ ಕಡೆಗೆ ಹೋಗುವುದಿಲ್ಲ, ಪ್ರಯತ್ನಿಸಿದರೂ ಅನೇಕ ಜನ ಮೋಸಗಾರರು ಅವರನ್ನು ನಿಶ್ಚಿತವಾಗಿ ತಪ್ಪು ದಾರಿಗೆಳೆಯುತ್ತಾರೆ. ಇದು ಭ್ರಷ್ಟ ಯುಗ. ಆದುದರಿಂದ ಚೈತನ್ಯ ಮಹಾಪ್ರಭುಗಳು ಬೋಧಿಸಿದ ಹರೇಕೃಷ್ಣ ಕೀರ್ತನವೇ ಅತ್ಯುತ್ತಮ ವಾದದ್ದು ಮತ್ತು ಸರಳವಾದದ್ದು.

ಹರೇರ್ ನಾಮ ಹರೇರ್ನಾಮ ಹರೇರ್ ನಾಮೈವ ಕೇವಲಮ್ ।
ಕಲೌನಾಸ್ತಿ ಏವ ನಾಸ್ತಿ ಏವ ನಾಸ್ತಿ ಏವ ಗತಿರ್ ಅನ್ಯಥಾ ॥

"ಈ ಕಲಿಯುಗದಲ್ಲಿ ಭಗವಂತನ ಪವಿತ್ರ ನಾಮವನ್ನುಚ್ಚರಿಸಿ ಅವನ ಗುಣಗಾನ ಮಾಡುವುದನ್ನು ಬಿಟ್ಟು ಬೇರೆ ಯಾವ ಧರ್ಮವೂ ಇಲ್ಲ. ಇದೇ ಸಕಲ ವೇದಗಳ ವಿಧಿ. ಬೇರೆ ದಾರಿಯಿಲ್ಲ, ಬೇರೆ ದಾರಿಯಿಲ್ಲ, ಬೇರೆ ದಾರಿಯಿಲ್ಲ" ಈ ಶ್ಲೋಕವು ಬೃಹತ್ ನಾರದೀಯ ಪುರಾಣದಲ್ಲಿ ಬರುತ್ತದೆ. ಹರೇರ್ನಾಮ, ಹರೇರ್ ನಾಮ, ಹರೇರ್ ನಾಮೈವ, ಕೇವಲಮ್ ಸುಮ್ಮನೆ ಹರೇಕೃಷ್ಣ ಕೀರ್ತನ ಮಾಡಿ. ಅನ್ಯ ಮಾರ್ಗವಿಲ್ಲ. ಕಲೌ ನಾಸ್ತಿ ಏವ ನಾಸ್ತಿ ಏವ ನಾಸ್ತಿ ಏವ ಗತಿರ್ ಅನ್ಯಥಾ. ಈ ಕಲಿಯುಗದಲ್ಲಿ ಆತ್ಮ ಸಾಕ್ಷಾತ್ಕಾರಕ್ಕೆ ಅನ್ಯ ಮಾರ್ಗವೇ ಇಲ್ಲ. ಅಂತೆಯೇ ನಾವು ಇದನ್ನು ಒಪ್ಪಿಕೊಳ್ಳಲೇಬೇಕು.

ಶ್ರೀ ಮದ್ಭಾಗವತದಲ್ಲಿ ಇಗೇ ಬಗೆಯ ಮತ್ತೊಂದು ಶ್ಲೋಕವಿದೆ. ಮೂರನೆಯ ಅಧ್ಯಾಯದ 12 ನೆಯ ಸ್ಕಂಧದಲ್ಲಿ ಶುಕಾಚಾರ್ಯರು ಈ ಯುಗದ ದೋಷಗಳನ್ನು ಕುರಿತು ಪರೀಕ್ಷಿತ ಮಹಾರಾಜನಿಗೆ ತಿಳಿಸುತ್ತಾರೆ. ಈಗ ಕಲಿಯುಗದ ಆ ಎಲ್ಲ ಲಕ್ಷಣಗಳು ಕಾಣ ತೊಡಗಿವೆ. ಕೊನೆಯಲ್ಲಿ ಶುಕಾಚಾರ್ಯರು ಕಲೇರ್ ದೋಷನಿಧೇ ರಾಜನ್ ಅಸ್ತಿಹಿ ಏಕೋ ಮಹಾನ್ ಗುಣಃ–"ದೇವಪ್ರಿಯರಾಜನೆ, ಈ ಕಲಿಯುಗವು ದುಷ್ಟ ವಸ್ತುಗಳಿಂದ ತುಂಬಿದೆ. ಆದರೆ ಒಂದು ಒಳ್ಳೆಯ ಅವಕಾಶ ಮಾತ್ರವಿದೆ" ಎಂದು ಹೇಳಿದರು. ಅದಾವುದು? ಕೀರ್ತನಾದ್ ಏವ ಕೃಷ್ಣಸ್ಯ ಮುಕ್ತ ಸಂಘಃ ಪರಂವ್ರಜೇತ್ "ಕೇವಲ ಈ ಹರೇ ಕೃಷ್ಣ ಮಂತ್ರವನ್ನು ಕೀರ್ತಿಸಿಸುವುದರಿಂದ ಮಾನವನು ಮುಕ್ತನಾಗಿ ಮತ್ತೆ ಪರಂಧಾಮವನ್ನು ಹೋಗಿ ಸೇರುತ್ತಾನೆ."

ಇದು ಕಾರ್ಯ ಸಾಧ್ಯ ಮತ್ತು ಪ್ರಮಾಣಬದ್ಧವಾದುದು. ಕೇವಲ ಈ ಮಂತ್ರ ಜಪ ದಿಂದ ತಾನು ಹೇಗೆ ಪ್ರಗತಿ ಹೊಂದುತ್ತಾನೆ ಎಂಬುದನ್ನು ಸ್ವಾನುಭವದಿಂದ ಕಂಡುಕೊಳ್ಳ ಬಹುದು. ಕೃಷ್ಣ ಪ್ರಜ್ಞಾ ಆಂದೋಲನವು ಹೊಸದೇನೂ ಅಲ್ಲ. ಅಥವಾ ನಾವು ಪ್ರಾರಂಭಿ ಸಿದ್ದಾಗಲಿ ಅಥವಾ ತಯಾರಿಸಿದ್ದಾಗಲಿ ಅಲ್ಲ. ಅದು ವೇದ ಪ್ರಮಾಣ ಪುರಸ್ಸರವಾಗಿದೆ ಮತ್ತು ಚೈತನ್ಯ ಮಹಾ ಪ್ರಭುಗಳು ಮತ್ತು ಅಂಥ ಇತರ ಆಚಾರ್ಯರು ಇದನ್ನು ಪ್ರಮಾಣೀಕರಿಸಿ ದ್ದಾರೆ. ಈ ಕ್ರಮವು ಬಹು ಸುಲಭ; ಯಾವ ಖರ್ಚು ಇಲ್ಲ. ನಾವು ಯಾವ ಹಣವನ್ನು ಕೇಳು ತ್ತಿಲ್ಲ. ಶುಲ್ಕವನ್ನು ಕೇಳುತ್ತಿಲ್ಲ ಮತ್ತು ಜನರಿಗೆ ಒಂದು ರಹಸ್ಯ ಮಂತ್ರವನ್ನು ನೀಡಿ ನೀವು ಆರು ತಿಂಗಳೊಳಗಾಗಿ ದೇವರಾಗುತ್ತೀರಿ ಎಂದು ಭರವಸೆಯನ್ನು ಕೊಡುತ್ತಿಲ್ಲ. ಇದಾವುದೂ ಇಲ್ಲ,

ಇಲ್ಲಿ ಎಲ್ಲರಿಗೂ-ಮಕ್ಕಳು, ಮಹಿಳೆಯರು, ಹುಡುಗಿಯರು, ಹುಡುಗರು, ವೃದ್ಧರು ಎಲ್ಲರಿಗೂ ಅವಕಾಶವಿದೆ. ಪ್ರತಿಯೊಬ್ಬರೂ ಕೀರ್ತನೆ ಮಾಡಿ ಫಲಕಾಣಬಹುದು.

ಈ ಉದ್ದೇಶ ಸಾಧನೆಗಾಗಿ ನಾವು ಪಶ್ಚಿಮ ವರ್ಜೀನಿಯದಲ್ಲಿ ನಮ್ಮ ಕ್ಷೇತ್ರ ಯೋಜನೆಯಾಗಿ ನವ ವೃಂದಾವನವನ್ನು ಸ್ಥಾಪಿಸುತ್ತಿರುವುದು ಅಷ್ಟೆ ಅಲ್ಲದೆ, ನವದ್ವೀಪ ಮತ್ತು ನವ ಜಗನ್ನಾಥಪುರಿ ಮೊದಲಾದಂಥ ದಿವ್ಯ ಸಂಘ ಸಮಾಜಗಳನ್ನು ಸ್ಥಾಪಿಸುತ್ತಿದ್ದೇವೆ. ನಾವು ಈಗಾಗಲೇ ಸ್ಯಾನ್ ಫ್ರಾನ್ಸಿಸ್‌ಕೊದಲ್ಲಿ ನವ ಜಗನ್ನಾಥ ಪುರಿಯನ್ನು ಪ್ರಾರಂಭಿಸಿದ್ದೇವೆ. ಅಲ್ಲಿ ರಥಯಾತ್ರಾ ಉತ್ಸವವು ನಡೆಯುತ್ತಿದೆ. ಈ ವರ್ಷ ಲಂಡನ್ನಿನಲ್ಲಿಯೂ ಕೂಡ ರಥ ಯಾತ್ರಾ ಮಹೋತ್ಸವವು ನಡೆಯಲಿದೆ. ಜಗನ್ನಾಥ, ಸುಭದ್ರಾ ಬಲರಾಮ ಮೂರ್ತಿಗಳಿರುವ ಮೂರು ರಥಗಳನ್ನು ಥೇಮ್ಸ್ ನದಿಯವರೆಗೆ ಕೊಂಡೊಯ್ಯಲಾಗುತ್ತದೆ. ಅಮೆರಿಕವು ನ್ಯೂ ಇಂಗ್ಲೆಂಡ್ ಮತ್ತು ನ್ಯೂಯಾರ್ಕ್‌ಗಳನ್ನು ಆಮದು ಮಾಡಿಕೊಂಡಿದೆ. ಹೀಗಿರುವಾಗ ನವ ವೃಂದಾವನವನ್ನು ಏಕೆ ಆಮದು ಮಾಡಿಕೊಳ್ಳಬಾರದು ? ನಾವು ವಿಶೇಷವಾಗಿ ಈ ನವ ವೃಂದಾವನನ್ನು ಸ್ಥಾಪಿಸಲೇಬೇಕು. ಕಾರಣವೆಂದರೆ ಭಗವಾನ್ ಚೈತನ್ಯರು, ಆರಾಧ್ಯೋ ಭಗವಾನ್ ವ್ರಜೇಶ – ತನಯಸ್ತದ್ – ಧಾಮ ವೃಂದಾವನಮ್ – "ವೃಂದಾವನ ಧಾಮ ವ್ರಜ ಭೂಮಿಯಲ್ಲಿ, ನಂದ ಮಹಾರಾಜನ ಪುತ್ರನಾದ ಕೃಷ್ಣನು ಪೂಜಾರ್ಹವಾದ ಪರಮ ಮೂರ್ತಿಯಾಗಿದ್ದಾನೆ ಮತ್ತು ಅವನ ಸ್ಥಳವಾದ ಈ ವೃಂದಾವನವು ಕೂಡ ಪೂಜಾರ್ಹ ವಾಗಿದೆ" ಎಂದು ಹೇಳಿದ್ದಾರೆ. ಪಾಶ್ಚಾತ್ಯ ಹುಡುಗ ಹುಡುಗಿಯರು ಕೃಷ್ಣ ಪ್ರಜ್ಞೆಯನ್ನು ಅಂಗೀಕರಿಸುತ್ತಿದ್ದಾರೆ. ಅವರಿಗೆ ವೃಂದಾವನದಂಥ ಒಂದು ಸ್ಥಳ ಬೇಕು. ಎರಡು ವರ್ಷಗಳ ಹಿಂದೆ ನನ್ನೊಟ್ಟಿಗೆ ವೃಂದಾವನಕ್ಕೆ ಬಂದಿದ್ದ ಸ್ವಾಮಿ ಕೀರ್ತನಾನಂದ ಅವರು, ವೃಂದಾವನ ವೆಂದರೇನು ಎಂಬುದನ್ನು ಅರಿತು ಕೊಂಡಿದ್ದಾರೆ. ಅಂಥ ಕನಿಷ್ಠ ಏಳು ಮಂದಿರಗಳನ್ನು ನಿರ್ಮಿಸುವಂತೆ ನಾನು ಅವರಿಗೆ ಸೂಚಿಸಿದ್ದೇನೆ. ವೃಂದಾವನದಲ್ಲಿ ರಾಧಾ ಕೃಷ್ಣರ ಸುಮಾರು ಐದು ಸಾವಿರ (5000) ಮಂದಿರಗಳಿವೆ. ಆದರೆ ಗೋಸ್ವಾಮಿಗಳು ಸ್ಥಾಪಿಸಿದ 7 ಮಂದಿರ ಗಳು ಬಹುಮುಖ್ಯವಾಗಿವೆ. ನಮ್ಮ ಕಾರ್ಯಕ್ರಮವೆಂದರೆ ನವ ವೃಂದಾವನದಲ್ಲಿ ವಾಸಿಸು ವುದು ಮತ್ತು ಆರ್ಥಿಕ ಪರಿಹಾರ ಕ್ರಮವಾಗಿ ಕೃಷಿ ಮತ್ತು ಗೋವುಗಳನ್ನು ಅವಲಂಬಿಸು ವುದು ಮತ್ತು ಹರೇಕೃಷ್ಣ ಮಂತ್ರ ಜಪಿಸುತ್ತ ಕೃಷ್ಣ ಪ್ರಜ್ಞೆಯನ್ನು ಪ್ರಶಾಂತವಾಗಿ ಸಾಧಿಸು ವುದು- ಇದೇ ವೃಂದಾವನ ಯೋಜನೆ. ಯುಕ್ತಾಹಾರ ವಿಹಾರಸ್ಯ. .ಯೋಗೋ ಭವತಿ ದುಃಖ-ಹಾ (ಭ. ಗೀ. 6-17).

ಈ ಮಾನವ ಜನ್ಮವು ನಮ್ಮ ಕೃತಕ ಆವಶ್ಯಕತೆಗಳನ್ನು ಬೆಳೆಸಿಕೊಳ್ಳಲು ದೊರೆತದ್ದಲ್ಲ. ನಾವು ಕೇವಲ ದೇಹಾತ್ಮಗಳನ್ನು ಒಟ್ಟಿಗಿಟ್ಟುಕೊಂಡು ಸಮಾಧಾನ ಹೊಂದಬೇಕು ಮತ್ತು ಉಳಿದ ಕಾಲವನ್ನು ನಮ್ಮ ಕೃಷ್ಣ ಪ್ರಜ್ಞೆಯನ್ನು ಹೆಚ್ಚಿಸಿಕೊಳ್ಳಲು ಉಪಯೋಗಿಸಬೇಕು. ಇದರಿಂದ ನಾವು ಈ ದೇಹವನ್ನು ಬಿಟ್ಟ ತರುವಾಯ ಮತ್ತೊಂದು ಭೌತಿಕ ದೇಹವನ್ನು ಪಡೆಯಬೇಕಾ ಗುವುದಿಲ್ಲ. ಬದಲಾಗಿ ನಾವು ಮರಳಿ ಧಾಮಕ್ಕೆ, ದೇವತ್ವದೆಡೆಗೆ ಹೋಗಲು ಸಮರ್ಥರಾಗಿ ತ್ತೇವೆ. ಅದೇ ಮಾನವ ಜನ್ಮದ ಗುರಿಯಾಗಿರಬೇಕು.

ಭೌತಿಕ ಜೀವನ ಎಂದರೆ, ಆಹಾರ, ನಿದ್ರಾ, ಮೈಥುನ ಮತ್ತು ಭಯ (ಆತ್ಮರಕ್ಷಣೆ) ; ಆಧ್ಯಾತ್ಮ ಜೀವನ ಎಂದರೆ ಇದಕ್ಕಿಂತ ಉತ್ತಮವಾದುದು. ಪಶುಜೀವನ ಮತ್ತು ಮಾನವ ಜೀವನದಲ್ಲಿ ಇದೇ ವ್ಯತ್ಯಾಸ. ಪಶು ಜೀವನದ ಸಾಮಾನ್ಯ ನಿಯಮವೆಂದರೆ, ತಿನ್ನುವುದು, ನಿದ್ರಿಸುವುದು, ಸಂಭೋಗಿಸುವುದು ಮತ್ತು ರಕ್ಷಣೆ ಮಾಡಿಕೊಳ್ಳುವುದು ನಾಯಿ ತಿನ್ನುತ್ತದೆ, ಮನುಷ್ಯನೂ ತಿನ್ನುತ್ತಾನೆ. ಮನುಷ್ಯನು ನಿದ್ರಿಸುತ್ತಾನೆ, ನಾಯಿಯೂ ನಿದ್ರಿಸುತ್ತದೆ. ಮನುಷ್ಯನು ಲೈಂಗಿಕ ಭೋಗ ಮಾಡುತ್ತಾನೆ, ನಾಯಿಯೂ ಲೈಂಗಿಕ ತೃಪ್ತಿಯನ್ನು ಹೊಂದುತ್ತದೆ. ನಾಯಿಯೂ ತನ್ನದೇ ಆದ ರೀತಿಯಲ್ಲಿ ಆತ್ಮರಕ್ಷಣೆ ಮಾಡಿಕೊಳ್ಳುತ್ತದೆ, ಮನುಷ್ಯನೂ ರಕ್ಷಣೆ ಮಾಡಿಕೊಳ್ಳುತ್ತಾನೆ. ಪ್ರಾಯಃ ಅಣು ಬಾಂಬುಗಳಿಂದ, ಈ ನಾಲ್ಕು ನಿಯಮಗಳು ಮನುಷ್ಯನಿಗೂ ಪ್ರಾಣಿಗಳಿಗೂ ಸಮಾನವಾಗಿವೆ. ಇವುಗಳ ಪ್ರಗತಿ ಮಾನವ ನಾಗರಿಕತೆಯಲ್ಲ, ಅದು ಪಾಶವೀ ನಾಗರಿಕತೆ. ಮಾನವ ನಾಗರಿಕತೆ ಎಂದರೆ **ಅಥಾತೋ ಬ್ರಹ್ಮಜಿಜ್ಞಾಸಾ.** ವೇದಾಂತ ಸೂತ್ರಗಳಲ್ಲಿ ಅಥಾತೋ ಬ್ರಹ್ಮಜಿಜ್ಞಾಸಾ ಎಂಬುದೇ ಮೊದಲನೆಯ ಸೂತ್ರ : "ಬ್ರಹ್ಮನನ್ನು ಕುರಿತು ಜಿಜ್ಞಾಸೆ ಮಾಡಲು ಇದೇ ಸಮಯ". ಇದೇ ಮಾನವ ಜೀವನ. ಮನುಷ್ಯನು ಆಧ್ಯಾತ್ಮ ಜಿಜ್ಞಾಸೆ ಮಾಡದವರೆಗೆ **–ಜಿಜ್ಞಾಸುಃ ಶ್ರೇಯ ಉತ್ತಮಮ್–** ಪಶುವೇ ಸರಿ. ಯಾಕೆಂದರೆ ಅವನು ಮೇಲೆ ಹೇಳಿದ ನಾಲ್ಕು ನಿಯಮಗಳಿಗೆ ಮಾತ್ರ ಬದ್ಧನಾಗಿ ಜೀವಿಸುತ್ತಾನೆ ಅಷ್ಟೆ. ಅವನು ಜಿಜ್ಞಾಸುವಾಗಿರಬೇಕು ಮತ್ತು ನಾನು ಏನು, ಜನನ, ಮರಣ, ರೋಗ ಮತ್ತು ವೃದ್ಧಾಪ್ಯದ ಈ ದುಃಖಗಳಿಗೆ ಏಕೆ ಸಿಲುಕಿಕೊಂಡಿದ್ದೇನೆ ಎಂಬುದನ್ನು ತಿಳಿದುಕೊಳ್ಳಬೇಕು. ಇದಕ್ಕೆ ಪರಿಹಾರ (ಉಪಾಯ)ವೇನಾದರೂ ಇದೆಯೆ ? ಈ ಪ್ರಶ್ನೆಗಳನ್ನು ಕೇಳಿ ತಿಳಿದುಕೊಳ್ಳಬೇಕು. ಇದೇ ಮಾನವ ಜೀವನ. ಇದೇ ಆಧ್ಯಾತ್ಮ ಜೀವನ.

ಆಧ್ಯಾತ್ಮ ಜೀವನ ಎಂದರೆ ಮಾನದ ಜೀವನ. ಭೌತಿಕ-ಜೀವನ ಎಂದರೆ ಪಶು ಜೀವನ. ಅಷ್ಟೆ. ನಾವು ಭಗವದ್ಗೀತೆಯಲ್ಲಿ ಹೇಳಿದ ಹೊಂದಾಣಿಕೆಗಳನ್ನು ಮಾಡಿಕೊಳ್ಳಬೇಕು. ಯುಕ್ತಾಹಾರ....ವಿಹಾರಸ್ಯ. ಉದಾಹರಣೆಗೆ: ನಾನು ಆಧ್ಯಾತ್ಮ ಜೀವಿಯಾಗುತ್ತಿದ್ದೇನೆಂದ ಮಾತ್ರದಿಂದ ನಾನು ಆಹಾರವನ್ನು ಬಿಡಬೇಕೆಂದಲ್ಲ ಪ್ರಾಯಃ ನನ್ನ ಆಹಾರ ಕ್ರಮವನ್ನು ಸರಿಪಡಿಸಿಕೊಳ್ಳಬೇಕು. ಯಾವುದು ಸಾತ್ವಿಕಾಹಾರ, ಯಾವುದು ತಾಮಸಾಹಾರ ಎಂಬುದನ್ನು ಭಗವದ್ಗೀತೆ ವಿವರಿಸಿದೆ. ನಾವು ಮಾನವ ಜೀವನದ ಸಾತ್ವಿಕ ಮಟ್ಟಕ್ಕೆ ನಮ್ಮನ್ನು ಏರಿಸಿಕೊಳ್ಳಬೇಕು. ಆಮೇಲೆ ನಮ್ಮ ಕೃಷ್ಣ ಪ್ರಜ್ಞೆಯನ್ನು ಪುನರುಜ್ಜೀವಿಸಿಕೊಳ್ಳಬೇಕು. ಎಲ್ಲವೂ ಶಾಸ್ತ್ರಗಳಲ್ಲಿ ಇದೆ. ದುರ್ದೈವದಿಂದ ನಾವು ಅವುಗಳನ್ನು ನೋಡುವುದಿಲ್ಲ.

ಏವಂ ಪ್ರಸನ್ನ–ಮನಸೋ ಭಗವದ್‌ಭಕ್ತಿಯೋಗತಃ ।  
ಭಗವತ್ ತತ್ವ ವಿಜ್ಞಾನಮ್ ಮುಕ್ತ ಸಂಗಸ್ಯ ಜಾಯತೇ ॥  
(ಭಾಗವತ. 1-2-20)

ಈ ಮೂರು ಪ್ರಕೃತಿ ಗುಣಗಳ ಹಿಡಿತದಿಂದ ಮುಕ್ತನಾಗದ ಹೊರತು ಮನುಷ್ಯನು ದೇವರನ್ನು ಅರಿಯಲಾರನು. ಪ್ರಸನ್ನ ಮನಸಃ. ಮನುಷ್ಯನು ಬ್ರಹ್ಮ ಸಾಕ್ಷಾತ್ಕಾರ

ಹೊಂದಿದವನಾಗಬೇಕು. ಬ್ರಹ್ಮಭೂತಃ ಪ್ರಸನ್ನಾತ್ಮಾನ ಶೋಚತಿ ನ ಕಾಂಕ್ಷತಿ (ಭ.ಗೀ.18-54) ಈ ಆದೇಶಗಳು ಅಲ್ಲಿವೆ. ಈ ಶಾಸ್ತ್ರಗಳ ಪ್ರಯೋಜನ ಪಡೆಯಬೇಕು ಮತ್ತು ಉಪದೇಶ ಮಾಡಬೇಕು. ಇದೇ ಬುದ್ಧಿವಂತರ ಹೊಣೆ. ಜನಸಾಮಾನ್ಯರು ದೇವರು ದೊಡ್ಡವನು ಎಂದು ಮಾತ್ರ ತಿಳಿದಿದ್ದಾರೆ. ಆದರೆ ನಿಜವಾಗಿ ಎಷ್ಟು ದೊಡ್ಡವನು ಎಂಬುದು ಅವರಿಗೆ ತಿಳಿದಿಲ್ಲ. ಅದು ನಮಗೆ ವೇದ ಸಾಹಿತ್ಯದಲ್ಲಿ ಸಿಕ್ಕುತ್ತದೆ. ಈ ಕಲಿಯುಗದಲ್ಲಿ ಇದೇ ನಮ್ಮ ಕರ್ತವ್ಯ. ಎಂದರೆ **ಹರಿಕೀರ್ತನ ಃ ಪರಂ ವಿಜಯತೇ ಶ್ರೀ ಕೃಷ್ಣ ಸಂಕೀರ್ತನಮ್.**





# ಧ್ಯಾನ ಮತ್ತು ಅಂತರಾತ್ಮ

**ಧ್ಯಾನವು ನಮ್ಮ ದೈನಂದಿನ ಸಮಸ್ಯೆಗಳನ್ನು ಪರಿಹರಿಸಬಲ್ಲುದೆ ? ಮರಣೋತ್ತರ ಜೀವನ ಉಂಟೆ ? ಮಾದಕ ದ್ರವ್ಯ ಸೇವನೆಯಿಂದ ಆತ್ಮ ಸಾಕ್ಷಾತ್ಕಾರ ಪಡೆಯಬಹುದೆ ? ಶ್ರೀಲ ಪ್ರಭುಪಾದರು 1976ರಲ್ಲಿ ದಕ್ಷಿಣ ಆಫ್ರಿಕಾಕ್ಕೆ ಭೇಟಿ ನೀಡಿದಾಗ, ಡರ್ಬನ್ ನೇಟಾಲ್, ಮರ್‌ಕ್ಯುರಿಯಲ್ಲಿ ಇವರನ್ನು ಸಂದರ್ಶಿಸಿದ ಬಿಲ್ ಫೇಲ್‌ನಿಗೆ ಈ ಮತ್ತು ಇನ್ನಿತರ ಪ್ರಶ್ನೆಗಳಿಗೆ ಉತ್ತರಿಸಿದರು.**

ಶ್ರೀಲ ಪ್ರಭುಪಾದ : ಕೃಷ್ಣ ಎಂಬುದು ದೇವರ ಹೆಸರು, ಎಂದರೆ "ಸರ್ವಾಕರ್ಷಕ" ಒಬ್ಬನು ಸರ್ವಾಕರ್ಷಕನಾಗಿದ್ದ ಹೊರತು ಅವನು ದೇವನಾಗಲಾರ. ಕೃಷ್ಣ ಪ್ರಜ್ಞೆಯೆಂದರೆ ದೇವ ಪ್ರಜ್ಞೆಯೆಂದಂತೆ. ನಾವೆಲ್ಲರೂ ದೇವರ ಸಣ್ಣ ವಿಭಿನ್ನಾಂಶಗಳು, ಗುಣಾತ್ಮಕವಾಗಿ ಅವನಂತೆಯೇ. ಜೀವಾತ್ಮರಾಗಿ ನಮ್ಮ ಸ್ಥಾನ ಮಾನವು ಚಿನ್ನದ ದೊಡ್ಡ ಪ್ರಮಾಣದ ಮುಂದೆ ಒಂದು ಸಣ್ಣ ಕಣವಿದ್ದಂತೆ.

ಬಿ. ಫೇಲ್ : ನಾವು ಬೆಂಕಿಯ ಕಿಡಿಗಳಂತೆ ಇದ್ದೇವೆಯೇ ?

ಶ್ರೀಲ ಪ್ರಭುಪಾದ : ಹೌದು. ಬೆಂಕಿಯೂ, ಕಿಡಿಯೂ ಅಗ್ನಿಯೇ, ಆದರೆ ಒಂದು ದೊಡ್ಡದು ಮತ್ತೊಂದು ಚಿಕ್ಕದು. ಆದರೆ ಬೆಂಕಿ ಮತ್ತು ಕಿಡಿಯ ಸಂಬಂಧದಂತಲ್ಲದೇ, ಭೌತಿಕ ಶಕ್ತಿಯ ಸಂಪರ್ಕದಿಂದಾಗಿ ನಾವೀಗ ಆ ಸಂಬಂಧವನ್ನು ಮರೆತಿರುವೆವಾದರೂ, ನಮಗೂ ದೇವರಿಗೂ ಇರುವುದು ನಿತ್ಯ ಸಂಬಂಧ. ಈ ವಿಸ್ಮೃತಿಯಿಂದಾಗಿಯೇ ನಾವು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ. ನಾವು ಮೂಲ ದೇವ ಪ್ರಜ್ಞೆಯನ್ನು ಪುನರುಜ್ಜೀವಿಸಿ ಕೊಳ್ಳಬಹುದಾದರೆ ನಾವು ಗುಲಾಬಿಗಳಾಗುವೆವು. ಇದೇ ಕೃಷ್ಣ ಪ್ರಜ್ಞೆಯ ಸಾರ ಸರ್ವಸ್ವ. ನಮ್ಮ ಮೂಲದೇವ ಪ್ರಜ್ಞೆಯನ್ನು ಪುನರುಜ್ಜೀವಿಸಿಕೊಳ್ಳಲು ಇದು ಅತ್ಯುತ್ತಮ ಸಾಧನ. ಆತ್ಮ ಸಾಕ್ಷಾತ್ಕಾರಕ್ಕೆ ವಿವಿಧ ವಿಧಾನಗಳಿವೆ. ಆದರೆ ಈ ಕಲಿಯುಗದಲ್ಲಿ, ಜನ ಬಹಳ ಪತಿತರು. ಆದುದರಿಂದ ಅವರಿಗೆ ಕೃಷ್ಣ ಪ್ರಜ್ಞೆಯ ಸರಳ ವಿಧಾನ ಅಗತ್ಯ. ಅವರು ಈ ಕಾಲದ ಭೌತಿಕ ಪ್ರಗತಿಯೇ ತಮ್ಮ ಸಮಸ್ಯೆಗಳಿಗೆ ಪರಿಹಾರವೆಂದು ತಿಳಿದು ಕೊಂಡಿದ್ದಾರೆ. ಇದು ಸರಿಯಾದದ್ದಲ್ಲ. ನಿಜವಾದ ಪರಿಹಾರವೆಂದರೆ ಕೃಷ್ಣ ಪ್ರಜ್ಞೆಯನ್ನು ಹೊಂದಿ ಭೌತಿಕ ಬದ್ಧ

ಜೀವನದಿಂದ ಸಂಪೂರ್ಣವಾಗಿ ವಿಮೋಚನೆ ಹೊಂದುವುದು. ದೇವರು ನಿತ್ಯ ಸ್ವರೂಪವಾದುದರಿಂದ, ನಾವೂ ನಿತ್ಯ ಸ್ವರೂಪರು. ಆದರೆ ಭೌತಿಕ ಸ್ಥಿತಿಯಲ್ಲಿ "ನಾವೇ ಈ ದೇಹ" ಎಂದು ಯೋಚಿಸುತ್ತಿದ್ದೇವೆ. ಅಂತೆಯೇ ನಾವು ಪದೇ ಪದೇ ದೇಹ ಬದಲಾವಣೆ ಹೊಂದಬೇಕಾಗುತ್ತದೆ. ಇದಕ್ಕೆ ಅಜ್ಞಾನವೇ ಕಾರಣ. ನಿಜವಾಗಿ ನಾವು ನಮ್ಮ ದೇಹಗಳಲ್ಲ, ದಿವ್ಯ ಕಣಗಳು, ದೇವರ ವಿಭಿನ್ನಾಂಶರು.

ಮಿ. ಫೇಲ್ : ಹಾಗಾದರೆ ಈ ದೇಹವು ಆತ್ಮಕ್ಕೆ ಒಂದು ವಾಹನವಿದ್ದಂತೆಯೇ ಸರಿ ಅಲ್ಲವೆ ?

ಶ್ರೀಲ ಪ್ರಭುಪಾದರು : ಹೌದು ಅದು ಒಂದು ಮೋಟರ್‌ಕಾರ್ ಇದ್ದಂತೆ, ನೀವು ಅದರಲ್ಲಿ ಸ್ಥಳದಿಂದ ಸ್ಥಳಕ್ಕೆ ಹೋಗುವಂತೆ, ಈ ಭೌತಿಕ ಬದ್ಧ ಜೀವನದ ಮಾನಸಿಕ ಸ್ವಕಪೋಲ ಕಲ್ಪನೆಯಿಂದಾಗಿ, ಸುಖಿಯಾಗುವ ಯತ್ನದಲ್ಲಿ ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ಹೋಗುತ್ತಿದ್ದೀರಿ. ನಾವು ನಮ್ಮ ನಿಜ ಸ್ವರೂಪಕ್ಕೆ ಬಂದ ಹೊರತು ನಮಗೆ ಯಾವುದೂ ಸುಖ ನೀಡಲಾರದು. ಆ ಸ್ವರೂಪ ಎಂದರೆ ಪರಮಾತ್ಮನ ವಿಭಿನ್ನಾಂಶರಾಗಿರುವುದೇ. ನಮ್ಮ ನಿಜವಾದ ವೃತ್ತಿ ಭಗವಂತನೊಡನೆ ಸಂಗ ಮಾಡುವುದು ಮತ್ತು ಅವನೊಡನೆ ಸಹಕರಿಸಿ ಎಲ್ಲ ಜೀವಿಗಳಿಗೆ ಸಹಾಯ ಮಾಡುವುದು. 8,400,000 ಲಕ್ಷ ಯೋನಿಗಳಲ್ಲಿ ಸುದೀರ್ಘವಾಗಿ ಸಂಚರಿಸಿ ವಿಕಾಸ ಹೊಂದಿದ ತರುವಾಯ ಸುಸಂಸ್ಕೃತ ಮಾನವ ಜನ್ಮವು ಲಭಿಸುತ್ತದೆ. ಹೀಗಿದ್ದು ನಾವು ಈ ಸುಸಂಸ್ಕೃತ ಮಾನವ ಜನ್ಮದ ಪ್ರಯೋಜನ ಪಡೆದು ದೇವರು ಯಾರು, ನಾವು ಯಾರು, ನಮ್ಮ ಸಂಬಂಧವೇನು ? ಎಂಬುದನ್ನು ಅರಿತುಕೊಳ್ಳದಿದ್ದರೆ, ಬೆಕ್ಕು ನಾಯಿಗಳ ಹಾಗೆ ಕೇವಲ ಇಂದ್ರಿಯ ತೋಷಣಕ್ಕಾಗಿ ಅಲ್ಲಿ ಇಲ್ಲಿ ಅಲೆಯುತ್ತಾ ನಮ್ಮ ಜೀವನವನ್ನು ಹಾಳು ಮಾಡಿಕೊಂಡರೆ, ನಾವು ಒಂದು ಮಹಾ ಅವಕಾಶವನ್ನು ಕಳೆದು ಕೊಂಡಂತಾಗುತ್ತದೆ. ಕೃಷ್ಣ ಪ್ರಜ್ಞಾ ಆಂದೋಲನವು ಮಾನವ ಜೀವನದ ಪೂರ್ಣ ಪ್ರಯೋಜನ ಪಡೆದು ದೇವರನ್ನೂ ಮತ್ತು ಅವನಿಗೂ ನಮಗೂ ಇರುವ ಸಂಬಂಧವನ್ನೂ ಅರಿತುಕೊಳ್ಳುವುದನ್ನು ಜನರಿಗೆ ಉಪದೇಶಿಸುವ ಉದ್ದೇಶ ಹೊಂದಿದೆ.

ಮಿ. ಫೇಲ್ : ನಾವು ಈ ಜೀವನದ ಅತ್ಯುತ್ತಮ ಲಾಭ ಪಡೆಯದಿದ್ದರೆ ಮತ್ತೊಂದು ಜೀವನದಲ್ಲಿ ನಮಗೆ ಇನ್ನೊಂದು ಅವಕಾಶ ಸಿಗುವುದೇ ?

ಶ್ರೀಲ ಪ್ರಭುಪಾದ : ಹೌದು ಮರಣ ಕಾಲದಲ್ಲಿ ನಿಮಗೆ ಇರುವ ಆಶಯಗಳನ್ನು (ವಾಸನಾ)ಅನುಸರಿಸಿ, ನಿಮಗೆ ಮತ್ತೊಂದು ದೇಹ ಬರುತ್ತದೆ. ಆದರೆ ಅದು ಮಾನವ ದೇಹವೇ ಆಗಿರುವುದೆಂದು ಹೇಳಲು ಬರುವುದಿಲ್ಲ. ನಾನೀಗಾಗಲೇ ಹೇಳಿರುವಂತೆ 8,400,000 ಲಕ್ಷ ವಿವಿಧ ಯೋನಿಗಳ ಜೀವರಾಶಿಗಳಿವೆ. ನಿಮ್ಮ ಮರಣ ಕಾಲದ ಮಾನಸಿಕ ಸ್ಥಿತಿಗನುಗುಣವಾಗಿ ನೀವು ಇವುಗಳಲ್ಲಿ ಯಾವುದನ್ನೋ ಪ್ರವೇಶಿಸಬಹುದು. ನಾವು ಮರಣ ಸನ್ನಿಹಿತವಾದಾಗ ಏನನ್ನು ಚಿಂತಿಸುತ್ತೇವೆ ಎಂಬದು ಜೀವನಾವಧಿಯಲ್ಲಿ ನಾವು ಮಾಡಿದ ಕರ್ಮಾಭ್ಯಾಸವನ್ನವಲಂಬಿಸಿರುತ್ತದೆ. ನಾವು ಭೌತಿಕ ಪ್ರಜ್ಞೆಯಲ್ಲಿರುವ ತನಕ ಭೌತಿಕ ಸ್ವಭಾವದ ನಿಯಂತ್ರಣದಲ್ಲಿ ಕಾರ್ಯ ಮಾಡುತ್ತೇವೆ. ಈ ಗುಣಗಳು ಮೂರು ತರಹದ್ದಾಗಿವೆ. ಸತ್ವ,

ರಜಸ್ಸು, ಮತ್ತು ತಮ. ಈ ಮೂರೂ ಗುಣಗಳು--ಹಳದಿ, ಕೆಂಪು ಮತ್ತು ನೀಲಿ ಮೂಲಬಣ್ಣಗಳಿದ್ದಂತೆ. ಒಬ್ಬನು ಹೇಗೆ ಈ ಕೆಂಪು, ಹಳದಿ, ನೀಲಿ ಬಣ್ಣಗಳನ್ನು ಮಿಶ್ರಮಾಡಿ ಲಕ್ಷಾಂತರ ಬಣ್ಣಗಳನ್ನು ಉತ್ಪಾದಿಸಬಲ್ಲನೋ ಈ ತ್ರಿಗುಣಗಳ ಮಿಶ್ರಣದಿಂದ ನಾನಾ ವಿಧದ ಜೀವಗಳು ಹುಟ್ಟಿಕೊಳ್ಳುತ್ತವೆ. ಈ ವೈವಿಧ್ಯಮಯ ಜೀವನದ ಜನನ ಮರಣಗಳ ಪುನರಾವೃತ್ತಿಯನ್ನು ತಡೆಗಟ್ಟಲು ನಾವು ಈ ಭೌತಿಕ ಗುಣಗಳ ಆವರಣವನ್ನು ದಾಟಿ ಶುದ್ಧ ಪ್ರಜ್ಞೆಯ ವೇದಿಕೆಗೆ ಬರಬೇಕು. ಆದರೆ ಕೃಷ್ಣಪ್ರಜ್ಞೆಯ ದಿವ್ಯ ವಿಜ್ಞಾನವನ್ನು ಅರಿತುಕೊಳ್ಳದಿದ್ದರೆ ನಾವು ಮರಣ ಒದಗಿದಾಗ ಮತ್ತೊಂದು ದೇಹಕ್ಕೆ ಹೋಗಬೇಕಾಗುತ್ತದೆ, ಅದು ಇದಕ್ಕಿಂತ ಒಳ್ಳೆಯದಾಗಿರಬಹುದು ಅಥವಾ ಕೆಟ್ಟದ್ದಾಗಿರಬಹುದು. ನಾವು ಸತ್ವ ಗುಣವನ್ನೇ ಬೆಳೆಸಿಕೊಂಡರೆ ಉತ್ತಮ ಜೀವನ ಮಟ್ಟವಿರುವ ಮೇಲಿನ ಲೋಕಗಳಿಗೆ ಹೋಗುತ್ತೇವೆ. ರಜೋಗುಣವನ್ನು ಬೆಳೆಸಿಕೊಂಡರೆ ಇರುವಲ್ಲಿಯೇ ಉಳಿಯುತ್ತೇವೆ. ಆದರೆ ತಮೋ ಗುಣದಿಂದ ಪಾಪ ಕಾರ್ಯಗಳನ್ನು ಮಾಡಿ ನಿಸರ್ಗ ನಿಯಮಗಳನ್ನು ಉಲ್ಲಂಘಿಸಿದರೆ, ನಾವು ಪಶುಯೋನಿಗೋ, ಸಸ್ಯ ಜೀವನಕ್ಕೋ ಇಳಿಯಬೇಕಾಗುವುದು. ಮತ್ತೆ ನಾವು ಮನುಷ್ಯ ರೂಪಕ್ಕೆ ವಿಕಾಸ ಹೊಂದಲು ಲಕ್ಷಾಂತರ ವರ್ಷಗಳು ಹಿಡಿಯಬಹುದು. ಆದುದರಿಂದ ಮನುಷ್ಯನು ಬಹಳ ಹೊಣೆಯರಿತು ಜೀವಿಸಬೇಕು. ಮನುಷ್ಯನು ಈ ಅಪರೂಪವಾದ ಮಾನವ ಜನ್ಮದ ಲಾಭ ಪಡೆದು ತನಗೂ ದೇವರಿಗೂ ಇರುವ ಸಂಬಂಧವನ್ನು ಅರಿತುಕೊಂಡು ಅದಕ್ಕೆ ತಕ್ಕಂತೆ ವರ್ತಿಸಬೇಕು. ಆಗ ಅವನು ವಿವಿಧ ಜೀವನದ ಜನನ ಮರಣಗಳ ಚಕ್ರದಿಂದ ಪಾರಾಗಬಹುದು ಮತ್ತು ಮರಳಿ ಧಾಮಕ್ಕೆ ಎಂದರೆ ದೇವತ್ವದೆಡೆಗೆ ಹೋಗಬಹುದು.

ಮಿ. ಫೇಲ್ : ಈ ದಿವ್ಯ ಧ್ಯಾನಯೋಗವು ಜನರಿಗೆ ಸಹಾಯಕವಾಗುವುದೆಂದು ನೀವು ಭಾವಿಸುವಿರಾ ?

ಶ್ರೀಲ ಪ್ರಭುಪಾದ : ನಿಜವಾದ ಧ್ಯಾನ ಎಂದರೇನು ಎಂಬುದು ಅವರಿಗೆ ತಿಳಿದಿಲ್ಲ. ಅವರ ಧ್ಯಾನ ಎಂಬುದು ಕೇವಲ ನಟನೆ–ಸ್ವಾಮಿಗಳು, ಯೋಗಿಗಳು ಎಂದು ಹೇಳಿಕೊಳ್ಳುವವರು ಮಾಡುವ ಮತ್ತೊಂದು ಬಗೆಯ ಯೋಗ. ಧ್ಯಾನವು ಜನರಿಗೆ ಸಹಾಯಕವಾಗುವುದೇ ಎಂದು ನೀವು ನನ್ನನ್ನು ಕೇಳುತ್ತಿದ್ದೀರಿ, ಆದರೆ ಧ್ಯಾನ ಎಂದರೇನು ನಿಮಗೆ ಗೊತ್ತಿದೆಯೋ ?

ಮಿ. ಫೇಲ್ : ಮನಸ್ಸನ್ನು ಸ್ತಬ್ಧಗೊಳಿಸುವುದು- ಆಚೆ ಈಚೆ ಅಲುಗದಂತೆ ಮಧ್ಯಸ್ಥಿತನಾಗಿರುವುದು.

ಶ್ರೀಲ ಪ್ರಭುಪಾದ : ಹಾಗಾದರೆ ಆ ಮಧ್ಯ ಸ್ಥಾನ ಯಾವುದು ?

ಮಿ. ಫೇಲ್ : ನನಗೆ ಗೊತ್ತಿಲ್ಲ.

ಶ್ರೀಲ ಪ್ರಭುಪಾದ : ಅಂತೂ ಪ್ರತಿಯೊಬ್ಬರೂ ಈ ಧ್ಯಾನದ ಬಗ್ಗೆ ಬಹಳ ಮಾತನಾಡುತ್ತಿದ್ದಾರೆ, ಆದರೆ ನಿಜವಾಗಿ ಧ್ಯಾನವೆಂದರೇನು ? ಯಾರಿಗೂ ಗೊತ್ತಿಲ್ಲ. ಈ

ಬಡಾಯಿಕೊಚ್ಚಿ ಕೊಳ್ಳುವವರು "ಧ್ಯಾನ" ಎಂಬ ಪದವನ್ನು ಬಳಸುತ್ತಾರೆ. ಆದರೆ ಧ್ಯಾನಕ್ಕೆ ಯೋಗ್ಯವಾದ ವಿಷಯ ಯಾವುದು ಎಂಬುದು ಅವರಿಗೆ ತಿಳಿದಿಲ್ಲ. ಅವರು ಕೇವಲ ಅಪ ಪ್ರಚಾರ ಮಾಡುತ್ತಿದ್ದಾರೆ.

ಮಿ. ಫೇಲ್ : ಜನರನ್ನು ಸರಿಯಾದ ದಾರಿಗೆ ತರಲು ಧ್ಯಾನವು ಮಹತ್ವದ್ದಾಗಿಲ್ಲವೇ ?

ಶ್ರೀಲ ಪ್ರಭುಪಾದ : ಇಲ್ಲ. ನಿಜವಾದ ಧ್ಯಾನ ಎಂದರೆ ಮನಸ್ಸು ದೇವ ಪ್ರಜ್ಞೆಯಲ್ಲಿ ಅನುರಕ್ತವಾಗುವುದು. ಆದರೆ ದೇವರು ಯಾರೆಂಬುದೇ ನಿಮಗೆ ತಿಳಿಯದಿದ್ದರೆ ನೀವು ಧ್ಯಾನ ಮಾಡುವುದು ಹೇಗೆ ? ಇದಲ್ಲದೆ ಈ ಕಾಲದಲ್ಲಿ ಜನರ ಮನಸ್ಸು ಚಿತ್ತೈಕಾಗ್ರತೆ ಪಡೆಯದಷ್ಟು ಉದ್ವಿಗ್ನವಾಗಿದೆ. ಈ ಧ್ಯಾನವೆಂದು ಹೇಳಿಕೊಳ್ಳುವವರನ್ನು ನಾನು ನೋಡಿದ್ದೇನೆ. ಅವರು ಸುಮ್ಮನೆ ನಿದ್ರಿಸಿ ಗೊರಕೆ ಹೊಡೆಯುತ್ತಾರೆ. ದುರ್ದೈವದಿಂದ ಭಗವತ್ ಪ್ರಜ್ಞೆ ಅಥವಾ "ಆತ್ಮ ಸಾಕ್ಷಾತ್ಕಾರ" ಎಂಬ ಹೆಸರಿನಲ್ಲಿ ಅನೇಕ ಡಂಭಾಚಾರಿಗಳು ವೇದ ಜ್ಞಾನದ ಪ್ರಮಾಣ ಭೂತವಾದ ಗ್ರಂಥಗಳನ್ನು ನೋಡದೆ ಸರಿಯಾದ ಮಟ್ಟದ್ದಲ್ಲದ ಧ್ಯಾನ ಮಾರ್ಗಗಳನ್ನು ಬೋಧಿಸುತ್ತಿದ್ದಾರೆ. ಅವರು ಕೇವಲ ಮತ್ತೊಂದು ರೀತಿಯ ಶೋಷಣೆ ಮಾಡುತ್ತಿದ್ದಾರೆ ಅಷ್ಟೆ.

ಮಿ. ಫೇಲ್ : ಆ ಸ್ಪೆನ್ಸ್ಕಿ ಮತ್ತು ಗರ್ಜಿಫರಂಥ ಇತರ ಕೆಲವು ಉಪದೇಶಕರ ವಿಷಯವೇನು ; ನಿಮ್ಮ ಹಾಗೆಯೇ ಅವರೂ ಹಿಂದೆ ಪಶ್ಚಿಮಕ್ಕೆ ಇಂಥ ಸಂದೇಶವನ್ನು ತಂದಿದ್ದರು.

ಶ್ರೀಲ ಪ್ರಭುಪಾದ : ಅವರ ಉಪದೇಶಗಳು ವೈದಿಕ ಮಟ್ಟಕ್ಕೆ ಹೊಂದುವವೇ ಎಂಬುದನ್ನು ಗುರುತಿಸಲು ನಾವು ಅವರ ವಿಶಿಷ್ಟ ಉಪದೇಶಗಳನ್ನು ಅಧ್ಯಯನ ಮಾಡಬೇಕಾಗುವುದು. ಕೃಷ್ಣ ಪ್ರಜ್ಞೆಯು ವೈದ್ಯಕೀಯ ವಿಜ್ಞಾನದ ಹಾಗೆ ಅಥವಾ ಇತರ ಯಾವುದೇ ವಿಜ್ಞಾನದ ಹಾಗೆ ಒಂದು ವಿಜ್ಞಾನ. ಬೇರೆ ಬೇರೆ ಜನರು ಉಪದೇಶಿಸುವರೆಂದ ಮಾತ್ರದಿಂದ ಅದು ಭಿನ್ನ ಭಿನ್ನವಾಗುವುದಿಲ್ಲ. ಎರಡು ಮತ್ತು ಎರಡು ಸೇರಿದರೆ ಎಲ್ಲಿಯೇ ಆಗಲಿ ನಾಲ್ಕೇ ಆಗುವುದು. ಅದು ಎಂದೂ ಐದು ಅಥವಾ ಮೂರು ಆಗುವುದಿಲ್ಲ. ಇದೇ ವಿಜ್ಞಾನ.

ಮಿ. ಫೇಲ್ : ಉಳಿದವರು ದೇವ ಪ್ರಜ್ಞೆಯ ನಿಜವಾದ ಮಾರ್ಗವನ್ನು ಬೋಧಿಸಿರುವ ಸಾಧ್ಯತೆ ಇದೆ ಎಂದು ನಿಮಗನಿಸುವುದೇ ?

ಶ್ರೀಲ ಪ್ರಭುಪಾದ : ಅವರ ಉಪದೇಶಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡಿದ ಹೊರತು ಏನೂ ಹೇಳುವುದು ಕಷ್ಟ. ಅನೇಕ ವಂಚಕರಿದ್ದಾರೆ.

ಮಿ. ಫೇಲ್ : ಅಂದರೆ ಹಣಕ್ಕಾಗಿ ಹಾಗೆ ಮಾಡುತ್ತಾರೆ ಎಂದಂತಾಯಿತು.

ಶ್ರೀಲ ಪ್ರಭುಪಾದ : ಅಷ್ಟೇ. ಅವರದು ಸರಿಯಾದ ವಿಧಾನವಲ್ಲ. ಅಂತೆಯೇ ನಾವು ಯಾವ ವೈಯಕ್ತಿಕ ವ್ಯಾಖ್ಯಾನವಿಲ್ಲದೆ ಭಗವದ್ಗೀತೆಯನ್ನು ಯಥಾರೂಪವಾಗಿ ನಿಮ್ಮ

ಮುಂದಿಡುತ್ತಿದ್ದೇವೆ. ಇದು ಶ್ರೇಷ್ಠವಾದದ್ದು.

ಮಿ. ಫೇಲ್ : ಹೌದು. ನೀವು ವಸ್ತುಗಳಿಗೆ ರೂಪ ಕೊಡಲು ಹೋದರೆ ಖಂಡಿತ ಅವುಗಳ ರೂಪ ಬದಲಾಗುತ್ತದೆ.

ಶ್ರೀಲ ಪ್ರಭುಪಾದ : ಕೃಷ್ಣಪ್ರಜ್ಞೆಯು ಹೊಸ ಪ್ರಕ್ರಿಯೆ ಅಲ್ಲ. ಅದು ಬಲು ಪ್ರಾಚೀನ ಮತ್ತು ಉತ್ಕೃಷ್ಟವಾದದು. ಅದನ್ನು ಬದಲಾಯಿಸಲು ಬರುವುದಿಲ್ಲ. ಅದನ್ನು ಬದಲಾಯಿಸಹೋದರೆ ಅದರ ಶಕ್ತಿ ಹ್ರಾಸವಾಗುತ್ತದೆ. ಈ ಶಕ್ತಿಯು ವಿದ್ಯುಚ್ಛಕ್ತಿಯಹಾಗೆ. ನೀವು ವಿದ್ಯುಚ್ಛಕ್ತಿಯನ್ನು ಉತ್ಪಾದಿಸಬಯಸಿದರೆ, ಋಣಧನ ತುದಿಗಳನ್ನು ಸರಿಯಾಗಿ ಜೋಡಿಸಿ ತಕ್ಕನಿಯಮಗಳನ್ನು ಅನುಸರಿಸಬೇಕಾಗುವುದು. ನೀವು ಉತ್ಪಾದಕವನ್ನು (ಜನಕ)ನಿಮ್ಮ ಇಷ್ಟ ಬಂದಹಾಗೆ ನಿರ್ಮಿಸಿ ವಿದ್ಯುಚ್ಛಕ್ತಿಯನ್ನು ಉತ್ಪಾದಿಸುವುದು ಅಸಾಧ್ಯ. ಹಾಗೆಯೇ ಕೃಷ್ಣ ಪ್ರಜ್ಞಾ ವಿದ್ಯೆಯನ್ನು ಸರಿಯಾದ ಆಧಾರಗಳಿಂದ ತಿಳಿದುಕೊಳ್ಳುವ ಸರಿಯಾದ ಮಾರ್ಗವಿದೆ. ನಾವು ಪ್ರಮಾಣ ಗ್ರಂಥಗಳ ಆದೇಶಗಳನ್ನು ಅನುಸರಿಸಿದರೆ ಅವು ಫಲಕಾರಿಯಾಗಿ ಕೆಲಸ ಮಾಡುತ್ತವೆ. ವಿಷಾದದ ಸಂಗತಿ ಎಂದರೆ ಪ್ರತಿಯೊಬ್ಬನೂ ತನ್ನ ಇಷ್ಟ ಬಂದಂತೆ ಕೆಲಸ ಮಾಡ ಬಯಸುತ್ತಾನೆ. ಇದು ಆಧುನಿಕಮಾನವನ ಅಪಾಯಕಾರಿ ರೋಗಗಳಲ್ಲಿ ಒಂದಾಗಿದೆ. ಯಾರೂ ಸರಿಯಾದ ಮಾರ್ಗವನ್ನು ಅನುಸರಿಸ ಬಯಸುವುದಿಲ್ಲ. ಅಂತೆಯೇ ಪ್ರತಿಯೊಬ್ಬನು ಆಧ್ಯಾತ್ಮಿಕ ವಾಗಿ ಮತ್ತು ಭೌತಿಕವಾಗಿ ವಿಫಲನಾಗುತ್ತಿದ್ದಾನೆ.

ಮಿ.ಫೇಲ್ : ಕೃಷ್ಣ ಪ್ರಜ್ಞಾ ಆಂದೋಲನವು ಬೆಳೆಯುತ್ತಿದೆಯೇ?

ಶ್ರೀಲ ಪ್ರಭುಪಾದ : ಖಂಡಿತವಾಗಿ, ಬಹಳ ಬೆಳೆಯುತ್ತಿದೆ, ನಾವು ಸಾವಿರಾರು ಪುಸ್ತಕಗಳನ್ನು ಮಾರುತ್ತಿದ್ದೇವೆ. ಎಂದು ತಿಳಿದರೆ ನೀವು ಆಶ್ಚರ್ಯಪಡಬಹುದು. ನಮ್ಮಲ್ಲಿ ಈ ಬಗ್ಗೆ ಸುಮಾರು 50 ಪುಸ್ತಕಗಳು ಇವೆ. ಅನೇಕ ಗ್ರಂಥಪಾಲರು ಮತ್ತು ಕಾಲೇಜು ಪ್ರಾಧ್ಯಾಪಕರೂ ಅವುಗಳನ್ನು ಬಹಳಷ್ಟು ಮೆಚ್ಚಿದ್ದಾರೆ. ಅವು ಹೊರಬರುವತನಕ ಅಂಥ ಸಾಹಿತ್ಯವೇ ಇರಲಿಲ್ಲ. ಜಗತ್ತಿಗೆ ಇದೊಂದು ಹೊಸ ಕೊಡುಗೆ.

ಮಿ.ಫೇಲ್: ಕೃಷ್ಣಪ್ರಜ್ಞೆ ಎಂದರೆ ತಲೆಬೋಳಿಸಿಕೊಂಡು ಕಾವೀವಸ್ತ್ರ ಧರಿಸುವುದೇ? ಕುಟುಂಬ ಜೀವನದಲ್ಲಿ ಸಿಲುಕಿದ ಸಾಮಾನ್ಯ ಮನುಷ್ಯನು ಕೃಷ್ಣಪ್ರಜ್ಞೆಯನ್ನು ಸಾಧಿಸುವುದು ಹೇಗೆ ಸಾಧ್ಯ?

ಶ್ರೀಲಪ್ರಭುಪಾದ: ತಲೆ ಬೋಳಿಸಿಕೊಳ್ಳುವುದಾಗಲೀ ಕಾವೀ ವಸ್ತ್ರ ಧರಿಸುವುದಾಗಲಿ ಅಗತ್ಯವಲ್ಲ. ಅವು ಒಳ್ಳೆಯ ಮಾನಸಿಕ ಸ್ಥಿತಿಯನ್ನು ಉಂಟುಮಾಡಬಹುದಷ್ಟೆ. ಒಬ್ಬ ಸೈನಿಕನು ಅಚ್ಚುಕಟ್ಟಾದ ಪೋಷಾಕುಧರಿಸಿದಾಗ ಅವನಿಗೆ ಶಕ್ತಿ ಬಂದಂತೆನಿಸುತ್ತದೆ. ತಾನೊಬ್ಬ ಸೈನಿಕ ಎಂದು ಅವನು ಭಾವಿಸುತ್ತಾನೆ. ಇದು ಹಾಗೆಯೇ. ಹಾಗೆಂದಮಾತ್ರದಿಂದ ಅವನು ಸಮವಸ್ತ್ರ ದಲ್ಲಿಲ್ಲದಿದ್ದರೆ ಯುದ್ಧಮಾಡುವುದು ಅಸಾಧ್ಯ ಎಂದಂತಲ್ಲ. ಹಾಗೆಯೇ ದೇವಪ್ರಜ್ಞೆಯನ್ನು

ತಡೆಯಲಾಗುವುದಿಲ್ಲ- ಅದನ್ನು ಯಾವ ಸನ್ನಿವೇಶಗಳಲ್ಲಿಯೂ ಕೂಡ ಪುನರುಜ್ಜೀವಿಸಿಕೊಳ್ಳ ಬಹುದು-ಆದರೆ ಕೆಲವೊಂದು ಸ್ಥಿತಿಗತಿಗಳು ಸಹಾಯಕವಾಗಿರುತ್ತದೆ. ಅಂತೆಯೇ ನೀವು ವಿಶಿಷ್ಟ ರೀತಿಯಲ್ಲಿ ಇರಬೇಕು ವಿಶಿಷ್ಟ ರೀತಿಯ ಉಡುಪು ಧರಿಸಬೇಕು, ವಿಶಿಷ್ಟರೀತಿಯಲ್ಲಿ ಉಣಬೇಕು ಹೀಗೆ ನಿಯಮಗಳನ್ನು ವಿಧಿಸುತ್ತೇನೆ. ಕೃಷ್ಣಪ್ರಜ್ಞಾ ಸಾಧನಕ್ಕೆ ಇವು ಸಹಕಾರಿಯಾಗಿವೆ. ಆದರೆ ಅನಿವಾರ್ಯವೇನಲ್ಲ.

ಮಿ. ಫೇಲ್ : ಹಾಗಾದರೆ ನಿತ್ಯ ಜೀವನ ನಡೆಸುತ್ತ ಒಬ್ಬನು ಕೃಷ್ಣ ಪ್ರಜ್ಞೆಯ ಶಿಷ್ಯ ನಾಗಬಹುದಲ್ಲವೆ ?

ಶ್ರೀಲ ಪ್ರಭುಪಾದ : ಆಗಬಹುದು.

ಮಿ. ಫೇಲ್ : ಹಾಗಾದರೆ ಈ ಮಾದಕಗಳ ವಿಷಯವೇನು ? ದೇವ ಸಾಕ್ಷಾತ್ಕಾರದ ಮಾರ್ಗದಲ್ಲಿ ಅವು ಸಹಾಯಕವೆ ?

ಶ್ರೀಲ ಪ್ರಭುಪಾದ : ಈ ಮಾದಕಗಳು ಭಗವತ್ ಸಾಕ್ಷಾತ್ಕಾರಕ್ಕೆ ಸಹಾಯಕ ವಾಗಿದ್ದರೆ ಅವು ಭಗವಂತನಿಗಿಂತ ಹೆಚ್ಚು ಶಕ್ತಿಯುತ ಎಂದಂತಾಯಿತು. ನಾವು ಇದನ್ನು ಹೇಗೆ ಒಪ್ಪಿಕೊಳ್ಳಬಹುದು ? ಮಾದಕಗಳು ರಾಸಾಯನಿಕ ವಸ್ತುಗಳು, ಅವು ಭೌತಿಕ ವಸ್ತುಗಳು. ಭೌತಿಕ ವಸ್ತುವು ಪರಮ ದಿವ್ಯ ಸ್ವರೂಪನಾದ ಭಗವಂತನ ಸಾಕ್ಷಾತ್ಕಾರಕ್ಕೆ ಸಹಾಯು ವಾಗುವುದು ಹೇಗೆ ಸಾಧ್ಯ ? ಇದು ಅಸಂಭವ. ಮಾದಕ ಸೇವನೆಯಿಂದ ಒಬ್ಬನು ಅನುಭವಿ ಸುವುದು ಒಂದು ಬಗೆಯ ಮಾದಕ ಸ್ಥಿತಿ ಅಥವಾ ಬುದ್ಧಿ ಭ್ರಮಣೆ ; ಅದು ಭಗವತ್ ಸಾಕ್ಷಾತ್ಕಾರವಲ್ಲ.

ಮಿ. ಫೇಲ್ : ಈವರೆಗೆ ಯಾರಾದರೂ ನೀವು ಈ ಮುಂಚೆ ಹೇಳಿದ ಆಧ್ಯಾತ್ಮ ವನ್ನು ನಿಜವಾಗಿ ಕಂಡುಕೊಂಡಿದ್ದಾರೆಂದು ಭಾವಿಸುವಿರಾ ?

ಶ್ರೀಲ ಪ್ರಭುಪಾದ : ಎಂಬುದರ ನಿಮ್ಮ ಅರ್ಥವೇನು ?

ಮಿ. ಫೇಲ್ : ಇದು ಸತ್ಯದ ಮತ್ತೊಂದು ಮಟ್ಟವನ್ನು ಅನುಭವಿಸಿದವರಿಗೆ ಕೊಟ್ಟ ಹೆಸರು, ಅಷ್ಟೇ.

ಶ್ರೀಲ ಪ್ರಭುಪಾದ : ನಾವು ಎಂಬ ಪದವನ್ನು ಉಪಯೋಗಿಸುವುದಿಲ್ಲ. ಭಗವತ್ ಸಾಕ್ಷಾತ್ಕಾರವನ್ನು ನಿಜಾನುಭವ ಎಂದು ನಾವು ಹೇಳುತ್ತೇವೆ. ನಾವು ದಿವ್ಯ ವೇದಿಕೆಯನ್ನು ತಲುಪಿದಾಗಲೇ ಈ ಸ್ಥಿತಿ ಉಂಟಾಗುತ್ತದೆ. ನಾವು ಜೀವನದ ದೈಹಿಕ ಕಲ್ಪನೆ ಹೊಂದಿರುವ ತನಕ, ನಮ್ಮ ತಿಳಿವಳಿಕೆ ಇಂದ್ರಿಯ ತೃಪ್ತಿಯೇ ಆಗಿರುತ್ತದೆ, ಕಾರಣವೆಂದರೆ ನಮ್ಮ ದೇಹವು ಇಂದ್ರಿಯ ನಿರ್ಮಿತವಾದದ್ದು. ನಾವು ದೈಹಿಕ ಮಟ್ಟದಿಂದ ಮೇಲೆ ಹೋಗಿ ಮನಸ್ಸೇ ಇಂದ್ರಿಯ ವ್ಯಾಪಾರಗಳ ಕೇಂದ್ರ ಎಂಬುದನ್ನು ಕಂಡಾಗ, ಮನಸ್ಸೇ ಸಾಕ್ಷಾತ್ಕಾರಕ್ಕೆ ಕೊನೆಯ ಹಂತವೆಂಬುದನ್ನು ಗ್ರಹಿಸುತ್ತೇವೆ. ಅದೇ ಮನೋಮಯ ಮಟ್ಟ. ಮನೋಮಯ ಮಟ್ಟ

ದಿಂದ ನಾವು ವಿಜ್ಞಾನಮಯ ಮಟ್ಟಕ್ಕೇರುತ್ತೇವೆ. ವಿಜ್ಞಾನಮಯ ಮಟ್ಟದಿಂದ ದಿವ್ಯಾನಂದದ ಮಟ್ಟವನ್ನು ಸೇರುತ್ತವೆ. ಕೊನೆಗೆ ದಿವ್ಯಾನಂದದ ಮಟ್ಟವನ್ನೂ ದಾಟಿ, ಬ್ರಹ್ಮಭೂತ ಮಟ್ಟವನ್ನು ತಲಪುತ್ತೇವೆ. ಇವು ಭಗವತ್ ಸಾಕ್ಷಾತ್ಕಾರದ ವಿವಿಧ ಹಂತಗಳು. ಆದರೆ ಈ ಯುಗದಲ್ಲಿ ಜನರು ಬಹಳ ಪತಿತರಾಗಿರುವುದರಿಂದ, ಹರೇಕೃಷ್ಣ, ಹರೇಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ, ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂಬ ಕೇವಲ ದೇವರ ಪವಿತ್ರ ನಾಮ ಸಂಕೀರ್ತನೆಯಿಂದ ನೇರವಾಗಿ ಬ್ರಹ್ಮಭೂತ ಮಟ್ಟವನ್ನು ಸೇರುವರೆಂದು ಶಾಸ್ತ್ರಗಳು ತಿಳಿಸಿವೆ. ನಾವು ಆಧ್ಯಾತ್ಮ ವೇದಿಕೆಯಲ್ಲಿಯೂ ಈ ಅಭ್ಯಾಸ ಮುಂದುವರಿಸಿದರೆ, ಕೂಡಲೇ ನಮ್ಮ ನಿಜ ಸ್ವರೂಪವನ್ನು ಅರಿತುಕೊಳ್ಳಬಲ್ಲೆವು. ಆಗ ಭಗವತ್ ಸಾಕ್ಷಾತ್ಕಾರದ ಮಾರ್ಗವು ಬಲು ಶೀಘ್ರ ಯಶಸ್ವಿಯಾಗುವುದು.

ಮಿ. ಫೇಲ್ : ನಾವು ಇಂದ್ರಿಯ ತೋಷಣದ ಈ ಹೊರ ಜಗತ್ತಿನಲ್ಲಿ ಸತ್ಯವನ್ನರಸದೆ ಅದನ್ನು ಅಂತರಂಗದಲ್ಲಿ ಕಂಡುಕೊಳ್ಳಬೇಕೆಂದು ಈಗ ಅನೇಕರು ಹೇಳುತ್ತಾರೆ.

ಶ್ರೀಲ ಪ್ರಭುಪಾದ: ಅಂತರ್ಮುಖಿಯಾಗುವುದೆಂದರೆ ನೀವು ಜೀವಾತ್ಮ ಎಂಬುದನ್ನು ಅರಿತುಕೊಂಡಂತೆ. ನೀವು ದೇಹವಲ್ಲ, ಜೀವಾತ್ಮ ಎಂಬುದನ್ನು ಅರಿತುಕೊಂಡಲ್ಲದೆ, ಅಂತರ್ಮುಖಿಯಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

"ನಾನು ಈ ದೇಹವೇ? ಅಥವಾ ಈ ದೇಹದಲ್ಲಿರುವ ಬೇರೆಯಾವುದಾದರು ವಸ್ತುವೇ" ಎಂಬುದನ್ನು ಮೊದಲು ನಾವು ಪರಿಶೀಲಿಸಬೇಕು. ದುರ್ದೈವದಿಂದ ಈ ವಿಷಯವನ್ನು ಯಾವ ಶಾಲೆ, ಕಾಲೇಜು ಅಥವಾ ವಿಶ್ವವಿದ್ಯಾಲಯದಲ್ಲಿಯೂ ಬೋಧಿಸುವುದಿಲ್ಲ."ಈ ದೇಹವೇ ನಾನು" ಎಂದೇ ಎಲ್ಲರೂ ಭಾವಿಸುತ್ತಾರೆ. ಉದಾಹರಣೆಗೆ : ಈ ದೇಶದಲ್ಲಿ ಎಲ್ಲ ಕಡೆಯಲ್ಲಿಯೂ ಜನ, "ನಾನು ದಕ್ಷಿಣ ಆಫ್ರಿಕದವನು, ಅವರು ಭಾರತೀಯರು, ಅವರು ಗ್ರೀಕರು" ಇತ್ಯಾದಿಯಾಗಿ ಭಾವಿಸುತ್ತಾರೆ. ನಿಜವಾಗಿ ಜಗತ್ತಿನಲ್ಲಿ ಎಲ್ಲರೂ ದೈಹಿಕ ಕಲ್ಪನಾ ಮಟ್ಟದಲ್ಲಿಯೇ ಇದ್ದಾರೆ. ಮನುಷ್ಯನು ಈ ದೇಹಗತ ಪ್ರಜ್ಞೆಯಿಂದ ಮೇಲೆ ಹೋದಾಗಲೇ ಕೃಷ್ಣಪ್ರಜ್ಞೆಯು ಪ್ರಾರಂಭವಾಗುತ್ತದೆ.

ಮಿ. ಫೇಲ್ : ಹಾಗಾದರೆ ದಿವ್ಯ ಕಣದ ಅರಿವೇ ಮುಂಚೆ ಮೂಡುತ್ತದೆ ಅಲ್ಲವೇ.

ಶ್ರೀಲ ಪ್ರಭುಪಾದ : ಹೌದು. ದೇಹದಲ್ಲಿ ಜೀವಾತ್ಮನಿದ್ದಾನೆ ಎಂಬುದನ್ನು ಅರಿಯುವುದೇ ಮೊದಲನೆಯ ಹೆಜ್ಜೆ. ಈ ಸರಳ ಸಂಗತಿಯನ್ನರಿಯದ ಹೊರತು, ಆಧ್ಯಾತ್ಮ ಪ್ರಗತಿಯ ಪ್ರಶ್ನೆಯೇ ಇಲ್ಲ.

ಮಿ. ಫೇಲ್ : ಅದು ಕೇವಲ ಬುದ್ಧಿಗೋಚರವಾದರೆ ಸಾಕೇ ?

ಶ್ರೀಲ ಪ್ರಭುಪಾದ : ಪ್ರಾರಂಭದಲ್ಲಿ, ಆಗಬಹುದು. ಜ್ಞಾನವು ದ್ವಿವಿಧವಾಗಿದೆ. ತಾತ್ವಿಕ ಮತ್ತು ಪ್ರಾಯೋಗಿಕ ಮೊದಲು ಮನುಷ್ಯನು ಆಧ್ಯಾತ್ಮ ವಿದ್ಯೆಯನ್ನು ತಾತ್ವಿಕವಾಗಿ ಅರಿತುಕೊಳ್ಳಬೇಕು. ಆಮೇಲೆ ಆ ಆಧ್ಯಾತ್ಮಿಕ ಮಟ್ಟದಲ್ಲಿ ಸಾಧನೆ ಮಾಡುತ್ತ, ಮನುಷ್ಯನು ಸ್ವಾನುಭವ ಸಿದ್ಧಿಯ ಮಟ್ಟಕ್ಕೆ ಬರುತ್ತಾನೆ.

ಆದರೆ ದುರ್ದೈವದಿಂದ ಈಗ ಪ್ರತಿಯೊಬ್ಬನೂ ಜೀವನದ ಭೌತಿಕ ಕಲ್ಪನೆಯ ಅಂಧಕಾರದಲ್ಲಿಯೇ ಇದ್ದಾನೆ. ಈ ಆಂದೋಲನವು ಸುಸಂಸ್ಕೃತರನ್ನು ಆ ಅಂಧಕಾರದಿಂದ ಮೇಲೆತ್ತುವುದಾದ್ದರಿಂದ ಈ ಆಂದೋಲನವು ಬಲು ಮಹತ್ವದ್ದಾಗಿದೆ. ಜನರು ದೈಹಿಕ ಕಲ್ಪನೆಯ ಮಟ್ಟದಲ್ಲಿರುವ ತನಕ ಅವರು ಪಶು ಮಟ್ಟಕ್ಕಿಂತ ಉತ್ತಮರಲ್ಲ. ಪಶುಗಳು "ನಾನು ನಾಯಿ", "ನಾನು ಬೆಕ್ಕು", "ನಾನು ಹಸು" ಎಂದು ತಿಳಿದುಕೊಂಡಿರುತ್ತವೆ ಹತ್ತಿರದಿಂದ ಯಾರಾದರೂ ಸುಳಿದರೆ ಸಾಕು, "ನಾನು ನಾಯಿ, ಕಾವಲಿರಲು ನನ್ನನ್ನು ಇಲ್ಲಿ ಇಡಲಾಗಿದೆ" ಎಂದು ಭಾವಿಸಿ ನಾಯಿ ಬೊಗಳುತ್ತದೆ. ಅದೇ ಪ್ರಕಾರ ನಾನೂ ನಾಯಿಯ ಬುದ್ಧಿಯನ್ನೇ ಅನುಕರಿಸಿ, "ನೀವು ಈ ದೇಶಕ್ಕೆ ಏಕೆ ಬಂದಿದ್ದೀರಿ ? ನನ್ನ ಅಧಿಕಾರ ಕ್ಷೇತ್ರಕ್ಕೆ ಏಕೆ ಬಂದಿದ್ದೀರಿ ?" ಎಂದು ವಿದೇಶೀಯರನ್ನು ಪ್ರತಿಭಟಿಸ ತೊಡಗಿದರೆ ನಾಯಿಗೂ ನನಗೂ ಇರುವ ವ್ಯತ್ಯಾಸವೇನು ?

ಮಿ. ಫೇಲ್ : ಯಾವ ವ್ಯತ್ಯಾಸವಿಲ್ಲ. ಸ್ವಲ್ಪ ವಿಷಯ ಪಲ್ಲಟ ಮಾಡಬಹುದಲ್ಲವೇ; ಆಧ್ಯಾತ್ಮ ಸಾಧನಕ್ಕೆ ವಿಶಿಷ್ಟ ಆಹಾರ ಪದ್ಧತಿಗಳನ್ನು ಅನುಸರಿಸುವುದು ಅಗತ್ಯವೇ ?

ಶ್ರೀಲ ಪ್ರಭುಪಾದ : ಹೌದು. ಈ ಇಡೀ ಕ್ರಮವು ನಮ್ಮ ಶುದ್ಧಿಗಾಗಿಯೇ ಇದೆ. ಆಹಾರ ಕ್ರಮವೂ ಆ ಶುದ್ಧಿ ಕ್ರಮದ ಒಂದು ಭಾಗ. "ನಿಮ್ಮ ಆಹಾರವೇ ನಿಮ್ಮ ಗುರುತು" ಎಂಬ ಗಾದೆ ನಿಮ್ಮಲ್ಲಿದೆಯೆಂದು ಕಾಣುತ್ತದೆ. ಅದು ಸತ್ಯ ಸಂಗತಿ. ನಮ್ಮ ದೈಹಿಕ ರಚನೆ ಮತ್ತು ಮಾನಸಿಕ ಸ್ಥಿತಿ ನಮ್ಮ ಆಹಾರ ಮತ್ತು ಅದನ್ನು ಸೇವಿಸುವ ವಿಧಾನವನ್ನವಲಂಬಿಸಿರುತ್ತವೆ. ಅಂತೆಯೇ ಕೃಷ್ಣಪ್ರಜ್ಞಾವಂತರಾಗಬೇಕಾದರೆ ಕೃಷ್ಣಾರ್ಪಿತ ನೈವೇದ್ಯವನ್ನೇ ಭುಂಜಿಸಬೇಕು ಎಂದು ಶಾಸ್ತ್ರಗಳು ಹೇಳಿವೆ. ಒಬ್ಬ ಕ್ಷಯರೋಗಿ ತಿಂದು ಬಿಟ್ಟಿದ್ದನ್ನು ನೀವು ಸೇವಿಸಿದರೆ ನಿಮಗೆ ಕ್ಷಯರೋಗ ಅಂಟಿಕೊಳ್ಳುತ್ತದೆ. ಅದೇ ಪ್ರಕಾರ ನೀವು ಕೃಷ್ಣ ಪ್ರಸಾದವನ್ನು ಸೇವಿಸಿದರೆ ನಿಮಗೆ ಕೃಷ್ಣ ಪ್ರಜ್ಞೆಯೂ ಅಂಟಿಕೊಳ್ಳುತ್ತದೆ. ಆದುದರಿಂದ ನಾವು ತಕ್ಷಣ ಏನನ್ನೂ ತಿನ್ನುವುದಿಲ್ಲ. ನಾವು ಮೊದಲು ಆಹಾರವನ್ನು ಕೃಷ್ಣನಿಗೆ ಸಮರ್ಪಿಸಿ, ಆಮೇಲೆ ತಿನ್ನುತ್ತೇವೆ. ಕೃಷ್ಣ ಪ್ರಜ್ಞೆಯಲ್ಲಿ ಮುಂದುವರಿಯಲು ಇದು ನಮಗೆ ಸಹಾಯಮಾಡುತ್ತದೆ.

ಮಿ. ಫೇಲ್ : ನೀವೆಲ್ಲರೂ ಶಾಖಾಹಾರಿಗಳೇ ?

ಶ್ರೀಲ ಪ್ರಭುಪಾದ : ಹೌದು. ಕೃಷ್ಣನು ಶಾಖಾಹಾರಿ. ಕೃಷ್ಣನು ದೇವರಾಗಿರುವುದರಿಂದ ಏನನ್ನೂ ತಿನ್ನಬಲ್ಲನು. ಆದರೆ ಭಗವದ್ಗೀತೆಯಲ್ಲಿ ಕೃಷ್ಣನು, "ಭಕ್ತನು ಪ್ರೇಮದಿಂದ ಒಂದು ಪತ್ರ, ಒಂದು ಹೂವು, ಒಂದು ಹಣ್ಣು, ನೀರು ನೀಡಿದರೂ ಸಹ ನಾನದನ್ನು ಸ್ವೀಕರಿಸುತ್ತೇನೆ" ಎಂದಿದ್ದಾನೆ. "ನನಗೆ ಮದ್ಯ, ಮಾಂಸ ಕೊಡಿ" ಎಂದು ಅವನೆಲ್ಲೂ ಹೇಳಿಲ್ಲ.

ಮಿ. ಫೇಲ್: ಹಾಗಾದರೆ ಹೊಗೆಸೊಪ್ಪಿನ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಶ್ರೀಲ ಪ್ರಭುಪಾದ : ಹೊಗೆಸೊಪ್ಪು ಕೂಡ ಮಾದಕ ಪದಾರ್ಥವೇ. ನಾವು ಈಗಾಗಲೇ ದೇಹಾತ್ಮಕ ಕಲ್ಪನೆಯಲ್ಲಿದ್ದೇ ಸಾಕಷ್ಟು ಅಮಲಿನಲ್ಲಿದ್ದೇವೆ, ನಾವು ಅಮಲನ್ನು ಹೆಚ್ಚಿಸಿಕೊಂಡರೆ ಹಾಳಾಗುತ್ತೇವೆ.

ಮಿ. ಫೇಲ್ : ಅಂದರೆ ಮಾಂಸ, ಮದ್ಯ ಮತ್ತು ತಂಬಾಕು ಇವು ದೈಹಿಕ ಪ್ರಜ್ಞೆಯನ್ನು ಮತ್ತಷ್ಟು ಪುಷ್ಟೀಕರಿಸುವುವೆಂದು ಭಾವಿಸುವಿರಾ ?

ಶ್ರೀಲ ಪ್ರಭುಪಾದ : ಹೌದು. ನಿಮಗೊಂದು ರೋಗವಿದೆ, ನೀವು ವಾಸಿಯಾಗಬೇಕೆಂದು ಬಯಸುತ್ತೀರಿ ಎಂದು ಭಾವಿಸೋಣ. ಆಗ ನೀವು ವೈದ್ಯನು ಹೇಳಿದ್ದನ್ನು ಕೇಳಬೇಕು. "ನೀವು ಇದನ್ನು ತಿನ್ನಬೇಡಿ, ಇದನ್ನು ಮಾತ್ರ ತಿನ್ನಿ" ಎಂದು ಅವನು ನಿಮಗೆ ಹೇಳಿದರೆ, ನೀವು ಈ ಪಥ್ಯವನ್ನು ಪಾಲಿಸಬೇಕು. ಅದೇ ಪ್ರಕಾರ ಈ ದೇಹಾಖ್ಯ ಕಲ್ಪನೆಯ ಜೀವನವನ್ನು ವಾಸಿ ಮಾಡಿಕೊಳ್ಳಲು ನಮಗೂ ಪಥ್ಯ ನಿಯಮವಿದೆ. ಹರೇ ಕೃಷ್ಣ ಕೀರ್ತನ ಮಾಡಬೇಕು. ಕೃಷ್ಣ ಲೀಲೆಗಳನ್ನು ಶ್ರವಣ ಮಾಡಬೇಕು, ಕೃಷ್ಣ ಪ್ರಸಾದವನ್ನು ಸೇವಿಸಬೇಕು. ಇದೇ ಕೃಷ್ಣ ಪ್ರಜ್ಞಾ ವಿಧಾನದ ಚಿಕಿತ್ಸೆ.



# ಪ್ರಾಸಂಗಿಕ ಸಮಸ್ಯೆಗಳಿಗೆ ಆಧ್ಯಾತ್ಮ ಪರಿಹಾರಗಳ ಶೋಧನೆ

## ಅಪರಾಧ : ಏಕೆ ಮತ್ತು ಏನು ಮಾಡಬೇಕು ?

**ಪ್ರತಿವರ್ಷ ಜಗತ್ತಿನಲ್ಲಿ ಅಪರಾಧ ನಿರೋಧ ಮತ್ತು ನಿಯಂತ್ರಣಕ್ಕಾಗಿ ಅಪಾರ ಹಣವೆಚ್ಚವಾಗುತ್ತದೆ. ಇಷ್ಟು ಪ್ರಯತ್ನ ನಡೆದಿದ್ದರೂ ಅಪರಾಧಗಳ ಸಂಖ್ಯೆ ಗಗನಕ್ಕೇರುತ್ತಿದೆ. ಅದರಲ್ಲಿಯೂ ಅಮೆರಿಕದ ಸಾರ್ವಜನಿಕ ಶಾಲೆಗಳಲ್ಲಿ ಅಪರಾಧ ಪ್ರಮಾಣವು ಸರಿಸುಮಾರು ಅಂಕೆಮೀರಿದ ಮಟ್ಟವನ್ನು ಮುಟ್ಟಿದೆ. 1975ರ ಮೇ ತಿಂಗಳಲ್ಲಿ ಷಿಕಾಗೊ ಪೊಲೀಸ್ ಇಲಾಖೆಯ ಸಾರ್ವಜನಿಕ ಸಂಪರ್ಕಾಧಿಕಾರಿಯಾದ ಲೆಫ್ಟಿನೆಂಟ್ ಡೇವಿಡ್‌ಮೋಜೀ ಅವರೊಂದಿಗೆ ಚರ್ಚಿಸುತ್ತಿದ್ದಾಗ ನಿಯಂತ್ರಣ ಅಸಾಧ್ಯವೆಂದು ಕಂಡುಬರುವ ಅಪರಾಧ ಸಮಸ್ಯೆಗೆ ಆಶ್ಚರ್ಯಕರವಾಗಿ ಸರಳವಾದ ಪರಿಹಾರವೊಂದನ್ನು ಶ್ರೀಲ ಪ್ರಭು ಪಾದರು ಸೂಚಿಸಿದರು.**

ಲೆಫ್ಟಿನೆಂಟ್ ಮೋಜೀ : ನಮ್ಮ ಅಪರಾಧ ನಿಯಂತ್ರಣ ಪ್ರಯತ್ನಗಳಿಗೆ ಸಹಾಯಕ ವಾಗುವ ಕೆಲವು ವಿಚಾರಗಳನ್ನು ನೀವು ಹೇಳುವಿರೆಂದು ನಾನು ಭಾವಿಸಿದ್ದೇನೆ, ಅವು ಗಳನ್ನು ತಿಳಿದುಕೊಳ್ಳಲು ನಾನು ಬಹಳ ಆಸಕ್ತನಾಗಿದ್ದೇನೆ.

ಶ್ರೀಲ ಪ್ರಭುಪಾದ : ಒಬ್ಬ ಪವಿತ್ರ ಮನುಷ್ಯ ಮತ್ತು ಪಾತಕಿ ಇವರಲ್ಲಿ ವ್ಯತ್ಯಾಸ ಇಷ್ಟೆ: ಒಳ್ಳೆಯವನ ಹೃದಯ ಶುದ್ಧವಾಗಿರುತ್ತದೆ, ಪಾತಕಿಯ ಹೃದಯ ಅಶುದ್ಧ. ಈ ಕಶ್ಮಲವು ಪಾತಕಿಯ ಹೃದಯುಗತವಾದ ಆದಮ್ಯ, ದುರಾಸೆಗಳ ರೂಪದಲ್ಲಿ ಇರುವ ಒಂದು ರೋಗವಿದ್ದಂತೆ. ಈ ಕಾಲದಲ್ಲಿ ಸಾಮಾನ್ಯವಾಗಿ ಜನರು ಈ ರೋಗಗ್ರಸ್ತರಾಗಿದ್ದಾರೆ, ಹೀಗಾಗಿ ಅಪರಾಧಪ್ರಮಾಣವು ಅಪಾರವಾಗಿ ಬೆಳೆದಿದೆ. ಜನ ಈ ಕಶ್ಮಲ ಕಳೆದುಕೊಂಡು ಶುದ್ಧರಾದರೆ ಅಪರಾಧ ಪ್ರಮಾಣವು ಮಾಯವಾಗುತ್ತದೆ. ಈ ಶುದ್ಧಿಕ್ರಮದ ಅತ್ಯಂತ ಸರಳಮಾರ್ಗವೆಂದರೆ ಜನ ಒಂದೆಡೆ ಸೇರಿ ಭಗವಂತನ ಪವಿತ್ರ ನಾಮಸಂಕೀರ್ತನೆ ಮಾಡು ವುದು. ಇದನ್ನೇ ಸಂಕೀರ್ತನ ಎಂದು ಕರೆಯುತ್ತೇವೆ. ಇದು ನಮ್ಮ ಕೃಷ್ಣಪ್ರಜ್ಞಾ ಆಂದೋಲನದ ಆಧಾರವಾಗಿದೆ. ಆದುದರಿಂದ ನೀವು ಅಪರಾಧವನ್ನು ತಡೆಗಟ್ಟ ಬಯಸಿದರೆ, ನೀವು ಸಾಧ್ಯವಿದ್ದಷ್ಟು ಹೆಚ್ಚು ಜನ ಒಂದೆಡೆ ಸೇರಬೇಕು ಮತ್ತು ಸಾಮೂಹಿಕ ಸಂಕೀರ್ತನೆ ನಡೆಸಬೇಕು. ಪವಿತ್ರ ಭಗವನ್ನಾಮದ ಸಾಮೂಹಿಕ ಸಂಕೀರ್ತನೆಯಿಂದ ಪ್ರತಿಯೊಬ್ಬನ

ಹೃದಯಗತವಾದ ಎಲ್ಲ ಕಶ್ಮಲಗಳು ಮಾಯವಾಗುತ್ತವೆ. ಆಗ ಅಪರಾಧವೆಂಬುದೇ ಇರುವುದಿಲ್ಲ.

ಲೆಫ್ಟಿನೆಂಟ್‌ಮೋಜೀ : ನಿಮ್ಮ ಭಾರತ ದೇಶದಲ್ಲಿ ಇರುವ ಅಪರಾಧಕ್ಕೂ ಮತ್ತು ಈ ಅಮೆರಿಕದಲ್ಲಿರುವ ಅಪರಾಧಕ್ಕೂ ಏನು ವ್ಯತ್ಯಾಸ ಎಂಬ ಬಗ್ಗೆ ನಿಮ್ಮ ವಿಚಾರವೇನು ?

ಶ್ರೀಲ ಪ್ರಭುಪಾದ : ನಿಮ್ಮ ಅರ್ಥದಲ್ಲಿ ಅಪರಾಧ ಎಂದರೇನು ?

ಲೆಫ್ಟಿನೆಂಟ್ ಮೋಜೀ : ಒಬ್ಬನು ಮತ್ತೊಬ್ಬನ ಹಕ್ಕುಗಳನ್ನು ತುಳಿಯುವುದು.

ಶ್ರೀಲ ಪ್ರಭುಪಾದ : ಹೌದು. ನಮ್ಮ ಅರ್ಥವೂ ಅದೇ ಆಗಿದೆ. ಉಪನಿಷತ್ತುಗಳಲ್ಲಿ ಈಶಾವಾಸಮಿದಂ ಸರ್ವಂ "ಎಲ್ಲವೂ ದೇವರಿಗೆ ಸೇರಿದ್ದು" ಎಂದು ಹೇಳಲಾಗಿದೆ. ಆದುದರಿಂದ ಪ್ರತಿಯೊಬ್ಬನೂ ತನಗೆ ದೇವರಿಂದ ನಿಯತವಾದಷ್ಟನ್ನು ಉಪಯೋಗಿಸುವ ಹಕ್ಕು ಹೊಂದಿದ್ದಾನೆ. ಅವನು ಮತ್ತೊಬ್ಬರ ಸ್ವತ್ತಿನ ಮೇಲೆ ಆಕ್ರಮಣ ಮಾಡುವಂತಿಲ್ಲ. ಹಾಗೆ ಮಾಡಿದರೆ ಅವನು ಅಪರಾಧಿಯಾಗುತ್ತಾನೆ ನಿಜವಾಗಿ, ನಿಮ್ಮ ಪ್ರಥಮ ಅಪರಾಧವೆಂದರೆ ನೀವು ಅಮೆರಿಕನ್ನರು, ಈ ಅಮೆರಿಕಾ ದೇಶವು ನಿಮ್ಮದೆಂದು ಭಾವಿಸಿಕೊಂಡಿದ್ದೀರಿ, ಎರಡು ನೂರು ವರ್ಷಗಳ ಹಿಂದೆ ಇದು ನಿಮ್ಮದಾಗಿರಲಿಲ್ಲ. ನೀವು ಜಗತ್ತಿನ ಬೇರೆ ಬೇರೆ ಭಾಗಗಳಿಂದ ಬಂದು ಇದನ್ನು ನಿಮ್ಮದಾಗಿ ಮಾಡಿಕೊಂಡಿದ್ದೀರಿ. ನಿಜವಾಗಿ ಇದು ದೇವರಿಗೆ ಸೇರಿದ್ದು, ಪ್ರತಿಯೊಬ್ಬನೂ ದೇವರ ಮಗುವಾಗಿರುವುದರಿಂದ ಇದು ಎಲ್ಲರಿಗೂ ಸೇರಿದ್ದು. ಬಹು ಜನರಿಗೆ ದೇವರ ಕಲ್ಪನೆಯೇ ಇಲ್ಲ. ಪ್ರಾಯಃ ಎಲ್ಲರೂ ದೇವಲಂಡರೇ ಆಗಿದ್ದಾರೆ. ಆದುದರಿಂದ ಅವರು ದೇವರನ್ನು ಪ್ರೀತಿಸುವಂತೆ ಅವರಿಗೆ ತಿಳುವಳಿಕೆ ನೀಡಬೇಕು. ಅಮೆರಿಕಾದಲ್ಲಿ ನಿಮ್ಮ ಸರಕಾರ "ನಾವು ದೇವರಲ್ಲಿ ನಂಬಿಕೆ ಇಟ್ಟಿದ್ದೇವೆ" ಎಂಬ ಘೋಷಣೆ ಹೊಂದಿದೆಯಂತೆ, ಅದು ನಿಜವೆ ?

ಲೆಫ್ಟಿನೆಂಟ್ ಮೋಜೀ : ಹೌದು.

ಶ್ರೀಲ ಪ್ರಭುಪಾದ : ಹಾಗಾದರೆ ದೇವರ ಬಗ್ಗೆ ಶಿಕ್ಷಣವೆಲ್ಲಿದೆ ! ದೇವರಲ್ಲಿ ನಂಬಿಕೆ ಇಡುವುದೇನೋ ಒಳ್ಳೆಯದೇ ಆದರೆ ಬರೀ ವಿಶ್ವಾಸವು ದೇವರ ಕಲ್ಪನೆಯು ವೈಜ್ಞಾನಿಕ ತಿಳುವಳಿಕೆಯಿಂದ ಸಮರ್ಥಿತವಾಗಿದ್ದ ಹೊರತು ಅದು ಉಳಿಯಲಾರದು. ತನಗೊಬ್ಬ ತಂದೆ ಇದ್ದಾನೆ ಎಂದು ಯಾರಾದರೂ ಹೇಳಬಹುದು. ಆದರೆ ಅವನು ಯಾರು ಎಂಬುದನ್ನು ತಿಳಿಯುವ ಹೊರತು ಆ ತಿಳುವಳಿಕೆ ಅಪರಿಪೂರ್ಣ. ದೇವರ ವಿಜ್ಞಾನದ ಬಗ್ಗೆ ಇಂಥ ಶಿಕ್ಷಣದ ಅಭಾವ ಕಂಡು ಬರುತ್ತದೆ.

ಲೆಫ್ಟಿನೆಂಟ್ ಮೋಜೀ : ಅದರ ಕೊರತೆ ಕೇವಲ ಈ ಅಮೆರಿಕಾ ದೇಶದಲ್ಲಿ ಮಾತ್ರ ಕಂಡು ಬರುತ್ತಿದೆ ಎಂಬುದು ತಮ್ಮ ಭಾವನೆಯೆ ?

ಶ್ರೀಲ ಪ್ರಭುಪಾದ : ಇಲ್ಲ, ಅದು ಎಲ್ಲ ಕಡೆಯಲ್ಲೂ ಕಂಡು ಬರುತ್ತಿದೆ. ನಾವು ಈಗ ಜೀವಿಸಿರುವ ಯುಗ ಕಲಿಯುಗ. ದೇವರನ್ನು ಮರೆಯುವ ಯುಗ. ಇದು ಅಪಾರ್ಥ ಮತ್ತು

ಕದನ ಕೋಲಾಹಲಗಳ ಯುಗ. ಜನರ ಮನಸ್ಸು ಕಶ್ಮಲದಿಂದ ತುಂಬಿದೆ. ಆದರೆ ದೇವರು ಮಹಾ ಸಮರ್ಥನಾಗಿದ್ದಾನೆ. ಅವನ ಪವಿತ್ರ ನಾಮ ಜಪ ಮಾತ್ರದಿಂದ ನಾವು ಪರಿಶುದ್ಧರಾಗುತ್ತೇವೆ, ನಮ್ಮ ಶಿಷ್ಯರು ತಮ್ಮ ಎಲ್ಲ ದುಶ್ಚಟಗಳನ್ನು ಬಿಟ್ಟು ಪರಿಶುದ್ಧರಾಗಿದ್ದಾರೆ ನಮ್ಮ ಆಂದೋಲನವು ಪವಿತ್ರ ಭಗವನ್ನಾಮದ ಸಂಕೀರ್ತನೆಯ ತತ್ವವನ್ನವಲಂಬಿಸಿದೆ. ನಾನು ಯಾವ ವ್ಯತ್ಯಾಸ ಮಾಡದೆ ಎಲ್ಲರಿಗೂ ಈ ಅವಕಾಶ ನೀಡುತ್ತೇನೆ. ಎಲ್ಲರೂ ನಮ್ಮ ಮಂದಿರಕ್ಕೆ ಬರಬಹುದು, ಹರೇಕೃಷ್ಣ ಮಂತ್ರ ಕೀರ್ತಿಸಬಹುದು ಮತ್ತು ಕಿಂಚಿತ್ ಪ್ರಸಾದವನ್ನು ಉಪಹಾರವಾಗಿ ಸ್ವೀಕರಿಸಬಹುದು ಮತ್ತು ಕ್ರಮೇಣ ಶುದ್ಧಿ ಹೊಂದಬಹುದು. ಸರಕಾರದವರು ನಮಗೆ ಸ್ವಲ್ಪ ಸೌಲಭ್ಯವನ್ನು ಒದಗಿಸಿಕೊಟ್ಟರೆ ನಾವು ಸಾಮೂಹಿಕ ಸಂಕೀರ್ತನೆಯನ್ನು ನಡೆಸಬಹುದು. ಆಗ ನಿಸ್ಸಂದೇಹವಾಗಿ ಇಡೀ ಸಮಾಜವು ಬದಲಾವಣೆ ಹೊಂದುವುದು.

ಲೆಫ್ಟಿನೆಂಟ್ ಮೋಜೀ: ನಾನು ನಿಮ್ಮನ್ನು ಸರಿಯಾಗಿ ಗ್ರಹಿಸಿರುವುದಾದರೆ, ಸ್ವಾಮಿ, ನಾವು ಮತ್ತೆ ಧರ್ಮತತ್ವಗಳತ್ತ ಹೊರಳಬೇಕೆಂದು ತಾವು ಹೇಳುತ್ತಿದ್ದೀರಿ.

ಶ್ರೀಲ ಪ್ರಭುಪಾದ : ಖಂಡಿತವಾಗಿ ಧಾರ್ಮಿಕ ಆಚಾರವಿಲ್ಲದಿದ್ದರೆ ನಾಯಿಗೂ, ಮನುಷ್ಯನಿಗೂ ಏನು ವ್ಯತ್ಯಾಸ ? ಮನುಷ್ಯನು ಧರ್ಮ ಸೂಕ್ಷ್ಮವನ್ನು ತಿಳಿಯಬಲ್ಲನು. ಆದರೆ ನಾಯಿ ಅರಿತುಕೊಳ್ಳಲಾರದು. ಇದೇ ವ್ಯತ್ಯಾಸ. ಮಾನವ ಸಮಾಜವು ನಾಯಿ ಬೆಕ್ಕುಗಳ ಹಂತದಲ್ಲಿ ಉಳಿಯುವುದಾದರೆ ನೀವು ಶಾಂತಿಯುತ ಸಮಾಜವನ್ನು ಹೇಗೆ ನಿರೀಕ್ಷಿಸಬಹುದು. ನೀವು ಒಂದು ಡಜನ್ ನಾಯಿಗಳನ್ನು ಕೂಡಿ ಹಾಕಿದರೆ ಅವು ಶಾಂತವಾಗಿರುವುದು ಸಾಧ್ಯವೆ ? ಹಾಗೆಯೇ, ನಾಯಿಗಳ ಮಟ್ಟದ ಸ್ವಭಾವದಿಂದ ಮಾನವ ಸಮಾಜವು ತುಂಬಿದ್ದರೆ ನೀವು ಶಾಂತಿಯನ್ನು ಹೇಗೆ ನಿರೀಕ್ಷಿಸಬಹುದು ?

ಲೆಫ್ಟಿನೆಂಟ್ ಮೋಜೀ : ನಾನು ನಿಮ್ಮ ಧರ್ಮ ನಂಬಿಕೆಗಳನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿಲ್ಲವಾದ ಕಾರಣ ನನ್ನ ಕೆಲವು ಪ್ರಶ್ನೆಗಳು ಅವಿನಯವೆಂದು ತೋರಬಹುದು. ಆದರೆ ನನಗೆ ಅಂಥ ಯಾವ ಭಾವನೆಯೂ ಇಲ್ಲ.

ಶ್ರೀಲ ಪ್ರಭುಪಾದ : ಇಲ್ಲ. ಇದು ನನ್ನ ಧಾರ್ಮಿಕ ನಂಬಿಕೆಗಳ ಪ್ರಶ್ನೆಯಲ್ಲ. ನಾನು ಕೇವಲ ಮಾನವ ಜೀವನ ಮತ್ತು ಪಶು ಜೀವನದ ನಡುವಿನ ವ್ಯತ್ಯಾಸವನ್ನು ತಿಳಿಸಿದೆನಷ್ಟೆ. ಪಶುಗಳು ದೇವರನ್ನರಿತುಕೊಳ್ಳುವುದು ಸಾಧ್ಯವಿಲ್ಲ ಆದರೆ ಮಾನವನಿಗೆ ಇದು ಸಾಧ್ಯ ಆದರೆ ದೇವರನ್ನರಿತುಕೊಳ್ಳಲು ಮಾನವರಿಗೆ ಅವಕಾಶ ಒದಗಿಸದಿದ್ದರೆ ಅವರು ಬೆಕ್ಕು ನಾಯಿಗಳ ಮಟ್ಟದಲ್ಲಿಯೇ ಉಳಿಯುತ್ತಾರೆ. ನೀವು ನಾಯಿ ಬೆಕ್ಕುಗಳ ಸಮಾಜದಲ್ಲಿ ಶಾಂತಿಯನ್ನು ಪಡೆಯಲಾರಿರಿ. ಆದುದರಿಂದ, ಸರಕಾರದವರು ಜನರು ಭಗವತ್ಪ್ರಜ್ಞೆಯನ್ನು ಹೊಂದುವಂತೆ ತರಬೇತಿ ನೀಡುವುದು ಅವರ ಕರ್ತವ್ಯ. ಇಲ್ಲದಿದ್ದರೆ, ಸದಾ ತೊಂದರೆಗೆ ಕಾರಣ, ಭಗವತ್ಪ್ರಜ್ಞೆಯಿಲ್ಲದಲ್ಲಿ ನಾಯಿ ಮನುಷ್ಯನ ವ್ಯತ್ಯಾಸವೇ ಉಳಿಯುವುದಿಲ್ಲ. ನಾಯಿಯೂ ತಿನ್ನುತ್ತದೆ, ನಾವೂ ತಿನ್ನುತ್ತೇವೆ, ನಾಯಿಯೂ ನಿದ್ರಿಸುತ್ತದೆ, ನಾವೂ ನಿದ್ರಿಸುತ್ತೇವೆ, ನಾಯಿಯೂ ಸಂಭೋಗಿಸುತ್ತದೆ, ನಾವು ಸಂಭೋಗಿಸುತ್ತೇವೆ, ನಾಯಿಯೂ ಆತ್ಮ ರಕ್ಷಣೆಗೆ ಪ್ರಯತ್ನಿಸುತ್ತದೆ, ನಾವು ಪ್ರಯತ್ನಿಸುತ್ತೇವೆ. ಇವು ನಮಗೂ ನಾಯಿಗೂ ಇರುವ ಸಾಮಾನ್ಯ ಅಂಶಗಳು. ಕೇವಲ

ವ್ಯತ್ಯಾಸವೆಂದರೆ ನಾಯಿಗೆ ದೇವರೊಡನೆ ಅದಕ್ಕಿರುವ ಸಂಬಂಧವನ್ನು ತಿಳಿಸಿಕೊಡಲು ಸಾಧ್ಯವಿಲ್ಲ. ಆದರೆ ಮನುಷ್ಯನ ವಿಷಯದಲ್ಲಿದು ಸಾಧ್ಯ.

ಲೆಫ್ಟಿನೆಂಟ್ ಮೋಜೀ : ಮತ್ತೆ ನಾವು ಧಾರ್ಮಿಕ ಸ್ಥಿತಿಗೆ ಮರಳಲು ಪೂರ್ವ ಭಾವಿಯಾಗಿ ಶಾಂತಿ ಅವಶ್ಯವಲ್ಲವೇ ? ನಮಗೆ ಮೊದಲು ಶಾಂತಿಬೇಕಲ್ಲವೇ ?

ಶ್ರೀಲ ಪ್ರಭುಪಾದ : ಇಲ್ಲ, ಇಲ್ಲ. ಅದೇ ಬಂದಿರುವ ತೊಂದರೆ. ಈಗ ಧರ್ಮ ವೇನೆಂಬುದೇ ಯಾರಿಗೂ ತಿಳಿದಿಲ್ಲ. ಸರಕಾರದ ಕಾನೂನುಗಳಿಗೆ ವಿಧೇಯರಾಗಿರುವುದು ಹೇಗೆ ಒಳ್ಳೆಯ ನಾಗರಿಕತೆಯೆನಿಸುವುದೋ ಹಾಗೆಯೇ, ದೇವರ ನಿಯಮಗಳಿಗೆ ವಿಧೇಯರಾಗಿರುವುದೇ ಧರ್ಮ. ದೇವರೆಂದರೇನೆಂಬುದನ್ನು ಯಾರೂ ಅರಿತಿಲ್ಲವಾದ ಕಾರಣ, ದೇವರ ನಿಯಮಗಳ ನ್ನಾಗಲೀ ಅಥವಾ ಧರ್ಮದ ಅರ್ಥವನ್ನಾಗಲೀ ಯಾರೂ ಅರಿತಿಲ್ಲ. ಇದು ಇಂದಿನ ಸಮಾಜದ ಜನರ ಸ್ಥಿತಿ. ಅವರು ಧರ್ಮವನ್ನು ಒಂದು ಶ್ರದ್ಧೆಯೆಂದು ಭಾವಿಸಿ ಅದನ್ನು ಮರೆಯುತ್ತಿದ್ದಾರೆ. ಶ್ರದ್ಧೆಯು ಅಂಥ ಶ್ರದ್ಧೆಯಾಗಿರಬಹುದು. ಶ್ರದ್ಧೆ ಎಂಬುದು ಧರ್ಮದ ನಿಜವಾದ ವಿವರಣೆ ಅಲ್ಲ. ಧರ್ಮ ಎಂದರೆ ದೇವದತ್ತ ನಿಯಮಗಳು, ಅವುಗಳನ್ನು ಪಾಲಿಸುವವನೇ ಧಾರ್ಮಿಕನು, ಅವನು ಕ್ರಿಶ್ಚನ್, ಹಿಂದೂ ಅಥವಾ ಮುಸ್ಲಿಮ್ ಯಾರೇ ಆಗಿರಬಹುದು.

ಲೆಫ್ಟಿನೆಂಟ್ ಮೋಜೀ: ಭಾರತದಲ್ಲಿ ಧಾರ್ಮಿಕ ಸಂಪ್ರದಾಯಗಳನ್ನು ಶತಶತಮಾನ ಗಳಿಂದ ಆಚರಿಸುತ್ತ ಬಂದಿದ್ದರೂ, ಜನ ಧರ್ಮಜೀವನದೆಡೆಗೆ ತಿರುಗುವ ಬದಲು ಆಧ್ಯಾತ್ಮ ಜೀವನಕ್ಕೆ ವಿಮುಖರಾಗುತ್ತ ನಡೆದಿದ್ದಾರೆಂಬುದು ನಿಜವಲ್ಲವೇ? ನಾನು ಈ ಮಾತನ್ನು ತುಂಬ ಗೌರವಭಾವನೆಯಿಂದ ಕೇಳುತ್ತಿದ್ದೇನೆ?

ಶ್ರೀಲ ಪ್ರಭುಪಾದ: ಹೌದು, ಆದರೆ ಅದು ಕೇವಲ ದುಷ್ಟನಾಯಕತ್ವದ ಪರಿಣಾಮ ಅಷ್ಟೆ. ಅನ್ಯಥಾ, ಬಹುಜನ ಭಾರತೀಯರು ದೇವರ ಅಸ್ತಿತ್ವದ ಬಗ್ಗೆ ಪೂರ್ಣ ನಂಬಿಕೆಯುಳ್ಳವ ರಾಗಿದ್ದಾರೆ ಮತ್ತು ಅವರು ದೇವರ ನಿಯಮಗಳನ್ನು ಅನುಸರಿಸಲು ಯತ್ನಿಸುತ್ತಾರೆ. ಇಲ್ಲಿ ಪಶ್ಚಿಮದಲ್ಲಿ ದೊಡ್ಡದೊಡ್ಡ ಕಾಲೇಜಿನ ಪ್ರೊಫೆಸರುಗಳು ಕೂಡ ದೇವರನ್ನಾಗಲೀ ಅಥವಾ ಮರಣೋತ್ತರ ಜೀವನವನ್ನಾಗಲೀ ನಂಬುವುದಿಲ್ಲ. ಆದರೆ ಭಾರತದಲ್ಲಿ ಕಡುಬಡವನು ಕೂಡ ದೇವರನ್ನು ಜನ್ಮಾಂತರಗಳನ್ನು ನಂಬುತ್ತಾನೆ. ತಾನು ಪಾಪಮಾಡಿದರೆ ಅದರ ಫಲ ಅನುಭವಿಸ ಬೇಕಾಗುತ್ತದೆ. ಸತ್ಕಾರ್ಯಮಾಡಿದರೆ ಸತ್ಫಲ ಉಂಟು ಎಂಬುದನ್ನು ಅವನು ಅರಿತಿದ್ದಾನೆ. ಇಂದಿಗೂ ಯಾರಾದರಿಬ್ಬರಲ್ಲಿ ವಿವಾದ ಉಂಟಾದರೆ ಅದರ ತೀರ್ಮಾನಕ್ಕಾಗಿ ಅವರು ಮಂದಿರಕ್ಕೆ ಹೋಗುತ್ತಾರೆ. ಪ್ರತಿಪಕ್ಷದವರು ದೇವರಮೂರ್ತಿಗಳ ಇದಿರಿನಲ್ಲಿ ಸುಳ್ಳುನುಡಿಯಲು ಹೆದರುತ್ತಾರೆ ಎಂಬುದೇ ಅವರ ನಂಬುಗೆ. ಹೀಗೆ ಅನೇಕ ವಿಷಯುಗಳಲ್ಲಿ ಭಾರತವು ಬಹುಮಟ್ಟಿಗೆ ಇನ್ನೂ ಧಾರ್ಮಿಕವಾಗಿದೆ. ಭಾರತದಲ್ಲಿ ಜನ್ಮತಾಳುವುದರ ವಿಶೇಷ ಲಾಭ ಇದೇ. ಅದು ಹೊಣೆಗಾರಿಕೆಯ ಜನ್ಮವೂ ಹೌದು. ಚೈತನ್ಯ ಮಹಾಪ್ರಭುಗಳು ಹೀಗೆ ಹೇಳಿದ್ದಾರೆ:

ಭಾರತ-ಭೂಮಿತೇ ಹೈಲ ಮನುಷ್ಯ-ಜನ್ಮ ಯಾರ
ಜನ್ಮ ಸಾರ್ಥಕ ಕರಿ ಕರ ಪರ-ಉಪಕಾರ ( ಚೈತನ್ಯ-ಚರಿತಾಮೃತ, ಆದಿ 9-41)

ಭಾರತದಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬನೂ ಕೃಷ್ಣಪ್ರಜ್ಞೆಯನ್ನು ಹೊಂದಿ ತನ್ನ ಜೀವನ

ವನ್ನು ಪರಿಪೂರ್ಣಗೊಳಿಸಿಕೊಳ್ಳಬೇಕು. ಆಮೇಲೆ ಅವನು ಕೃಷ್ಣಪ್ರಜ್ಞೆಯನ್ನು ವಿಶ್ವಕ್ಕೆಲ್ಲ ಹಂಚಬೇಕು.

ಲೆಫ್ಟಿನೆಂಟ್ ಮೋಜೀ: ಸ್ವಾಮಿ, ಒಂಟೆ ಸೂಜಿಯ ಮೊನೆಯಿಂದ ಹಾಯ್ದು ಹೋಗುವುದು ಸುಲಭ, ಆದರೆ ಒಬ್ಬ ಶ್ರೀಮಂತನು ದೇವರ ಮುಂದೆ ಬರುವುದು ಬಹು ಅಸಾಧ್ಯ ಎಂದು ಕ್ರಿಶ್ಚನರಲ್ಲಿ ಒಂದು ಗಾದೆಯಿದೆ. ಅಮೆರಿಕದ ಮತ್ತು ಇತರ ಪಾಶ್ಚಾತ್ಯ ದೇಶಗಳ ಐಸಿರಿಯು ಆಧ್ಯಾತ್ಮಿಕ ಶ್ರದ್ಧೆಗೆ ಆತಂಕವಾಗಿದೆಯೆಂದು ನೀವು ಭಾವಿಸುವಿರಾ?

ಶ್ರೀಲ ಪ್ರಭುಪಾದ : ಹೌದು, ಅತಿ ಸಿರಿವಂತಿಕೆ ಆತಂಕವೇ, ಭಗವದ್ಗೀತೆಯಲ್ಲಿ ಕೃಷ್ಣನು ಹೀಗೆ ಹೇಳುತ್ತಾನೆ (2-44) :

ಭೋಗೈಶ್ವರ್ಯ ಪ್ರಸಕ್ತಾನಾಮ್ ತಯಾಪಹೃತ-ಚೇತಸಾಮ್।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌನ ವಿಧೀಯತೇ॥

ಒಬ್ಬನು ಐಹಿಕವಾಗಿ ಅತಿ ಐಶ್ವರ್ಯವಂತನಾಗಿದ್ದರೆ, ಅವನು ದೇವರನ್ನು ಮರೆಯುತ್ತಾನೆ. ಆದುದರಿಂದ ಅತಿಸಿರಿವಂತಿಕೆಯಿಂದ ದೇವರನ್ನು ಅರಿತುಕೊಳ್ಳಲು ಅನರ್ಹತೆ ಉಂಟಾಗುವುದು. ಕೇವಲ ಬಡವನೇ ದೇವರನ್ನು ಅರಿಯುತ್ತಾನೆಂದು ನಿಶ್ಚಯ ನಿಯಮವೇನೂ ಇಲ್ಲ. ಆದರೆ ಒಬ್ಬನು ಅಸಾಧಾರಣ ಸಿರಿವಂತನಾಗಿದ್ದರೆ, ಇನ್ನೂ ಹೆಚ್ಚು ಹಣ ಗಳಿಸಬೇಕೆಂಬುದೇ ಅವನ ಹಂಬಲವಾಗಿರುತ್ತದೆ. ಆದುದರಿಂದ ಅವನು ಆಧ್ಯಾತ್ಮ ಉಪದೇಶಗಳನ್ನು ಅರಿತುಕೊಳ್ಳುವುದು ಕಷ್ಟ.

ಲೆಫ್ಟಿನೆಂಟ್ ಮೋಜೀ: ಅಮೆರಿಕದಲ್ಲಿ ಕ್ರಿಶ್ಚನ್‌ಶ್ರದ್ಧೆಗೆ ಸೇರಿದವರೆಲ್ಲರೂ ಇಂಥ ವಿಷಯಗಳನ್ನು ನಂಬುತ್ತಾರೆ. ಒಂದು ಧರ್ಮದ ಆಧ್ಯಾತ್ಮಿಕ ನಂಬಿಕೆಗಳಿಗೂ ಮತ್ತೊಂದರ ನಂಬಿಕೆಗಳಿಗೂ ಯಾವ ಹೆಚ್ಚಿನ ವ್ಯತ್ಯಾಸವಿದ್ದಂತೆ ನನಗೆ ಕಂಡುಬರುವುದಿಲ್ಲ.

14987

ಶ್ರೀಲ ಪ್ರಭುಪಾದ: ಹೌದು, ಎಲ್ಲ ಧರ್ಮಗಳ ಸಾರ ಅಷ್ಟೆ. ಒಬ್ಬನು ಯಾವುದೆ ಧರ್ಮಪದ್ಧತಿಯನ್ನು ಅನುಸರಿಸಲಿ, ಅವನು ದೇವರನ್ನು ಅರಿತುಕೊಳ್ಳಬೇಕು ಮತ್ತು ಪ್ರೀತಿಸಬೇಕು. ನೀವು ಕ್ರಿಶ್ಚನ್‌ರಾಗಿದ್ದರೆ, "ಅದು ಒಳ್ಳೆಯದಲ್ಲ; ನೀವು ನಮ್ಮಹಾಗೆ ಆಗಬೇಕು" ಎಂದು ನಾವು ಹೇಳುವುದಿಲ್ಲ. ನೀವು ಕ್ರಿಶ್ಚನ್, ಮುಸ್ಲಿಮ್ ಅಥವಾ ಹಿಂದೂ ಯಾರೇ ಆಗಿರಲಿ, ದೇವರನ್ನು ಅರಿಯಲು ಮಾತ್ರ ಯತ್ನಿಸಿರಿ ಮತ್ತು ಅವನನ್ನು ಪ್ರೀತಿಸಿರಿ ಎಂದು ಹೇಳುತ್ತೇವೆ

ಲೆಫ್ಟಿನೆಂಟ್ ಮೋಜೀ: ನಾನು ನನ್ನ ಮೂಲ ಪ್ರಶ್ನೆಗೆ ಹಿಂತಿರುಗುವುದಾದರೆ, ಅಪರಾಧಗಳು ಕಡಿಮೆಯಾಗುವಂತೆ ಸಹಾಯ ಮಾಡಲು ನೀವು ಏನು ಸಲಹೆ ನೀಡಬಯಸುತ್ತೀರಿ ಎಂದು ಕೇಳಬಹುದೇ? ನೀವೇ ಹೇಳಿದ ಹಾಗೆ-ದೇವರೆಡೆಗೆ ಮರಳುವುದೇ ಪ್ರಥಮದಾರಿ. ಆ ಬಗ್ಗೆ ಸಂದೇಹವೇನಿಲ್ಲ. ಆದರೆ ಈ ಅಪರಾಧಿಕ ಸ್ವಭಾವವನ್ನು ಕಡಿಮೆ ಮಾಡಲು ತತ್ಕಾಲದಲ್ಲಿ ನಾವು ಏನಾದರೂ ಮಾಡುವುದು ಸಾಧ್ಯವಿದೆಯೇ ?

ಶ್ರೀಲ ಪ್ರಭುಪಾದ : ಇದೆ. ನಾನು ನಮ್ಮ ಮಾತಿನ ಪ್ರಾರಂಭದಲ್ಲಿ ಈಗಾಗಲೆ ಸೂಚಿಸಿದ ಹಾಗೆ, ದೇವರ ಪವಿತ್ರನಾಮವನ್ನು ಕೀರ್ತನೆಮಾಡಲು ಮತ್ತು ಪ್ರಸಾದ ವಿತರಣೆ ಮಾಡಲು ನೀವು ನಮಗೆ ಸೌಲಭ್ಯಗಳನ್ನು ಒದಗಿಸಿಕೊಡಬೇಕು. ಆಗ ಜನರಲ್ಲಿ ಅದ್ಭುತ ಬದಲಾವಣೆಯಾಗುವುದು ನಾನೊಬ್ಬನೇ ಭಾರತದಿಂದ ಬಂದೆ, ಈಗ ನಾನು ಅನೇಕ ಶಿಷ್ಯರನ್ನು ಹೊಂದಿದ್ದೇನೆ. ನಾನು ಮಾಡಿದ್ದೇನು? ನಾನು ಅವರಿಗೆ ಕುಳಿತುಕೊಂಡು ಹರೇಕೃಷ್ಣ ಮಂತ್ರಜಪಮಾಡಲು ಹೇಳಿದೆ. ಆಮೇಲೆ ಅವರಿಗೆ ಸ್ವಲ್ಪ ಪ್ರಸಾದವನ್ನು ನೀಡಿದೆ. ಇದನ್ನೇ ಬಲು ವ್ಯಾಪಕವಾಗಿ ಮಾಡಿದಾಗ, ಅದರಿಂದ ಇಡೀ ಸಮಾಜವೇ ಸುಖಿಯಾಗುತ್ತದೆ ಇದು ನಿಜಸಂಗತಿ.

ಲೆಫ್ಟಿನೆಂಟ್ ವೋಜೀ: ನೀವು ಈ ಕಾರ್ಯಕ್ರಮವನ್ನು ಸಿರಿವಂತ ಪ್ರದೇಶದಲ್ಲಿ ಪ್ರಾರಂಭಿಸಬಯಸುವಿರೊ ಅಥವಾ ಬಡಪ್ರದೇಶದಲ್ಲಿಯೊ ?

ಶ್ರೀಲ ಪ್ರಭುಪಾದ: ನಾವು ಈ ಬಗೆಯ ಯಾವ ವ್ಯತ್ಯಾಸವನ್ನು ಮಾಡುವುದಿಲ್ಲ. ಎಲ್ಲ ತರಹದ ಜನರಿಗೂ ಸುಲಭವಾಗಿ ಅನುಕೂಲವಾಗುವಂಥ ಸಂಕೀರ್ತನೆ ನಡೆಸಲು ಯುಕ್ತ ಸ್ಥಳವಾಗಿರಬೇಕು. ಕೇವಲ ಬಡವರಿಗೆ ಮಾತ್ರ ಇದರ ಪ್ರಯೋಜನ ಬೇಕಾಗಿದೆ, ಸಿರಿವಂತರಿಗಲ್ಲ ಎಂಬ ನಿರ್ಬಂಧವೇನೂ ಇಲ್ಲ. ಎಲ್ಲರೂ ಶುದ್ಧರಾಗಬೇಕು. ಅಪರಾಧ ಸ್ವಭಾವ ಕೇವಲ ಬಡವರಲ್ಲಿ ಇರುತ್ತದೆ ಎಂದು ನೀವು ಭಾವಿಸುವಿರಾ ?

ಲೆಫ್ಟಿನೆಂಟ್ವೋಜೀ: ಇಲ್ಲ. ಈ ಕಾರ್ಯಕ್ರಮಗಳನ್ನು ಸಿರಿವಂತರ ಪ್ರದೇಶಕ್ಕಿಂತ ಬಡವರ ಪ್ರದೇಶದಲ್ಲಿ ನಡೆಸಿದರೆ ಅವರ ಮೇಲೆ ಹೆಚ್ಚು ಪ್ರಯೋಜನ ಬೀರಬಹುದೆ– ಆ ಸಮಾಜವು ಹೆಚ್ಚು ಬಲಯುತವಾಗಬಹುದೆ–ಎಂದು ನಾನು ಕೇಳಬಯಸಿದೆನಷ್ಟೆ.

ಶೀಲಪ್ರಭುಪಾದ: ನಮ್ಮ ಚಿಕಿತ್ಸೆ ಇರುವುದು ಆಧ್ಯಾತ್ಮಿಕವಾಗಿ ದುರ್ಬಲನಾದ ವ್ಯಕ್ತಿಗೆ ರೋಗತಗಲಿದಾಗ ಅವನು ಬಡವಬಲ್ಲಿದ ಎಂಬ ವ್ಯತ್ಯಾಸಕ್ಕೆ ಆಸ್ಪದವೇಇಲ್ಲ, ಅವರೀರ್ವರನ್ನು ಅದೇ ಆಸ್ಪತ್ರೆಗೆ ಸೇರಿಸಲಾಗುತ್ತದೆ. ಬಡವಬಲ್ಲಿದರಿಬ್ಬರೂ ಬರಲು ಅನುಕೂಲವಾಗುವಂಥ ಸ್ಥಳದಲ್ಲಿ ಹೇಗೆ ಆಸ್ಪತ್ರೆ ಇರಬೇಕೊ ಹಾಗೆಯೇ, ಸಂಕೀರ್ತನ ಸೌಲಭ್ಯವು ಸರ್ವರಿಗೂ ದೊರೆಯುವಂತಿರಬೇಕು. ಪ್ರತಿಯೊಬ್ಬರೂ ಪ್ರಾಪಂಚಿಕಸೋಂಕಿಗೆ ಒಳಗಾಗಿರುವುದರಿಂದ, ಎಲ್ಲರೂ ಅದರ ಪ್ರಯೋಜನ ಪಡೆಯುವಂತಾಗಬೇಕು.

ಸಿರಿವಂತನು ತಾನು ಎಲ್ಲರಿಗಿಂತ ಹೆಚ್ಚು ರೋಗಗ್ರಸ್ತನಾಗಿದ್ದರೂ ಕೂಡ ತಾನು ಪೂರ್ಣ ಆರೋಗ್ಯವಂತನೆಂದು ಭಾವಿಸುತ್ತಾನೆ, ಅದೇ ಬಂದಿರುವ ತೊಂದರೆ. ಆದರೆ ಬಡವಬಲ್ಲಿದರಿಬ್ಬರಲ್ಲಿಯೂ ಅಪರಾಧೀಸ್ವಭಾವ ಇದೆಯೆಂಬುದು ಪೋಲೀಸರಾದ ನಿಮಗೆ ತಿಳಿದಿದೆ. ಆದುದರಿಂದ ಎಲ್ಲರ ಮನಸ್ಸಿನ ಕಶ್ಮಲವನ್ನು ತೊಳೆಯಲು ಬಡವ ಬಲ್ಲಿದರೆಂಬ ಭೇದವಿಲ್ಲದೆ ನಮ್ಮ ಸಂಕೀರ್ತನ ವಿಧಾನವು ಎಲ್ಲರಿಗಾಗಿ ಇದೆ. ಅಪರಾಧಿಕ ಸ್ವಭಾವವನ್ನು ಖಾಯಂ ಆಗಿ ಬದಲಾಯಿಸುವುದು. ಮನುಷ್ಯನ ಹೃದಯ ಬದಲಾವಣೆಯಿಂದಲೇ ಸಾಧ್ಯ. ನಿಮಗೆ ಗೊತ್ತಿದ್ದಹಾಗೆ ಅನೇಕ ಕಳ್ಳರನ್ನು ಅನೇಕ ಸಲ ಬಂಧಿಸಿ ಸೆರೆಮನೆಯಲ್ಲಿಡುವುದುಂಟು ತಾವು ಕಳ್ಳತನಮಾಡಿದರೆ ಜೈಲಿಗೆ ಹೋಗುತ್ತೇವೆ ಎಂಬುದು ಅವರಿಗೆ ತಿಳಿದಿದ್ದರೂ ಅವರ

ಅಪರಿಶುದ್ಧ ಹೃದಯದಿಂದಾಗಿ ಅವರು ಮತ್ತೆ ಅದೇ ಕಳ್ಳತನ ಮಾಡಲು ಬದ್ಧರಾಗುತ್ತಾರೆ. ಆದುದರಿಂದ ಅಪರಾಧಿಯ ಹೃದಯ ಶುದ್ಧಿಯನ್ನು ಸಾಧಿಸದೆ ಕೇವಲ ಕಠೋರ ಕಾನೂನುಗಳನ್ನು ಜಾರಿಮಾಡಿ ಅಪರಾಧ ತಡೆಗಟ್ಟಲು ಸಾಧ್ಯವಿಲ್ಲ. ಕಳ್ಳನಿಗೂ ಕೊಲೆಗಡು ಕನಿಗೂ ಕಾನೂನು ಏನಿದೆ ಎಂಬುದು ತಿಳಿದಿದೆ. ಆದರೂ ಕಲುಷಿತ ಹೃದಯದ ಪರಿಣಾಮ ವಾಗಿ ಅವನು ಹಿಂಸಾಕೃತ್ಯವನ್ನು ಮಾಡುತ್ತಾನೆ. ಆದುದರಿಂದ ಹೃದಯಪರಿಶುದ್ಧಿಯೇ ನಮ್ಮ ಕ್ರಮ. ಆಗ ಈ ಪ್ರಾಪಂಚಿಕ ತೊಂದರೆಗಳೆಲ್ಲವೂ ನಿವಾರಣೆಯಾಗುತ್ತವೆ.

ಲೆಫ್ಟಿನೆಂಟ ಮೋಜೀ: ಅದು ಬಹಳ ಕಷ್ಟಸಾಧ್ಯವಾದ ಕೆಲಸ ಅಲ್ಲವೆ ಸ್ವಾಮಿ.

ಶ್ರೀಲಪ್ರಭುಪಾದ: ಇಲ್ಲಿ ಅದೇನು ಕಷ್ಟವಿಲ್ಲ. “ಬನ್ನಿ ಹರೇ ಕೃಷ್ಣ ಕೀರ್ತನೆಮಾಡಿ, ನರ್ತನಮಾಡಿ ಮತ್ತು ಸಮೃದ್ಧವಾದ ಪ್ರಸಾದವನ್ನು ಸ್ವೀಕರಿಸಿ” ಎಂದು ಪ್ರತಿಯೊಬ್ಬರನ್ನೂ ಆಹ್ವಾನಿಸಿರಿ ಇದರಲ್ಲಿ ಕಷ್ಟವೇನಿದೆ. ನಾವು ನಮ್ಮ ಕೇಂದ್ರಗಳಲ್ಲಿ ಇದನ್ನೇ ಮಾಡುತ್ತೇವೆ. ಜನ ಬರುತ್ತಿದ್ದಾರೆ. ಆದರೆ ನಮ್ಮಲ್ಲಿ ಸಾಕಷ್ಟು ಹಣವಿಲ್ಲದ್ದರಿಂದ ಕೇವಲ ನಾವು ಸಣ್ಣ ಪ್ರಮಾಣದಲ್ಲಿ ಸಂಕೀರ್ತನ ನಡೆಸುತ್ತೇವೆ. ನಾವು ಪ್ರತಿಯೊಬ್ಬರನ್ನೂ ಕರೆಯುತ್ತೇವೆ. ಕ್ರಮೇಣ ಜನ ನಮ ಕೇಂದ್ರಗಳಿಗೆ ಬರುತ್ತಿದ್ದಾರೆ ಮತ್ತು ಭಕ್ತರಾಗುತ್ತಿದ್ದಾರೆ. ಆದರೆ ಸರಕಾರದವರು ನಮಗೆ ಹೇರಳವಾಗಿ ಅನುಕೂಲ ಒದಗಿಸಲಿ. ನಾವು ನಮ್ಮ ಚಟುವಟಿಕೆಗಳನ್ನು ಅಪಾರವಾಗಿ ಬೆಳಗುತ್ತೇವೆ ಇದುದೊಡ್ಡ ಸಮಸ್ಯೆ; ಇಲ್ಲದಿದ್ದರೆ ರಾಷ್ಟ್ರ ಮಟ್ಟದಲ್ಲಿ ಏನು ಮಾಡಬೇಕೆಂಬ ಸಮಸ್ಯೆಯ ಲೇಖನಗಳು ಬರುತ್ತಿರಲಿಲ್ಲ. ಯಾವ ನಾಗರಿಕ ರಾಜ್ಯವೂ ಈ ಅಪರಾಧಿಕ ಸ್ಥಿತಿ ಯನ್ನು ಬಯಸುವುದಿಲ್ಲ, ಇದೊಂದು ಸತ್ಯಸಂಗತಿ. ಆದರೆ ಇದನ್ನು ಹೇಗೆ ತಡೆಯಬೇಕು ಎಂಬುದು ನಮ್ಮ ಜನ ನಾಯಕರಿಗೆ ತಿಳಿದಿಲ್ಲ. ಅವರು ನಮ್ಮನ್ನು ಕೇಳಿದರೆ ನಾವು ಅವರಿಗೆ ಹೇಳಬಹುದು ಅಪರಾಧ ಏಕೆ ನಡೆಯುತ್ತಿದೆ? ಕಾರಣ ಜನ ನಾಸ್ತಿಕರಾಗಿದ್ದಾರೆ. ಹಾಗಾದರೆ ಏನು ಮಾಡಬೇಕು? ಹರೇಕೃಷ್ಣಕೀರ್ತನಮಾಡಿ ಪ್ರಸಾದ ಸ್ವೀಕರಿಸಿ· ನಿಮಗೆ ಇಷ್ಟವೆನಿಸಿದರೆ ನೀವು ಈ ಸಂಕೀರ್ತನ ಕ್ರಮವನ್ನು ಅನುಸರಿಸಬಹುದು ಇಲ್ಲದಿದ್ದರೆ ನಾವು ಇದನ್ನು ಸಣ್ಣ ಪ್ರಮಾಣದಲ್ಲಿ ಮುಂದುವರೆಸುತ್ತೇವೆ. ನಾವು ಒಂದುಸಣ್ಣಪ್ರಮಾಣದ ಬಡವೈದ್ಯನ ಹಾಗೆ ಇದ್ದೇವೆ, ಹೆಚ್ಚುಅನುಕೂಲ ಒದಗಿಸಿದರೆ ದೊಡ್ಡಆಸ್ಪತ್ರೆ ತೆಗೆಯುತ್ತೇವೆ. ಸರಕಾರ ದೊಡ್ಡ ಯಜಮಾನ. ಅವರು ನಮ್ಮ ಸಲಹೆ ಕೇಳಿದರೆ ಮತ್ತು ಸಂಕೀರ್ತನ ಕ್ರಮವನ್ನು ಅನುಸರಿಸಿದರೆ ಅಪರಾಧ ಸಮಸ್ಯೆ ಪರಿಹಾರವಾಗುವುದು.

ಲೆಫ್ಟಿನೆಂಟ್‌ಮೋಜೀ: ಅಮೇರಿಕದಲ್ಲಿ ದೈವೀಸಂಪರ್ಕ ನೀಡುವ ಅನೇಕ ಕ್ರಿಶ್ಚಿಯನ್ ಸಂಸ್ಥೆಗಳಿವೆ. ಆದರೆ ಅವು ಏಕೆ ಫಲಕಾರಿಯಾಗಿ ಕೆಲಸ ಮಾಡುತ್ತಿಲ್ಲ, ಅವು ಹೃದಯ ಶುದ್ಧಿ ಯನ್ನು ಏಕೆ ಸಾಧಿಸುತ್ತಿಲ್ಲ !

ಶ್ರೀಲ ಪ್ರಭುಪಾದ : ನಿಜಹೇಳುವುದಾದರೆ ಒಬ್ಬ ನಿಜವಾದ ಕ್ರಿಶ್ಚಿಯನ್ ಸಿಗುವುದೂ ಕಷ್ಟ. ಕ್ರಿಶ್ಚಿಯನ್ ಎಂದುಕೊಂಡವನು ಬೈಬಲ್ಲಿನ ಆದೇಶಗಳನ್ನು ಪಾಲಿಸುತ್ತಿಲ್ಲ, ಕೊಲಬೇಡ ಎಂಬುದು ಬೈಬಲ್ಲಿನ ಹತ್ತು ಆದೇಶಗಳಲ್ಲಿ ಒಂದಾಗಿದೆ. ಹೀಗಿರುವಾಗ ಹಸುವನ್ನುಕೊಂದು ಗೋಮಾಂಸ ತಿನ್ನದಿರುವ ಕ್ರಿಶ್ಚಿಯನ್ ಎಲ್ಲಿದ್ದಾನೆ. ವಾಸ್ತವಿಕವಾಗಿ ಧರ್ಮಾಚರಣೆ ಮಾಡುವ ವ್ಯಕ್ತಿಗಳು ಪವಿತ್ರ ಭಗವನ್ನಾಮ ಸಂಕೀರ್ತನೆಮಾಡಿ ಪ್ರಸಾದ ವಿತರಣೆ ಮಾಡಿದರೆ ಅವ್ರ

ಪರಿಣಾಮಕಾರಿಯಾಗಿರುತ್ತದೆ. ನನ್ನ ಶಿಷ್ಯರು ಕಠೋರ ಧರ್ಮನಿಯಮಗಳನ್ನು ಪಾಲಿಸುತ್ತಾರೆ. ಆದುದರಿಂದ ಅವರು ಮಾಡುವ ಪವಿತ್ರಭಗವನ್ನಾಮ ಸಂಕೀರ್ತನೆಯು ಇತರರ ಸಂಕೀರ್ತನೆಯಿಂದ ಭಿನ್ನವಾದುದಾಗಿದೆ. ಅವರದು ಕೇವಲ ರಬ್ಬರ್ ಮುದ್ರೆಯ ವಿಧಾನವಿಲ್ಲಿ. ಅವರು ಪವಿತ್ರನಾಮ ಸಂಕೀರ್ತನೆಯ ಶುದ್ಧೀಕರಣ ಶಕ್ತಿಯನ್ನು ಅರಿತುಕೊಂಡವರಾಗಿದ್ದಾರೆ.

ಲೆಫ್ಟಿನೆಂಟ್ ವೋಜೀ: ಸ್ವಾಮಿ ಕೆಲವೇ ಜನ ಧರ್ಮಗುರುಗಳು ಮತ್ತು ಭಕ್ತರು ಧರ್ಮನಿಯಮಗಳನ್ನು ಪಾಲಿಸಬಹುದು. ಆದರೆ ಸಂಪೂರ್ಣದೀಕ್ಷಾಬದ್ಧರಾಗದವರು ತೊಂದರೆಗಳನ್ನು ಸೃಷ್ಟಿಸಬಹುದು. ಇದೊಂದು ಸಮಸ್ಯೆಯಲ್ಲವೆ? ಉದಾಹರಣೆಗೆ ಕ್ರಿಶ್ಚಿಯಾನಿಟಿಯು ಬೆಳೆದಿರುವಂತೆ ಈ ಹರೇಕೃಷ್ಣ ಆಂದೋಲನವು ಅದ್ಭುತವಾಗಿ ಬೆಳೆಯಿತೆಂದು ಇಟ್ಟುಕೊಳ್ಳೋಣ. ಆಗ ಅನುಯಾಯಿಗಳೆಂದು ಹೇಳಿಕೊಳ್ಳುವವರು ನಿಜವಾಗಿ ಹಾಗೆ ವರ್ತಿಸದೆ ಕೇವಲ ತೋರಿಕೆಯ ಭಕ್ತರಾಗಿ ಉಳಿದಾಗ ನಿಮಗೆ ಅದೊಂದು ದೊಡ್ಡ ಸಮಸ್ಯೆಯಾಗುವುದಲ್ಲವೆ?

ಶ್ರೀಲಪ್ರಭುಪಾದ: ಆ ಸಾಧ್ಯತೆ ಇದ್ದೇ ಇದೆ. ನಾನು ಹೇಳುವುದೇನೆಂದರೆ ನೀವು ಒಬ್ಬ ನಿಜವಾದ ಕ್ರಿಶ್ಚಿಯನ್ ಆಗಿರದಿದ್ದರೆ ನಿಮ್ಮಬೋಧನೆ ಪರಿಣಾಮಕಾರಿಯಾಗುವುದಿಲ್ಲ. ನಾವು ಧರ್ಮನಿಯಮಗಳನ್ನು ಬಲು ಕಟ್ಟುನಿಟ್ಟಾಗಿ ಪಾಲಿಸುವುದರಿಂದ ಕೃಷ್ಣಪ್ರಜ್ಞೆಯನ್ನು ಪ್ರಸಾರ ಮಾಡುವಲ್ಲಿ ಮತ್ತು ಅಪರಾಧ ಸಮಸ್ಯೆ ಪರಿಹರಿಸುವಲ್ಲಿ ನಮ್ಮ ಬೋಧನೆಯು ಪರಿಣಾಮಕಾರಿಯಾಗುವುದು.

ಲೆಫ್ಟಿನೆಂಟ್ ವೋಜೀ : ಸ್ವಾಮಿ ನಾನು ನಿಮ್ಮ ಸಾಕಷ್ಟು ಸಮಯವನ್ನು ತೆಗೆದುಕೊಂಡಿದ್ದೇನೆ ಅದಕ್ಕೆ ನಾನು ಋಣಿ ನಿಮಗೆ ನಾನು ಈ ಧ್ವನಿಮುದ್ರಣವನ್ನು ನನ್ನವರಿಷ್ಠರಿಗೆ ಕೊಡುತ್ತೇನೆ. ನೀವು ಪ್ರಭಾವಶಾಲಿಗಳಾಗಿರುವಂತೆ ಇದು ಪ್ರಭಾವಕಾರಿಯಾಗಿರುತ್ತದೆಂದು ನಾನು ಆಶಿಸುತ್ತೇನೆ.

ಶ್ರೀಲ ಪ್ರಭುಪಾದ : ತುಂಬಾ ಸಂತೋಷ.





## ಮಾನವ ಸಮಾಜವೇ ಅಥವಾ ಪಶು ಸಮಾಜವೇ ?

**ಭಾರತದ ಭವನ್ಸ್‌ಜರ್ನಲ್‌ನ 1976ರ ಆಗಸ್ಟ್‌ನಲ್ಲಿ ನಡೆದ ಒಂದು ಸಂದರ್ಶನದಲ್ಲಿ, "ಪಶುಸಮಾಜದಲ್ಲಿ ಸುಖಶಾಂತಿ ಇರುವುದು ಹೇಗೆ ಸಾಧ್ಯ? ಜನರನ್ನು ಪಶುಗಳಂತೆ ಇಡಲು ಬಯಸುತ್ತಿದ್ದಾರೆ. ಮತ್ತೆ ವಿಶ್ವಸಂಸ್ಥೆಯನ್ನು ಕಟ್ಟುತ್ತಿದ್ದಾರೆ ಇದೊಂದು ಕೇವಲ ನಾಯಿಗಳ ಪೈಪೋಟಿ. ನಾಯಿನಾಲ್ಕು..... ಕಾಲುಗಳ ಮೇಲೆ ಓಡುತ್ತದೆ. ನೀವು ನಾಲ್ಕು ಚಕ್ರಗಳ ಮೇಲೆ ಓಡುತ್ತಿದ್ದೀರಿ- ಅಷ್ಟೇ ವ್ಯತ್ಯಾಸ- ಹೀಗಿದ್ದು ನಾಲ್ಕು ಚಕ್ರಗಳ ಈ ಓಟವು ನಾಗರಿಕತೆಯ ಮುನ್ನಡೆಯೆಂದು ಭಾವಿಸುತ್ತಿದ್ದೀರಿ!" ಎಂದು ಶ್ರೀಲಪ್ರಭುಪಾದರು ಕೇಳಿದರು.**

ಸಂದರ್ಶಕ: ಇದು ಮೊದಲನೆಯ ಪ್ರಶ್ನೆ ಧರ್ಮಪ್ರಭಾವ ಕುಗ್ಗುತ್ತಿದೆಯೇ? ಹಾಗಾದರೆ ಭ್ರಷ್ಟಾಚಾರ ಹೆಚ್ಚುತ್ತಿರುವುದಕ್ಕೆ ಮತ್ತು ನೈತಿಕಮೌಲ್ಯಗಳು ಬಹಳಷ್ಟು ನಾಶಗೊಳ್ಳುತ್ತಿರುವುದಕ್ಕೆ ಈ ಅಂಶವೇ ಕಾರಣವಾಗಿದೆಯೆ?

ಶ್ರೀಲ ಪ್ರಭುಪಾದ : ಹೌದು ಧರ್ಮಪ್ರಭಾವ ಕುಗ್ಗುತ್ತಿದೆ. ಇದನ್ನು ಶ್ರೀಮದ್ಭಾಗವತದಲ್ಲಿಯೇ ಸೂಚಿಸಲಾಗಿದೆ (12-2-1.)

ತತಶ್ಚಾನು ದಿನಂ ಧರ್ಮ ಸತ್ಯಂ ಶೌಚಂ ಕ್ಷಮಾದಯಾ
ಕಾಲೇನ ಬಲಿನಾ ರಾಜನ್ ನಾನ್‌ಕ್ಷಯತ್ಯಾಯುರ್‌ಬಲಂ ಸ್ಮೃತಿಃ ॥

" ಈ ಕಲಿಯುಗದಲ್ಲಿ (ಕದನ ಕಾಪಟ್ಯದ ಈ ಕಾಲದಲ್ಲಿ) ಈ ಕೆಳಗಿನ ಅಂಶಗಳು ಕುಗ್ಗುತ್ತವೆ· ಧರ್ಮ, ಸತ್ಯ, ಶುದ್ಧಿ, ದಯೆ, ಆಯು ಪ್ರಮಾಣ, ದೇಹಬಲ ಮತ್ತು ಸ್ಮೃತಿ (ಜ್ಞಾಪಕಶಕ್ತಿ)". ಇವುಮಾನವ ಸಂಪತ್ತುಗಳು. ಇದರಿಂದಲೇ ಮನುಷ್ಯ ಪ್ರಾಣಿಗಿಂತ ಭಿನ್ನವಾಗಿದ್ದಾನೆ. ಆದರೆ ಇವು ಕುಗ್ಗುತ್ತವೆ ದಯೆಮತ್ತುಸತ್ಯ ಇಲ್ಲವಾಗುತ್ತದೆ, ಜ್ಞಾಪಕಶಕ್ತಿ ಕುಂಠಿತಗೊಳ್ಳುತ್ತದೆ, ಆಯುಃ ಪ್ರಮಾಣವು ಕ್ಷೀಣವಾಗುತ್ತದೆ. ಹಾಗೆಯೇ ಧರ್ಮವು ಮಾಯುಗುತ್ತದೆ. ಎಂದರೆ ನಾವು ಕ್ರಮೇಣ ಪಶುಮಟ್ಟಕ್ಕೆ ಇಳಿಯುತ್ತೇವೆ.

ಸಂದರ್ಶಕ: ಏನು ಧರ್ಮನಾಶವಾಗುತ್ತದೆಯೆ ? ನಾವು ಪಶುಗಳಾಗುತ್ತೇವೆಯೆ?

ಶ್ರೀಲ ಪ್ರಭುಪಾದ: ಧರ್ಮವೇ ಇಲ್ಲದಿರುವಾಗ ಅದು ಕೇವಲ ಪಶುಜೀವನವೇ ಸರಿ. ನಾಯಿಗೆ ಧರ್ಮವೆಂಬುದೇನೂ ತಿಳಿಯುವುದಿಲ್ಲ ಎಂದು ಯಾರಾದರೂ ಅರಿತುಕೊಳ್ಳಬಹುದು.

ನಾಯಿಯೂ ಒಂದು ಜೀವಾತ್ಮವೇ. ಆದರೆ ಅದಕ್ಕೆ ಭಗವದ್ಗೀತೆಯನ್ನಾಗಲೀ ಅಥವಾ ಶ್ರೀಮದ್ಭಾಗವತವನ್ನಾಗಲೀ ಅರಿತುಕೊಳ್ಳುವ ಆಸಕ್ತಿ ಇಲ್ಲ. ಆ ಅಭಿರುಚಿಯೇ ಇಲ್ಲ. ಮನುಷ್ಯನಿಗೂ, ನಾಯಿಗೂ ಇರುವುದು ಇದೇ ವ್ಯತ್ಯಾಸ. ಪಶುವಿಗೆ ಈ ಬಗೆಯ ಆಸಕ್ತಿಯೇ ಇರುವುದಿಲ್ಲ. ಹೀಗೆ ಮಾನವರು ಧಾರ್ಮಿಕವಿಷಯಗಳಲ್ಲಿ ಅನಾಸಕ್ತರಾದರೆ, ಆಗ ಅವರು ಪಶುಗಳೇ ಸರಿ. ಪಶುಸಮಾಜದಲ್ಲಿ ಸುಖಶಾಂತಿ ಹೇಗೆ ಸಾಧ್ಯ? ಅವರು ಮನುಷ್ಯರನ್ನು ಪಶುಗಳಂತೆ ಇರಿಸಬಯಸುತ್ತಾರೆ. ಮೇಲೆ ತೋರಿಕೆಗೆ ಸಂಯುಕ್ತರಾಷ್ಟ್ರ ಸಂಘವನ್ನು ನಿರ್ಮಿಸುತ್ತಾರೆ. ಇದು ಹೇಗೆ ಸಾಧ್ಯ? ಪಶುಸಂಘ, ಸಂಯುಕ್ತಪಶು ಸಂಘಅಷ್ಟೆ? ಇದುನಡೆದಿದೆ·

ಸಂದರ್ಶಕ : ಹಾಗಾದರೆ ನೀವು ಆಶಾಕಿರಣ ಕಾಣುತ್ತಿದ್ದೀರಾ?

ಶ್ರೀಲ ಪ್ರಭುಪಾದ : ಕನಿಷ್ಠಧರ್ಮ ಕುಗ್ಗುತ್ತಿದೆಯೆಂಬುದನ್ನಾದರೂ ಅವರು ಪತ್ತೆ ಮಾಡಿದ್ದಾರಲ್ಲ. ಅದುಒಳ್ಳೆಯದು. "ಕುಗ್ಗುತ್ತಿದೆ" ಎಂದರೆ ಅವರು ಪಶುಗಳಾಗುತ್ತಿದ್ದಾರೆ ಎಂದು ಅರ್ಥ. ಮನುಷ್ಯನು ವಿಚಾರಜೀವಿ ಎಂದು ತರ್ಕಶಾಸ್ತ್ರದಲ್ಲಿ ಹೇಳಲಾಗುತ್ತದೆ. ಆ ವಿಚಾರಪರತೆಯು ಮಾಯವಾದಾಗ, ಅವನು ಕೇವಲ ಪಶುವಾಗುತ್ತಾನೆಯೇ ಹೊರತು ಮಾನವನಾಗಿರುವುದಿಲ್ಲ. ಮಾನವ ಸಮಾಜದಲ್ಲಿ ನೀವು ಕ್ರಿಶ್ಚನ್, ಮುಹಮ್ಮಡನ್, ಹಿಂದೂ ಅಥವಾ ಬೌದ್ಧ ಏನೇ ಆಗಿರಲಿ, ಅದು ಮಹತ್ವದ್ದಲ್ಲ. ಯಾವುದೋ ಒಂದು ಬಗೆಯ ಧರ್ಮ ವ್ಯವಸ್ಥೆ ಇರಬೇಕು. ಧರ್ಮದ ಕಟ್ಟುಪಾಡಿಲ್ಲದ ಮಾನವ ಸಮಾಜವು ಪಶು ಸಮಾಜವೇ. ಇದು ನಿಚ್ಚಳವಾದ ಸಂಗತಿ. ಈಗ ಜನ ಏಕಿಷ್ಟು ಅಸಮಾಧಾನ ಹೊಂದಿದ್ದಾರೆ? ಧರ್ಮವ್ಯವಸ್ಥೆ ಇಲ್ಲದಿರುವುದೇ ಇದಕ್ಕೆ ಕಾರಣ. ಜನ ಧರ್ಮವನ್ನು ನಿರ್ಲಕ್ಷಿಸುತ್ತಿದ್ದಾರೆ.

"ಚರ್ಚಿನ ಕೆಳಗೆಯೇ ಸ್ಫೋಟಕವನ್ನು ಇರಿಸಿದ ಹೊರತು ಶಾಂತಿಯೆಂಬುದು ಸಾಧ್ಯವಿಲ್ಲ" ಎಂದು ಟಾಲ್‌ಸ್ಟಾಯ್ ಒಂದುಸಲ ಹೇಳಿದರೆಂದು ನನಗೊಬ್ಬ ಗೃಹಸ್ಥನು ಪತ್ರ ಬರೆದಿದ್ದನು. ಈಗಲೂ ಕೂಡ ರಶಿಯಾ ಸರಕಾರವು ಸಂಪೂರ್ಣವಾಗಿ ದೇವಪ್ರಜ್ಞೆಯನ್ನು ವಿರೋಧಿಸುತ್ತದೆ. ಧರ್ಮವೇ ಸಾಮಾಜಿಕ ವಾತವರಣವನ್ನೆಲ್ಲ ಹಾಳು ಮಾಡಿದೆಯೆಂದು ಅವರು ಭಾವಿಸುತ್ತಾರೆ.

ಸಂದರ್ಶಕ: ಅದರಲ್ಲಿ ಸ್ವಲ್ಪಮಟ್ಟಿನ ಸತ್ಯವಿತ್ತೆಂದು ಕಂಡುಬರುತ್ತದೆ.

ಶ್ರೀಲಪ್ರಭುಪಾದ: ಧರ್ಮಪದ್ಧತಿಯನ್ನು ದುರುಪಯೋಗ ಪಡಿಸಿಕೊಂಡಿರಬೇಕು. ಹಾಗೆಂದ ಮಾತ್ರದಿಂದ ಧರ್ಮನಿಷೇಧ ಮಾಡಕೂಡದು. ನಿಜಧರ್ಮವನ್ನು ಗ್ರಹಿಸಬೇಕು. ಧರ್ಮಗುರುಗಳೆನಿಸಿಕೊಂಡವರು ಧರ್ಮವನ್ನು ಸರಿಯಾಗಿ ನಿರ್ವಹಿಸಿಕೊಂಡು ಬರಲಿಲ್ಲವೆಂದ ಮಾತ್ರದಿಂದ, ಧರ್ಮವನ್ನು ತಿರಸ್ಕರಿಸಬೇಕೆಂದಲ್ಲ, ಪೊರೆ ಬಂದಿದ್ದರಿಂದ ನನ್ನ ಕಣ್ಣುನನಗೆ ತೊಂದರೆ ಕೊಡುತ್ತಿದೆಯೆಂದರೆ, ಆ ಕಣ್ಣನ್ನೇ ಕಿತ್ತುಹಾಕೆಂದಲ್ಲ, ಪೊರೆಯನ್ನು ನಿವಾರಿಸಬೇಕಷ್ಟೆ. ಅದೇ ಕೃಷ್ಣಪ್ರಜ್ಞೆ.

ಸಂದರ್ಶಕ : ಅನೇಕರು ಧರ್ಮವನ್ನು ದುರುಪಯೋಗಪಡಿಸಿಕೊಂಡಿದ್ದಾರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಇದು ನಿಜವೇ ?

ಶ್ರೀಲ ಪ್ರಭುಪಾದ : ಈ ಜನರಿಗೆ ನಿಜವಾದ ದೇವರ ಕಲ್ಪನೆಯೇ ಇಲ್ಲ. ಇಂಥವರು

ಧರ್ಮೋಪದೇಶ ಮಾಡುತ್ತಿದ್ದಾರೆ. ಧರ್ಮವೆಂದರೇನು ? ಧರ್ಮಂತು ಸಾಕ್ಷಾತ್ ಭಗವತ್-ಪ್ರಣೀತಮ್ "ಧರ್ಮ ಮಾರ್ಗವನ್ನು ಸಾಕ್ಷಾತ್ತಾಗಿ ಭಗವಂತನೇ ತೋರಿಸಿಕೊಟ್ಟಿದ್ದಾನೆ. ಅವರಿಗೆ ದೇವರ ಕಲ್ಪನೆಯೇ ಇಲ್ಲ—ದೇವರು ಏನೆಂಬುದೇ ಅವರಿಗೆ ಗೊತ್ತಿಲ್ಲ—ಹೀಗಿದ್ದೂ ಅವರು ಧರ್ಮಶ್ರದ್ಧೆಯನ್ನು ಹೊಂದಿದ್ದಾರೆ. ಈ ಕೃತಕ ಮಾರ್ಗದಿಂದ ಇದು ಎಷ್ಟು ದಿನ ಸಾಗಬಹುದು ? ಇದು ನಶಿಸುತ್ತದೆ.

ಇದು ಇಂದಿನ ಸ್ಥಿತಿ. ಜನರಿಗೆ ದೇವರ ವಿಷಯವೇ ತಿಳಿದಿಲ್ಲ. ಹೀಗಿರುವಾಗ ದೇವರ ನಿಯಮವನ್ನು ಅವರು ಅರಿಯುವುದಾದರೂ ಹೇಗೆ ? ಧರ್ಮ ಎಂದರೆ ದೇವರ ನಿಯಮ. ಉದಾಹರಣೆಗೆ, ಕಾನೂನು ಎಂದರೆ ರಾಜ್ಯದ ನಿಯಮ. ರಾಜ್ಯವೇ ಇಲ್ಲವೆಂದಾದರೆ, ನಿಯಮ ಎಲ್ಲಿದೆ ? ನಮಗೆ ಸ್ಪಷ್ಟವಾದ ದೇವರ–ಕೃಷ್ಣನ–ಕಲ್ಪನೆಯಿದೆ. ಆತನು ತನ್ನ ನಿಯಮವನ್ನು ನೀಡುತ್ತಾನೆ, ನಾವು ಅದನ್ನು ಅಂಗೀಕರಿಸುತ್ತೇವೆ. ಇದು ಸ್ಪಷ್ಟ ಧರ್ಮ. ದೇವರೇ ಇಲ್ಲ ದೇವರ ಕಲ್ಪನೆಯೇ ಇಲ್ಲ, ದೇವರ ನಿಯಮವೇ ಇಲ್ಲ, ಅಂದಮೇಲೆ ಧರ್ಮವೆಂಬುದೆಲ್ಲಿದೆ ? ಸರಕಾರವೇ ಇಲ್ಲವೆಂದ ಮೇಲೆ ಕಾನೂನು ಎಲ್ಲಿ ಬಂತು ?

ಸಂದರ್ಶಕ : ಹೌದು, ಕಾನೂನು ಎಂಬುದೇ ಇರುವುದಿಲ್ಲ. ಅದೊಂದು ಕಾನೂನು ಬಾಹಿರ ಸಮಾಜ.

ಶ್ರೀಲ ಪ್ರಭುಪಾದ : ಕಾನೂನು ಬಾಹಿರ– ತನ್ನದೇ ಆದ ಸ್ವಕಪೋಲಕಲ್ಪಿತ– ಧರ್ಮ ಪದ್ಧತಿಯನ್ನು ತಯಾರಿಸುವ– ಪ್ರತಿಯೊಬ್ಬನೂ ಕಾನೂನು ಬಾಹಿರನೇ– ಇದು ನಡೆದಿದೆ.

ಯಾವುದೇ ಧರ್ಮ ಪದ್ಧತಿಯಲ್ಲಿ, ದೇವರ ಬಗ್ಗೆ ಅವರ ಕಲ್ಪನೆಯೇನೆಂದು ಕೇಳಿ ನೋಡಿ ? ಸ್ಪಷ್ಟವಾಗಿ ಯಾರಾದರೂ ಹೇಳಬಲ್ಲರೇ ? ಯಾರೂ ಹೇಳಲಾರರು. ಆದರೆ ನಾವು ಕೂಡಲೇ ಹೇಳಬಹುದು :

ವೇಣುಂ ಕ್ವಣನಂತಂ ಅರವಿಂದ-ದಲಾಯತಾಕ್ಷಮ್
ಬರಹಾವತಂಸಂ ಅಸಿತಾಂಬುದ ಸುಂದರಾಂಗಮ್
ಕಂದರ್ಪಕೋಟಿ–ಕಮನೀಯ-ವಿಶೇಷ-ಶೋಭಮ್
ಗೋವಿಂದಂ ಆದಿ-ಪುರುಷಂ ತಂ ಅಹಂ ಭಜಾಮಿ

"ವೇಣುನಾದ ಪ್ರವೀಣನೂ, ಕಮಲದಳಾಯತಾಕ್ಷನೂ, ಮಯೂರ ಪಂಖವಿಭೂಷಿತ ಶಿರನೂ, ನೀಲಮೇಘಶ್ಯಾಮನೂ, ಅನಂತ-ಕೋಟಿ ಮನ್ಮಥ ರಮ್ಯನೂ ಆಗಿರುವ ಆ ಗೋವಿಂದನನ್ನು ಪೂಜಿಸುತ್ತೇನೆ (ಬ್ರಹ್ಮಸಂಹಿತಾ 5-30). ಹೀಗೆ ನಾವು ಕೂಡಲೇ ದೇವರ ವರ್ಣನೆಯನ್ನು ನೀಡಬಹುದಾಗಿದೆ. ಹೀಗೆ ದೇವರ ಕಲ್ಪನೆಯೇ ಇರದ ಧರ್ಮ ಅದೆಂಥ ಧರ್ಮವೋ ?

ಸಂದರ್ಶಕ: ನನಗೆ ತಿಳಿಯದು.

ಶ್ರೀಲ ಪ್ರಭುಪಾದ: ಅದೆಲ್ಲ ಸುಳ್ಳು ಧರ್ಮ. ಜನರಿಗೆ ದೇವರ ಕಲ್ಪನೆಯೇ ಇಲ್ಲ, ಆದ್ದರಿಂದ ಅವರು ಧರ್ಮವೇನೆಂಬುದನ್ನು ಅರಿತಿಲ್ಲ; ಇದೇ ಅವನತಿ. ಧರ್ಮವು ಅವನತಿ ಹೊಂದು

ತ್ತಿರುವುದರಿಂದಲೇ ಮಾನವರು ಹೆಚ್ಚುಹೆಚ್ಚು ಪಶುಸದೃಶರಾಗುತ್ತ ನಡೆದಿದ್ದಾರೆ.

ಪಶು ಎಂದರೆ"ಜ್ಞಾಪಕಶಕ್ತಿ" ಶೂನ್ಯವಾದುದು, ಏನಾದರೂ ತಿನಿಸು ಕಂಡೊಡನೆಯೇ ನಾಯಿಬರುತ್ತದೆ, "ಹಟ್" ಎಂದು ನಾನು ಬೆದರಿಸಿದೊಡನೆಯೇ ಹೊರಟುಹೋಗುತ್ತದೆ. ಮತ್ತೆಬರುತ್ತದೆ–ಅದಕ್ಕೆ ಸ್ಮರಣಶಕ್ತಿ ಇರುವುದಿಲ್ಲ. ಹೀಗೆಯೇ ಆ ದೇವರಬಗ್ಗೆ ನಮ್ಮ ಸ್ಮರಣಶಕ್ತಿಯು ಕ್ಷೀಣಿಸಿದಂತೆಲ್ಲ ನಮ್ಮ ಮಾನವೀಯ ಗುಣಗಳೂ ಕ್ಷೀಣಿಸುತ್ತವೆ. ಕಲಿಯುಗದಲ್ಲಿ ಮಾನವ ಗುಣಗಳು ಅವನತಿ ಹೊಂದುತ್ತವೆ. ಎಂದರೆ ಜನ ಬೆಕ್ಕು ನಾಯಿಗಳಂತಾಗುತ್ತಾರೆ.

ಸಂದರ್ಶಕ: ಇಲ್ಲಿ ಮತ್ತೊಂದು ಪ್ರಶ್ನೆಯಿದೆ: "ವೈದಿಕಸಂಸ್ಕೃತಿಯು ಅದೃಷ್ಟವಾದಿಯಾಗಿನೆಯೆಂಬ ಆಪಾದನೆಯಿದೆ. ಅದು ಜನರನ್ನು ಪೂರ್ವನಿಯತ ಅದೃಷ್ಟದಲ್ಲಿ ನಂಬಿಕೆಗೆ ದಾಸರನ್ನಾಗಿ ಮಾಡುತ್ತದೆ. ಆದ್ದರಿಂದ ಮನುಷ್ಯ ಪ್ರಗತಿಗೆ ಹಿಂಜರಿಯುತ್ತಾನೆ. ಈ ಆಪಾದನೆ ಎಷ್ಟರಮಟ್ಟಿಗೆ ಸತ್ಯ ?"

ಶ್ರೀಲಪ್ರಭುಪಾದ : ಪ್ರಗತಿ ಎಂದರೇನು ? ನಾಯಿಯ ಜಗಿತ ಪ್ರಗತಿಯೇ? ಅದು ಪ್ರಗತಿಯೆನಿಸಬಹುದೇ? ನಾಯಿ ತನ್ನ ನಾಲ್ಕು ಕಾಲುಗಳ ಮೇಲೆ ಅತ್ತಿಂದಿತ್ತಓಡಾಡುತ್ತದೆ. ನೀವು ಆಟೊಮೊಬೈಲಿನ 4 ಚಕ್ರಗಳ ಮೇಲೆ ಅತ್ತಿತ್ತ ಓಡಾಡುತ್ತೀರಿ. ಇದು ಪ್ರಗತಿಯೇ? ಅದು ವೈದಿಕ ಪದ್ಧತಿಯಲ್ಲ, ವೇದಪದ್ಧತಿಯ ಪ್ರಕಾರ, ಮನುಷ್ಯನು ವಿಶಿಷ್ಟಶಕ್ತಿಯನ್ನು ಹೊಂದಿದ್ದಾನೆ, ಮನುಷ್ಯನು ಪ್ರಾಣಿಗಳಿಗಿಂತ ಉತ್ತಮವಾದ ಪ್ರಜ್ಞೆಯನ್ನು ಹೊಂದಿರುವುದರಿಂದ ಮಾನವಶಕ್ತಿಯು ಪ್ರಾಣಿಶಕ್ತಿಗಿಂತ ಹೆಚ್ಚು ಬೆಲೆಯುಳ್ಳದ್ದಾಗಿದೆ.

ಸಂದರ್ಶಕ: ಮಾನವಜೀವಿಯು ಪ್ರಾಯಃಪ್ರಾಣಿಗಳಿಗಿಂತ ಹೆಚ್ಚುಸ್ವಾತಂತ್ರವನ್ನು ಅಥವಾ ಹೊಣೆಗಾರಿಕೆಯನ್ನು ಹೊಂದಿದ್ದಾನೆಂಬುದನ್ನು ಯಾರೂ ವಿವಾದಿಸುವುದಿಲ್ಲ.

ಶ್ರೀಲಪ್ರಭುಪಾದ: ಆದ್ದರಿಂದ ಮಾನವಶಕ್ತಿಸಾಮರ್ಥ್ಯವನ್ನು ಆಧ್ಯಾತ್ಮಿಕ ಪ್ರಗತಿಗೆ ಉಪಯೋಗಿಸಿಕೊಳ್ಳಬೇಕು. ಅದನ್ನು ನಾಯಿಯ ಜೊತೆಗೆ ಸ್ಪರ್ಧಿಸಲು ಉಪಯೋಗಿಸಕೂಡದು. ಸಾಧುಸ್ವಭಾವದವನು ನಾಯಿಯ ಹಾಗೆ ವಿಷಯಾಸಕ್ತನಾಗಿರುವುದಿಲ್ಲ. ಈಗ ಜನ "ನಾಯಿತನ" ವೇ ಜೀವನ ಎಂದು ಭಾವಿಸಿದ್ದಾರೆ. ನಿಜವಾಗ ಜೀವನ ಎಂದರೆ ಆಧ್ಯಾತ್ಮಿಕ ಪ್ರಗತಿ. ಅಂತೆಯೇ ವೈದಿಕಸಾಹಿತ್ಯವು ಹೀಗೆ ಹೇಳುತ್ತದೆ:

ತಸ್ಯೈವ ಹೇತೋಃ ಪ್ರಯತೇತ ಕೋವಿದೋ
ನಲಭ್ಯತೇ ಯದ್ ಭ್ರಮತಾಂ ಉಪರಿ ಆಧಃ
ತಲ್ ಲಭತೇ ದುಃಖವದ್ ಅನ್ಯತಃ ಸುಖವ್
ಕಾಲೇನ ಸರ್ವತ್ರ, ಗಭೀರ-ರಂಹಸಾ

"ನಿಜವಾಗಿ ಬುದ್ಧಿವಂತನಾದವನು ಮತ್ತು ತಾತ್ವಿಕ ಮನೋಭಾವವುಳ್ಳವನು ಬ್ರಹ್ಮಲೋಕದಿಂದ ಪಾತಾಳಲೋಕದವರೆಗೆ ಸುತ್ತಿದರೂ ಲಭ್ಯವಾಗದಂಥ ಗುರಿ ಸಾಧನೆಗೆ ಯತ್ನಿಸಬೇಕು. ಇಂದ್ರಿಯಾರ್ಥಗಳಿಂದ ದೊರೆಯುವ ಸುಖವು, ನಾವು ಬಯಸದಿದ್ದರೂ ದುಃಖಗಳು ಬರುವಂತೆ, ಕಾಲಾನುಕ್ರಮದಲ್ಲಿ ತಾವಾಗಿಯೇ ಲಭ್ಯವಾಗುತ್ತವೆ (ಶ್ರೀಮದ್ಭಾಗವತಮ್ 1-5-18).

ಸಂದರ್ಶಕ : ಇದನ್ನು ಇನ್ನೂ ಸ್ವಲ್ಪ ವಿವರಿಸುವಿರಾ ?

ಶ್ರೀಲಪ್ರಭುಪಾದ : ಮನುಷ್ಯನು ಅನಂತಾನಂತ ಜನ್ಮಗಳಲ್ಲಿ ಯಾವುದನ್ನು ಸಾಧಿಸಲು ಸಾಧ್ಯವಾಗಲಿಲ್ಲವೋ ಅದನ್ನು ಗಳಿಸಿಕೊಳ್ಳಲು ತನ್ನ ಶಕ್ತಿ ಸಾಮರ್ಥ್ಯಗಳನ್ನು ಉಪಯೋಗಿಸ ಬೇಕು. ಜೀವಾತ್ಮವು ಹಿಂದೆ ಅನಂತ ಜನ್ಮಗಳಲ್ಲಿ ನಾಯಿಯಾಗಿಯೋ, ದೇವತೆಗಳಾಗಿಯೋ, ಬೆಕ್ಕು, ನಾಯಿ, ವನ್ಯಮೃಗಗಳಾಗಿಯೋ, ಇತರ ಯೋನಿಗಳಲ್ಲಿಯೇ ಜನಿಸಿಬಂದಿದೆ. 8,400,000 ಬೇರೆ ಬೇರೆ ಯೋನಿಗಳಿವೆ. ಜೀವಾತ್ಮನು ಹೀಗೆ ದೇಹಾಂತರವನ್ನು ಹೊಂದು ತ್ತಲೇ ಇರುತ್ತಾನೆ. ಪ್ರತಿ ಯೋನಿಯಲ್ಲಿಯೂ ಇಂದ್ರಿಯ ತೃಪ್ತಿಯೇ ಜೀವನ ವ್ಯಾಪಾರವಾಗಿ ಇರುತ್ತದೆ.

ಸಂದರ್ಶಕ : ಎಂದರೆ ?

ಶ್ರೀಲ ಪ್ರಭುಪಾದ : ಉದಾಹರಣೆಗೆ, ನಾಯಿ ಸದಾ ಇಂದ್ರಿಯ ತೃಪ್ತಿಗೆ ಹವಣಿಸು ತ್ತಿರುತ್ತದೆ. ಆಹಾರ, ಆಶ್ರಯ, ಹೆಣ್ಣುನಾಯಿ, ರಕ್ಷಣೆ, ಹುಡುಕಿಕೊಂಡೇ ಅಲೆಯುತ್ತಿರುತ್ತದೆ. ಮನುಷ್ಯನೂ ಬೇರೆ ರೀತಿಯಲ್ಲಿ ಇದನ್ನೇ ಮಾಡುತ್ತಿದ್ದಾನೆ. ಜನ್ಮ ಜನ್ಮವೂ ಈ ವ್ಯಾಪಾರ ನಡೆದೇ ಇದೆ. ಅತ್ಯಂತ ಅಲ್ಪಜೀವಿಯಾದ ಕ್ರಿಮಿಕೀಟವೂ ಕೂಡ ಇದಕ್ಕಾಗಿಯೇ ಪ್ರಯತ್ನಿಸು ತ್ತಿದೆ. ಪಶು, ಪಕ್ಷಿ, ಮೀನು– ಎಲ್ಲವೂ ಈ ಪ್ರಯತ್ನದಲ್ಲಿಯೇ ತೊಡಗಿವೆ. ಆಹಾರವೆಲ್ಲಿ, ಆಶ್ರಯವೆಲ್ಲಿ, ಲೈಂಗಿಕ ಸುಖವೆಲ್ಲಿ, ರಕ್ಷಣೆಯೆಲ್ಲಿ ? ಇದೇ ನಡೆದಿದೆ. ನಾವು ಇದನ್ನು ಜನ್ಮ ಜನ್ಮಗಳಲ್ಲಿಯೂ ಮಾಡುತ್ತಲೇ ಬಂದಿದ್ದೇವೆ, ನಾವು ಅಸ್ತಿತ್ವದ ಈ ಜಂಜಡದಿಂದ ಹೊರ ಬರದಿದ್ದರೆ, ನಾವು ಅದನ್ನೆ ಮತ್ತೆ ಬಹುಜನ್ಮಗಳವರೆಗೆ ಮಾಡಬೇಕಾಗುತ್ತದೆ ಎಂದು ವೇದ ಸಾಹಿತ್ಯವು ನಿರೂಪಿಸಿದೆ.

ಸಂದರ್ಶಕ : ಅರಿವು ಇದೀಗ ಮೂಡುತ್ತಿದೆ.

ಶ್ರೀಲ ಪ್ರಭುಪಾದ : ಹೌದು. ಇದನ್ನು ನಿಲ್ಲಿಸಬೇಕು. ಆದುದರಿಂದಲೇ ಪ್ರಹ್ಲಾದ ಮಹಾರಾಜರು ಹೀಗೆ ಹೇಳುತ್ತಾರೆ :

ಸುಖಂ ಐಂದ್ರಿಯಕಂ ದೈತ್ಯ ದೇಹ ಯೋಗೇನ ದೇಹಿನಾಮ್ ।
ಸರ್ವತ್ರ ಲಭ್ಯತೇ ದೈವಾದ್ ಯಥಾ ದುಃಖಂ ಅಯತ್ನತಃ ॥

"ಹೇ ನನ್ನ ಮಿತ್ರರಾದ ದೈತ್ಯ ಬಾಲಕರೆ, ದೇಹ ಸಂಗದಿಂದುಂಟಾಗುವ ಇಂದ್ರಿಯ ತೃಪ್ತಿಯನ್ನು ತನ್ನ ಪೂರ್ವ ಕರ್ಮಾನುಸಾರ, ಯಾವ ಜನ್ಮದಲ್ಲಿಯಾದರೂ ಪಡೆಯಬಹು ದಾಗಿದೆ. ನಾವು ಯತ್ನ ಮಾಡದೆ ದುಃಖವು ಬರುವಂತೆ, ಇಂಥ ಸುಖವು ನಾವು ಯತ್ನ ಮಾಡದೆಯೇ ತಾನಾಗಿ ಬರುತ್ತದೆ (ಭಾಗವತ 7-6-3).

ನಾಯಿಗೂ ದೇಹವಿದೆ, ನನಗೂ ದೇಹವಿದೆ. ನನ್ನ ಲೈಂಗಿಕ-ಸುಖ ಮತ್ತು ನಾಯಿಯ ಲೈಂಗಿಕ ಸುಖ– ಇವುಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಸಂಭೋಗದಿಂದುಂಟಾಗುವ ಸುಖ ಒಂದೇ ಬಗೆಯದು. ನಾಯಿ ಬೀದಿಯಲ್ಲಿ ಎಲ್ಲರ ಇದಿರಿನಲ್ಲಿಯೇ ಸಂಭೋಗಿಸಲು ಹೆದರಿ ಹಿಂಜರಿಯುವುದಿಲ್ಲ, ನಾವು ಮರೆಯಲ್ಲಿ ಮಾಡುತ್ತೇವೆ, ಅಷ್ಟೆ. ಒಂದು ಒಳ್ಳೆಯ ಕೋಣೆಯಲ್ಲಿ ಸಂಭೋಗರತರಾಗುವುದು ಪ್ರಗತಿ ಎಂದು ಜನ ಭಾವಿಸಿದ್ದಾರೆ. ಆದರೆ ಅದು ಪ್ರಗತಿ ಅಲ್ಲ.

ನಾವು ಯಾವ ಬಗೆಯ ದೇಹವನ್ನೇ ಹೊಂದಲಿ ಅಲ್ಲಿ ಆ ಬಗೆಯ ಸುಖ ಕಾದಿದೆ ಎಂಬುದನ್ನು ಜನ ಅರಿತುಕೊಂಡಿಲ್ಲ.

**ಸಂದರ್ಶಕ :** ಎಂದರೆ ? "ಸುಖ ಅಲ್ಲಿ ಆಗಲೇ ಕಾದಿದೆ ?"

**ಶ್ರೀಲ ಪ್ರಭುಪಾದ :** ಅದೇ ಅದೃಷ್ಟ. ಹಂದಿ ವಿಶಿಷ್ಟ ಬಗೆಯ ಒಂದು ದೇಹವನ್ನು ಹೊಂದಿದೆ. ಅದಕ್ಕೆ ಮಲವೇ ಆಹಾರ. ನೀವು ಅದನ್ನು ಬದಲಾಯಿಸುವ ಹಾಗಿಲ್ಲ. ಹಂದಿ ಹಲ್ವಾ ತಿನ್ನ ಬಯಸುವುದಿಲ್ಲ. ಅದು ಸಾಧ್ಯವೂ ಇಲ್ಲ. ಅದರ ದೇಹ ವಿಶಿಷ್ಟ ಮಾದರಿಯ ದಾಗಿದೆ. ಅದು ಅದನ್ನೇ ತಿನ್ನಬೇಕು. ಯಾವ ವಿಜ್ಞಾನಿಯಾದರೂ ಅದರ ಜೀವನ ಮಟ್ಟವನ್ನು ಸುಧಾರಿಸಬಲ್ಲನೇ ?

**ಸಂದರ್ಶಕ :** ಸಂದೇಹಾಸ್ಪದ.

**ಶ್ರೀಲ ಪ್ರಭುಪಾದ :** ಅಂತೇ ಪ್ರಹ್ಲಾದ ಮಹಾರಾಜರು ಅದು ಅಲ್ಲಿ ಆಗಲೇ ಕಾದಿದೆ ಎಂದಿದ್ದಾರೆ. ಸುಖ ಎಂಬುದು ಮೂಲಭೂತವಾಗಿ ಒಂದೇ. ಆದರೆ ದೇಹ ಪ್ರಕಾರದಲ್ಲಿ ಸ್ವಲ್ಪ ವ್ಯತ್ಯಾಸ ಅಷ್ಟೆ. ಅರಣ್ಯವಾಸೀ ಅನಾಗರಿಕ ಮನುಷ್ಯನ ಗತಿಯೂ ಹೀಗೆಯೇ.

ಗಗನಚುಂಬೀ ಗೃಹ ನಿರ್ಮಾಣ ಮಾಡುವುದೇ ನಾಗರಿಕತೆ ಎಂದು ಜನ ಈಗ ಭಾವಿಸುತ್ತಿದ್ದಾರೆ. ಆದರೆ ಅದಲ್ಲ, ಎಂದು ವೈದಿಕ ಸಂಸ್ಕೃತಿಯು ಹೇಳುತ್ತದೆ ನಿಜವಾದ ಪ್ರಗತಿಯೆಂದರೆ ಆತ್ಮ ಸಾಕ್ಷಾತ್ಕಾರ. ನೀವು ನಿಮ್ಮನ್ನು ಎಷ್ಟು ಮಟ್ಟಿಗೆ ಅರಿತುಕೊಂಡಿದ್ದೀರಿ ? ನೀವು ಆಕಾಶದೆತ್ತರಕ್ಕೆ ಮನೆ ಕಟ್ಟಿರುವುದು ಮುಖ್ಯವಲ್ಲ.

**ಸಂದರ್ಶಕ:** ನೀವು ಹೇಳುವುದನ್ನು ಜನ ಅರಿತುಕೊಳ್ಳುತ್ತಿದ್ದಾರೆಯೇ?

**ಶ್ರೀಲಪ್ರಭುಪಾದ:** ಕೆಲವು ಸಲ ಜನ ತಪ್ಪುತಿಳಿದುಕೊಳ್ಳುತ್ತಾರೆ. ಹೈಕೋರ್ಟಿನಲ್ಲಿ ನ್ಯಾಯಾಧೀಶನು, ಏನೂ ಮಾಡದೆ ಗಂಭೀರವಾಗಿ ಕುಳಿತಿರುತ್ತಾನೆ ಅದಕ್ಕೆ ಆತನಿಗೆ ದೊಡ್ಡ ಸಂಬಳ ದೊರೆಯುತ್ತದೆ. "ನಾನಾದರೋ ಇದೇ ಕೋರ್ಟಿನಲ್ಲಿ ರಬ್ಬರ್ ಸ್ಟ್ಯಾಂಪು ಒತ್ತುವ ಕೆಲಸವನ್ನು ಮಾಡಲು ಎಷ್ಟು ಶ್ರಮವಹಿಸುತ್ತಿದ್ದೇನೆ. ಆದರೂ ನ್ಯಾಯಾಧೀಶನಿಗೆ ದೊರೆಯುವ ಸಂಬಳದ ಹತ್ತನೆಯ ಒಂದುಭಾಗದಷ್ಟೂ ನನಗೆ ಸಿಕ್ಕುವುದಿಲ್ಲ" ಎಂದು ಅಲ್ಲಿರುವ ನೌಕರರೊಬ್ಬನು ಚಿಂತಿಸಬಹುದು. "ನಾನು ಎಷ್ಟು ಕೆಲಸಮಾಡುತ್ತೇನೆ, ಎಷ್ಟು ಕಷ್ಟಪಡುತ್ತೇನೆ ಆದರೂ ಸುಮ್ಮನೆ ಕುಳಿತಿರುವ ವ್ಯಕ್ತಿಯಷ್ಟು ಸಂಬಳವೂ ನನಗೆ ದೊರೆಯುತ್ತಿಲ್ಲ" ಎಂದು ಆತನು ಯೋಚಿಸುತ್ತಿರಬಹುದು ಪರಿಸ್ಥಿತಿ ಇದೇಬಗೆಯದಾಗಿದೆ. ವೈದಿಕಸಂಸ್ಕೃತಿ ಆತ್ಮಸಾಕ್ಷಾತ್ಕಾರಕ್ಕಾಗಿದೆಯೇ ಹೊರತು ನಾಯಿಜೀವನಕ್ಕಾಗಿ ಅಲ್ಲ.

**ಸಂದರ್ಶಕ:** ಆದರೂ ಬಹಳ ಪರಿಶ್ರಮಪಡುವುದು, ಹಣಗಾಡುವುದು, ಕೊನೆಗೆ ಜೀವನದಲ್ಲಿ ಪ್ರಗತಿಸಾಧಿಸುವುದು, ಇದನ್ನೇ ಸಾಮಾನ್ಯವಾಗಿ ಗೌರವಯುತವಾದುದೆಂದು ಜನ ಭಾವಿಸುವುದಿಲ್ಲವೇ?

ಶ್ರೀಲಪ್ರಭುಪಾದ: ಫಲಾಪೇಕ್ಷೆಯಿಂದ ಕರ್ಮಮಾಡುವವರನ್ನು ಎಂದರೆ ಕರ್ಮಿಗಳನ್ನು ಭಗವದ್ಗೀತೆಯಲ್ಲಿ ಮೂಢರು, ಕತ್ತೆಗಳು ಎಂದು ಕರೆಯಲಾಗಿದೆ. ಅವರನ್ನು ಕತ್ತೆಗೆ ಏಕೆ ಹೋಲಿಸಲಾಗಿದೆ ಗೊತ್ತೇ? ಕತ್ತೆ ಬಹಳ ಹೊರೆಹೊತ್ತು ಕಷ್ಟಪಡುತ್ತದೆ. ಪ್ರತಿಫಲವಾಗಿ ಅದರ ಒಡೆಯ ಅದಕ್ಕೆ ಸ್ವಲ್ಪಹುಲ್ಲು(ಮೇವು) ನೀಡುತ್ತಾನೆ ಅಷ್ಟೆ. ಅದು ಅವನ ಬಾಗಿಲ ಹೊರಗೆ ನಿಂತು ಹುಲ್ಲುಮೇಯುತ್ತಿರುತ್ತದೆ, ಮತ್ತೆ ಅವನು ಅದರ ಬೆನ್ನ ಮೇಲೆ ಹೊರೆ ಏರಿಸುತ್ತಿರುತ್ತಾನೆ. "ನಾನು ಈ ಗುಡಿಸಲು ಬಿಟ್ಟು ಹೊರಟುಹೋದರೆ, ನಾನು ಎಲ್ಲಿಯಾದರೂ ಹುಲ್ಲುಮೇಯಬಹುದು, ನಾನೇಕೆ ಇಷ್ಟೊಂದು ಹೊರೆ ಹೊರಬೇಕು?"ಎಂದು ಯೋಚಿಸುವಷ್ಟು ಜ್ಞಾನವು ಅದಕ್ಕಿರುವುದಿಲ್ಲ.

ಸಂದರ್ಶಕ: ಇದು ಕೆಲವರನ್ನು ನನ್ನ ನೆನಪಿಗೆ ತರುತ್ತದೆ.

ಶ್ರೀಲಪ್ರಭುಪಾದ: ಕಾರ್ಯಕರ್ಮ ಮಾಡುವವರೆಲ್ಲರ ಗತಿ ಹೀಗೆಯೇ, ಅವರು ಕಛೇರಿಯಲ್ಲಿ ಭಾರೀ ಉದ್ಯೋಗಶೀಲರು. ನೀವು ಅವರನ್ನು ಕಾಣಬಯಸಿದರೆ, "ನಾನು ಬಹಳ ಕೆಲಸದಲ್ಲಿದ್ದೇನೆ" ಎಂದು ಹೇಳುತ್ತಾರೆ. ನೀವು ಅಷ್ಟು ಕಾರ್ಯನಿರತರಾದುದರ ಪರಿಣಾಮವೇನು? ಅವನು ಎರಡು ತುಂಡು ರೊಟ್ಟಿ ಮತ್ತು ಒಂದು ಕಪ್ ಟೀ ಮಾತ್ರ ತೆಗೆದುಕೊಳ್ಳುತ್ತಾನೆ. ಇಷ್ಟಕ್ಕಾಗಿ ನೀವು ಇಷ್ಟು ಕೆಲಸಮಾಡಬೇಕೆ ? ತಾನು ಯಾತಕ್ಕಾಗಿ ಇಷ್ಟು ದುಡಿಯುತ್ತಿದ್ದೇನೆಂಬುದೇ ಅವನಿಗೆ ತಿಳಿದಿಲ್ಲ. ಅವನ ಬ್ಯಾಂಕ್ ಬ್ಯಾಲನ್ಸ್ ಹತ್ತು ಲಕ್ಷ ಡಾಲರ್ ಇದ್ದದ್ದು ಈಗ ಇಪ್ಪತ್ತು ಲಕ್ಷ ಆಗಿದೆ. ಆದ್ದರಿಂದಲೇ ಅವನಿಗೆ ತೃಪ್ತಿ. ಆದರೂ ಅವನು ಎರಡು ತುಂಡು ರೊಟ್ಟಿ ಮತ್ತು ಒಂದು ಕಪ್ ಟೀಯನ್ನೇ ತೆಗೆದುಕೊಳ್ಳುತ್ತಾನೆ, ಮತ್ತೆ ಕಷ್ಟಪಟ್ಟು ದುಡಿಯುತ್ತಾನೆ. ಕರ್ಮಿ, ಕತ್ತೆ ಎಂಬುದು ಇದನ್ನೇ ಸೂಚಿಸಿದೆ. ಇವರು ಜೀವನದಲ್ಲಿ ಯಾವ ಧ್ಯೇಯವೂ ಇಲ್ಲದೆ ಕತ್ತೆಯ ಹಾಗೆ ದುಡಿಯುತ್ತಾರೆ ಅಷ್ಟೆ.

ಆದರೆ ವೈದಿಕ ಸಂಸ್ಕೃತಿ ಇದರಿಂದ ಭಿನ್ನವಾಗಿದೆ. ಆಪಾದನೆ ಸರಿಯಾದದ್ದಲ್ಲ– ವೈದಿಕ ಸಂಸ್ಕೃತಿಯ ಜನ ಎಂದೂ ಸೋಮಾರಿಗಳಲ್ಲ. ಅವರು ಉತ್ತಮ ವಿಷಯದಲ್ಲಿ ಕಾರ್ಯತತ್ಪರರಾಗಿದ್ದಾರೆ. ಈ ಬಗೆಯ ಕಾರ್ಯತತ್ಪರತೆಯು ಎಷ್ಟು ಮಹತ್ವದ್ದೆಂದರೆ, ಇದು ಬಾಲ್ಯದಿಂದಲೇ ಪ್ರಾರಂಭವಾಗಬೇಕು. **ಕೌಮಾರ ಆಚರೇತ್ ಪ್ರಾಜ್ಞಃ,** ಒಂದು ಕ್ಷಣವನ್ನೂ ವ್ಯರ್ಥಮಾಡಬಾರದು, ಎಂದು ಪ್ರಹ್ಲಾದ ಮಹಾರಾಜರು ಒತ್ತಿ ಹೇಳಿದ್ದಾರೆ. ಇದೇ ವೈದಿಕ ಸಂಸ್ಕೃತಿ. "ಈ ಜನ ನನ್ನ ಹಾಗೆ ಕೆಲಸ ಮಾಡುತ್ತಿಲ್ಲ– ನಾಯಿ ಕತ್ತೆಗಳ ಹಾಗೆ–" ಎಂದು ಕತ್ತೆಗೆ ಕಾಣುತ್ತಿರಬಹುದು. ನಾವು ಕೆಲಸ ತಪ್ಪಿಸಿಕೊಳ್ಳುತ್ತಿದ್ದೇವೆ ಎಂದು ಅವು ಭಾವಿಸಬಹುದು. ಹೌದು, ನಿಮ್ಮಂಥ ನಿರರ್ಥಕ ಶ್ರಮವನ್ನು ನಾವು ತಪ್ಪಿಸಿಕೊಳ್ಳುತ್ತಿದ್ದೇವೆ. ಆತ್ಮ ಸಾಕ್ಷಾತ್ಕಾರವೇ ವೈದಿಕ ಸಂಸ್ಕೃತಿಯ ಗುರಿ.

ಸಂದರ್ಶಕ : ವೈದಿಕ ಸಂಸ್ಕೃತಿ ಎಂದರೇನು ಎಂಬುದನ್ನು ಕುರಿತು ನೀವು ಇನ್ನಷ್ಟು ವಿಸ್ತಾರವಾಗಿ ವಿವರಿಸುವಿರಾ ?

ಶ್ರೀಲ ಪ್ರಭುಪಾದ : ವೈದಿಕ ಸಂಸ್ಕೃತಿಯು ವರ್ಣಾಶ್ರಮ ಧರ್ಮದಿಂದ ಪ್ರಾರಂಭವಾಗುತ್ತದೆ. ವರ್ಣಾಶ್ರಮ ಧರ್ಮದಲ್ಲಿ ಈ ಬಗೆಯ ಏರ್ಪಾಡಿದೆ : ಬ್ರಾಹ್ಮಣರು

(ಬುದ್ಧಿಜೀವಿಗಳು, ಬುದ್ಧಿವಾದ ನೀಡುವವರು), ಕ್ಷತ್ರಿಯರು (ಆಡಳಿತಗಾರರು), ವೈಶ್ಯರು (ವರ್ತಕರು, ಕೃಷಿಕರು), ಶೂದ್ರರು (ದುಡಿಮೆಗಾರರು), ಬ್ರಹ್ಮಚಾರಿಗಳು (ಇಂದ್ರಿಯ ನಿಗ್ರಹವುಳ್ಳ ಶಿಷ್ಯರು, ವಿದ್ಯಾರ್ಥಿಗಳು), ಗೃಹಸ್ಥರು (ಕುಟುಂಬಿಗಳು), ವಾನಪ್ರಸ್ಥರು (ವೈವಾಹಿಕ ಜೀವನ ನಿವೃತ್ತರು), ಮತ್ತು ಸನ್ಯಾಸಿ (ಸರ್ವಸಂಗ ಪರಿತ್ಯಾಗ ಮಾಡಿದವರು).

ಪರಮ ಅರ್ಥವೆಂದರೆ, ಪರಮಾತ್ಮನಾದ ಕೃಷ್ಣನನ್ನು ಆರಾಧಿಸುವುದು. ನೀವು ಕೃಷ್ಣನನ್ನು ಆರಾಧಿಸಿದರೆ, ನೀವು ಬ್ರಾಹ್ಮಣನಾಗಿ, ಕ್ಷತ್ರಿಯನಾಗಿ, ವೈಶ್ಯನಾಗಿ, ಶೂದ್ರನಾಗಿ, ಬ್ರಹ್ಮಚಾರಿಯಾಗಿ, ಏನೆಲ್ಲವೂ ಆಗಿ ನಿಮ್ಮ ಕರ್ತವ್ಯ ಕರ್ಮಗಳನ್ನು ಮಾಡಿದಂತೆಯೇ ಸರಿ. ನೀವು ಕೂಡಲೇ ಈ ವಿಧಾನವನ್ನು ಅಂಗೀಕರಿಸಿರಿ. ಕೃಷ್ಣ ಪ್ರಜ್ಞಾ ವಿಧಾನವನ್ನನುಸರಿಸಿರಿ. ಇದು ಬಹಳ ಮಹತ್ವದ್ದು.

ಸಂದರ್ಶಕ : ಜನರಿಗೆ ನಿಜವಾಗಿ ಈ ಜೀವನ ವಿಧಾನವು ತಿಳಿದಿದ್ದರೆ ಅದು ಸ್ವಾಭಾವಿಕವೂ ತೃಪ್ತಿದಾಯಕವೂ ಆಗಿರುತ್ತಿತ್ತು. ಸಮಸ್ಯೆಯೇ ಇರುತ್ತಿರಲಿಲ್ಲ : ಅವರು ಖಂಡಿತ, ನೀವು ಹೇಳಿದ ಹಾಗೆ, ಈ ವಿಧಾನವನ್ನು ಅಂಗೀಕರಿಸುತ್ತಾರೆ.

ಶ್ರೀಲ ಪ್ರಭುಪಾದ : ಇಲ್ಲ, ಅವರು ಇದನ್ನರಿತಿಲ್ಲ. ಅಂತೆಯೇ ಧರ್ಮವೆಂಬುದಿಲ್ಲ. ನಾಯಿ ಜೀವನ ನಡೆದಿದೆ. ನಾಯಿ ನಾಲ್ಕು ಕಾಲುಗಳ ಮೇಲೆ ಓಡುತ್ತಿದೆ, ನೀವು ನಾಲ್ಕು ಚಕ್ರಗಳ ಮೇಲೆ ಓಡುತ್ತಿದ್ದೀರಿ-ಅಷ್ಟೆ. ಈ ನಾಲ್ಕು ಚಕ್ರಗಳ ಆಟವನ್ನೇ ನಾಗರಿಕತೆಯ ಪ್ರಗತಿ ಎಂದು ನೀವು ಭಾವಿಸಿದಂತಿದೆ.

ಆದುದರಿಂದ, ಆಧುನಿಕ ನಾಗರಿಕತೆಯು ವಾಸ್ತವಿಕವಾಗಿ ಏನೂ ಮಾಡುತ್ತಿಲ್ಲವೆಂದು ಹೇಳಲಾಗುತ್ತಿದೆ. ದೈವದತ್ತವಾಗಿ ನಿಮಗೆ ಏನು ಸಿಕ್ಕಬೇಕೋ ಅದು ನೀವು ಎಲ್ಲಿಯೇ ಇರಲಿ, ನಿಮಗೆ ಸಿಕ್ಕುತ್ತದೆ. ಅಂತೆಯೇ ನೀವು ಕೃಷ್ಣಪ್ರಜ್ಞೆಯ ಮಾರ್ಗಕ್ಕೆ ಬನ್ನಿ· ನಿಮಗೆ ಬೇಡವಾದದ್ದು ನೀವು ಬಯಸದೇ ಬರುವುದೆಂದು ಪ್ರಹ್ಲಾದಮಹಾರಾಜರು ಉದಾಹರಣೆಯಿಂದ ತಿಳಿಸಿದ್ದಾರೆ. ನಿಮಗೆ ಲಭ್ಯವಾಗಬೇಕಾದ ಸುಖವೂ ಕೂಡ ನೀವು ಬೇಡವೆಂದರೂ ನಿಮಗೆ ಸಿಕ್ಕೇ ಸಿಕ್ಕುತ್ತದೆ· ನೀವು ನಿಮ್ಮ ಶಕ್ತಿಯನ್ನು ಭೌತಿಕ ಸುಖಕ್ಕಾಗಿ ವ್ಯಯಮಾಡಬೇಕಾಗಿಲ್ಲ. ನಿಮಗೆ ಲಭ್ಯವಿದ್ದುದಕ್ಕಿಂತ ಹೆಚ್ಚಿನ ಭೌತಿಕ ಸುಖ ನಿಮಗೆ ದೊರೆಯಲಾರದು.

ಸಂದರ್ಶಕ : ನೀವು ಖಚಿತವಾಗಿ ಹಾಗೆ ಹೇಳುವುದು ಹೇಗೆ ಸಾಧ್ಯ ?

ಶ್ರೀಲ ಪ್ರಭುಪಾದ : ನಾನು ಅದನ್ನು ನಂಬುವುದೇಕೆ ? ನೀವು ಬಯಸದಿದ್ದರೂ ನಿಮಗೆ ದುಃಖಕರವಾದ ಸ್ಥಿತಿ ಒದಗುವುದನ್ನು ನೋಡಿಯೇ ಹಾಗೆನ್ನುತ್ತಿದ್ದೇನೆ. ಉದಾಹರಣೆಗೆ, ರಾಷ್ಟ್ರಾಧ್ಯಕ್ಷ ಕೆನಡಿ ತಮ್ಮ ದೇಶೀಯರಿಂದಲೇ ಹತರಾದರು, ಯಾರು ಅದನ್ನು ಬಯಸಿದ್ದರು. ಅದೇಕೆ ಹಾಗಾಯಿತು ? ಅವರು ಒಬ್ಬ ಮಹಾ ವ್ಯಕ್ತಿಯಾಗಿದ್ದರು. ಅವರಿಗೆ ಬಹು ಜನ ರಕ್ಷಕರಿದ್ದರು, ಆದರೂ ಅವರು ಹತರಾಗಬೇಕೆಂಬುದು ವಿಧಿ ನಿಯಮವಾಗಿತ್ತು. ಯಾರು ನಿಮ್ಮನ್ನು ರಕ್ಷಿಸಬಲ್ಲರು ?

ಹೀಗೆ ದೈವ ನಿಯಮಾನುಸಾರ ನನಗೆ ದುಃಖ ಬರುವುದಾದರೆ, ಅದಕ್ಕೆ ಪ್ರತಿಯಾದ ಸುಖವೂ ಹಾಗೆಯೇ ಬರುವುದು. ಇದರ ದುರಸ್ತಿಯಲ್ಲಿ ನಾನೇಕೆ ಕಾಲಹರಣ ಮಾಡಬೇಕು ? ನಾನು ನನ್ನ ಶಕ್ತಿಯನ್ನು ಕೃಷ್ಣಪ್ರಜ್ಞೆಗೆ ಉಪಯೋಗಿಸಿಕೊಳ್ಳುತ್ತೇನೆ. ಅದೇ ಬುದ್ಧಿವಂತ

ತನ. ನೀವು ನಿಮ್ಮ ವಿಧಿಲಿಖಿತವನ್ನು ತಪ್ಪಿಸಲಾರಿರಿ. ಪ್ರತಿಯೊಬ್ಬನೂ ಕೆಲಮಟ್ಟಿನ ಸುಖ ದುಃಖಗಳನ್ನು ಅನುಭವಿಸುತ್ತಾನೆ. ಅವಿಚ್ಛಿನ್ನವಾಗಿ ಯಾರೂ ಸುಖಾನುಭವ ಮಾಡುತ್ತಿಲ್ಲ. ಅದು ಸಾಧ್ಯವೂ ಇಲ್ಲ.

ನೀವು ನಿಮ್ಮ ದುಃಖವನ್ನು ತಪ್ಪಿಸುವುದು ಹೇಗೆ ಅಸಾಧ್ಯವೋ ಹಾಗೆಯೇ ನೀವು ನಿಮ್ಮ ಸುಖವನ್ನೂ ತಪ್ಪಿಸಲಾರಿರಿ. ಅದು ತಾನಾಗಿಯೇ ಬರುತ್ತದೆ. ಆದುದರಿಂದ ಇಂಥ ವಿಷಯುಗಳಲ್ಲಿ ನಿಮ್ಮ ಕಾಲಹರಣ ಮಾಡಬೇಡಿ. ಬದಲಾಗಿ ಕೃಷ್ಣಪ್ರಜ್ಞೆಯಲ್ಲಿ ಪ್ರಗತಿ ಹೊಂದಲು ನಿಮ್ಮ ಕಾಲವನ್ನು ವಿನಿಯೋಗಿಸಿ.

ಸಂದರ್ಶಕ: ಕೃಷ್ಣಪ್ರಜ್ಞಾವಂತನು ಪ್ರಗತಿಗೆ ಪ್ರಯತ್ನಿಸುವುದಿಲ್ಲವೇ?

ಶ್ರೀಲ ಪ್ರಭುಪಾದ: ನೀವು ಪ್ರಗತಿಗೆ ನಿರರ್ಥಕ ಪ್ರಯತ್ನ ಮಾಡಿ ಫಲವೇನು? ನೀವು ನಿಮ್ಮ ಅದೃಷ್ಟವನ್ನು ಬದಲಾಯಿಸಲು ಸಾಧ್ಯವಿಲ್ಲವೆಂದಾದರೆ, ಪ್ರಯತ್ನದಿಂದ ಫಲವೇನು? ನಮಗೆ ದೊರೆಯಲಿರುವ ಸುಖದುಃಖಗಳಿಂದ ನಾವು ಸಮಾಧಾನ ಹೊಂದಬೇಕು.

ವೈದಿಕ ಸಂಸ್ಕೃತಿ ಆತ್ಮಸಾಕ್ಷಾತ್ಕಾರಕ್ಕಾಗಿ ಇದೆ. ಅದೇ ಮುಖ್ಯವಾದ ಅಂಶ. ಈಗಲೂ ಭಾರತದಲ್ಲಿ ಮಹಾಪರ್ವಕಾಲಗಳಲ್ಲಿ ಲಕ್ಷೋಪಲಕ್ಷ ಜನ ಭಾಗಿರಥೀ (ಗಂಗಾ) ಸ್ನಾನಕ್ಕಾಗಿ ಬರುತ್ತಾರೆ. ಮುಕ್ತರಾಗಲು ಅವರಿಗೆ ಆಸಕ್ತಿಯಿದೆ. ಅವರು ಸೋಮಾರಿಗಳಲ್ಲ. ಅವರು ಸಾವಿರಾರು ಮೈಲು, ಸುಮಾರು ಎರಡುಸಾವಿರಮೈಲು ಪ್ರವಾಸಮಾಡಿ ಗಂಗಾ ಸ್ನಾನಕ್ಕಾಗಿ ಬರುತ್ತಾರೆ. ಅವರು ಆಲಸಿಗರಲ್ಲ. ಅವರು ನಾಯಿ ಜೀವನ ನಿರತರಲ್ಲ. ಅವರು ಬಾಲ್ಯದಿಂದಲೇ ಆತ್ಮಸಾಕ್ಷಾತ್ಕಾರದ ಪ್ರಯತ್ನದಲ್ಲಿದ್ದಾರೆ. **ಕಾಮಾರ ಆಚರೇತ್ ಪ್ರಾಜ್ಞೋ ಧರ್ಮಾನ್ ಭಾಗವತಾನ್ ಇಹ.** ಅವರು ತಮ್ಮ ಬಾಲ್ಯದಿಂದಲೇ ಧರ್ಮಾಚರಣೆಯಲ್ಲಿ ನಿರತರಾಗುತ್ತಾರೆ. ಅವರು ಆಲಸಿಗರೆಂದು ತಿಳಿಯುವುದು ತಪ್ಪು.

ಸಂದರ್ಶಕ: ಎಲ್ಲವೂ ದೈವನಿಯತವಾಗಿದ್ದು ಅದನ್ನು ತಪ್ಪಿಸಲು ಸಾಧ್ಯವಿಲ್ಲ ವೆಂದಾದರೆ, ಹುಟ್ಟುವ ಮಕ್ಕಳೆಲ್ಲ ಸುಮ್ಮನೆ ಪ್ರಾಣಿಗಳ ಹಾಗೆ ಓಡಾಡಿಕೊಂಡಿರಬಹುದು, ಏನಾಗಬೇಕಾಗಿದೆಯೋ ಅದು ಅವನಿಗೆ ಆಗಿಯೇ ಆಗುತ್ತದೆ ಎಂಬ ಪ್ರಶ್ನೆ ಉದ್ಭವಿಸ ಬಹುದು.

ಶ್ರೀಲಪ್ರಭುಪಾದ: ಹಾಗಲ್ಲ, ಪ್ರಯೋಜನ ಇಷ್ಟೆ: ನೀವು ಅವನಿಗೆ ಆಧ್ಯಾತ್ಮ ಮಾರ್ಗದಲ್ಲಿ ತರಬೇತಿ ನೀಡಬಹುದು. ಅಂತೆಯೇ **ತಸ್ಯೈವ ಹೇತೋಃಪ್ರಯತೇತ ಕೋವಿದಃ** ನೀವು ನಿಮ್ಮ ಶಕ್ತಿಯನ್ನು ಆತ್ಮಸಾಕ್ಷಾತ್ಕಾರಕ್ಕಾಗಿ ತೊಡಗಿಸಬೇಕು. **ಅಹೈತುಕೀ ಅಪ್ರತಿಹತಾಃ** ಭಕ್ತಿಯುತ ಸೇವೆ ಕೃಷ್ಣಪ್ರಜ್ಞೆ ಇವುಗಳನ್ನು ತಪ್ಪಿಸ ಲಾಗುವುದಿಲ್ಲ. ಹೇಗೆ ಭೌತಿಕ ಅದೃಷ್ಟವನ್ನು ತಪ್ಪಿಸುವುದು ಅಸಾಧ್ಯವೋ ಆಧಾತ್ಮಿಕ ಜೀವನ ಪ್ರಗತಿಗೆ ಪ್ರಯತ್ನಿಸಿದರೆ, ಅದನ್ನು ತಪ್ಪಿಸುವುದೂ ಅಸಾಧ್ಯ.

ನಿಜವಾಗಿ, ಕೃಷ್ಣನು ಅದೃಷ್ಟವನ್ನು ಬದಲಾಯಿಸಬಲ್ಲನು– ಆದರೆ ಕೇವಲ ತನ್ನ ಭಕ್ತನ ಮಟ್ಟಿಗೆ ಮಾತ್ರ. **ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ** ಎನ್ನುತ್ತಾನೆ. ಕೃಷ್ಣ. "ನಾನು ನಿನ್ನನ್ನು ಸರ್ವಪಾಪಗಳಿಂದಲೂ ರಕ್ಷಿಸುತ್ತೇನೆ"ಎನ್ನುತ್ತಾನೆ (ಭ.ಗೀ.18-66). ಉದಾಹರಣೆಗೆ, ಒಬ್ಬನಿಗೆ ನ್ಯಾಯಾಲಯವು ಗಲ್ಲುಶಿಕ್ಷೆ. ವಿಧಿಸಿದ್ದರೆ, ಅದನ್ನು ಯಾರೂ

ತಪ್ಪಿಸುವುದು ಸಾಧ್ಯವಿಲ್ಲ. ಅನನ್ನು ವಿಧಿಸಿದ ನ್ಯಾಯಾಧೀಶನೇ ಅದನ್ನು ತಪ್ಪಿಸಲಾರನು. ಆದರೆ ಪ್ರತಿವಾದಿಯು(ದೋಷಿಯು) ರಾಜಕ್ಷಮೆಗೆ ಯಾಚನೆ ಮಾಡಿದರೆ, ಸರ್ವನಿಯಮಾತೀತನಾದ ರಾಜನು ಅದನ್ನು ತಪ್ಪಿಸಬಹುದು.

ಆದುದರಿಂದ ಕೃಷ್ಣನಿಗೆ ಶರಣಾಗತರಾಗುವುದಷ್ಟೇ ನನ್ನ ಕೆಲಸ. ನಾವು ಕೃತಕ ಆರ್ಥಿಕ ಅಭಿವೃದ್ಧಿಯಿಂದ ಹೆಚ್ಚು ಸುಖ ಸಂಪಾದಿಸ ಬಯಸಿದರೆ ಅದು ಸಾಧ್ಯವಿಲ್ಲ. ಅನೇಕ ಜನ ಎಷ್ಟೊಂದು ಕಷ್ಟಪಟ್ಟು ದುಡಿಯುತ್ತಿದ್ದಾರೆ. ಆದರೆ ಅವರೆಲ್ಲರೂ ಹೆನ್ರಿ ಫೋರ್ಡ್ ಅಥವಾ ರಾಕ್‌ಫೆಲರ್ ಆಗಬಲ್ಲರೇ ? ಎಲ್ಲರೂ ವಿಶ್ವ ಪ್ರಯತ್ನ ಮಾಡುತ್ತಿದ್ದಾರೆ. ಫೋರ್ಡ್ ಘನ ಸಿರಿವಂತರಾಗುವ ಅದೃಷ್ಟ ಹೊಂದಿದ್ದರು. ಹಾಗೆಂದ ಮಾತ್ರದಿಂದ ಫೋರ್ಡ್ ಅವರ ಹಾಗೆ ಬಹಳ ಕಷ್ಟ ಪಡುವವರೆಲ್ಲ ಫೋರ್ಡರ ಹಾಗೆ ಸಿರಿವಂತರಾಗುವುದು ಸಾಧ್ಯವಾಗುವುದೇ ? ಇಲ್ಲ. ಇದು ನಿಜಸ್ಥಿತಿ. ನೀವು ಕೇವಲ ಕತ್ತೆ ನಾಯಿಗಳ ಹಾಗೆ ಅತಿ ದುಡಿದು ನಿಮ್ಮ ಅದೃಷ್ಟವನ್ನು ಬದಲಾಯಿಸಿಕೊಳ್ಳಲಾರಿರಿ. ಆ ಸಮಯವನ್ನು ನೀವು ಕೃಷ್ಣ ಪ್ರಜ್ಞಾ ಸಾಧನೆಗೆ ಬಳಸಿಕೊಳ್ಳಬಹುದಾಗಿದೆ.

ಸಂದರ್ಶಕ : ನಿಷ್ಕೃಷ್ಟವಾಗಿ ಕೃಷ್ಣಪ್ರಜ್ಞೆ ಎಂದರೇನು ? ನೀವು ಇನ್ನಷ್ಟು ವಿವರಿಸಬಲ್ಲಿರಾ ?

ಶ್ರೀಲ ಪ್ರಭುಪಾದ : ದೇವರ ಪ್ರೀತಿ– ಅದೇ ಕೃಷ್ಣಪ್ರಜ್ಞೆ. ನೀವು ದೇವರನ್ನು ಪ್ರೀತಿಸುವುದನ್ನು ಕಲಿತಿರದಿದ್ದರೆ, ನಿಮ್ಮ ಧರ್ಮಕ್ಕೆ ಅರ್ಥವೇನು ? ನೀವು ದೇವರೊಡನೆ ನಿಮಗಿರುವ ಸಂಬಂಧವನ್ನು "ನಾನು ದೇವರ ವಿಭಿನ್ನಾಂಶ" ಎಂಬುವನ್ನು ಅರಿತಾಗಲೇ ನೀವು ದೇವರ ಪ್ರೀತಿಯ ವೇದಿಕೆಗೆ ಬರುತ್ತೀರಿ. ಆಮೇಲೆ ಬೇಕಾದರೆ ನಿಮ್ಮ ಪ್ರೀತಿಯನ್ನು ಪ್ರಾಣಿಗೂ ನೀಡಿ. ನೀವು ನಿಜವಾಗಿ ದೇವರನ್ನು ಪ್ರೀತಿಸಿದರೆ ನಿಮ್ಮ ಪ್ರೀತಿ ಪ್ರಾಣಿಗೂ ಸಂದಿರುತ್ತದೆ. "ಈ ಹುಳು ಬೇರೆ ದೇಹ ಹೊಂದಿದೆ, ಆದರೆ ಅದೂ ಕೂಡ ನನ್ನ ತಂದೆಯ ವಿಭಿನ್ನಾಂಶವೇ. ಆದುದರಿಂದ ಅದು ನನ್ನ ಸೋದರ" ಎಂದು ನೀವು ಅರಿತುಕೊಳ್ಳುತ್ತೀರಿ. ಆಗ ನೀವು ಪ್ರಾಣಿವಧಾಗಾರಗಳನ್ನು ನಡೆಸುವುದಿಲ್ಲ. ನೀವು ಪ್ರಾಣಿವಧಾಗಾರಗಳನ್ನು ಹೊಂದಿ "ಕೊಲಬೇಡ" ಎಂಬ ಕ್ರಿಸ್ತನ ಆದೇಶವನ್ನು ಉಲ್ಲಂಘಿಸಿದರೆ, ನೀವು ಹಿಂದೂ ಅಥವಾ ಕ್ರಿಶ್ಚನ್ ಎಂದು ಕರೆದುಕೊಂಡ ಮಾತ್ರದಿಂದ ಅದು ಧರ್ಮವಾಗಲಾರದು. ನೀವು ದೇವರನು, ಅರಿತಿರುವುದಿಲ್ಲ. ಆದುದರಿಂದ ಅದೆಲ್ಲವೂ ವ್ಯರ್ಥ. ನಿಮಗೆ ದೇವರಲ್ಲಿ ಪ್ರೀತಿಯಿಲ್ಲ. ನೀವು ಕೇವಲ ಒಂದು ಮತ ಪಟ್ಟಿಯನ್ನು ಮಾತ್ರ ತಲೆಗೆ ಅಂಟಿಸಿಕೊಂಡಿದ್ದೀರಿ ಅಷ್ಟೆ. ನಿಜವಾದ ಧರ್ಮವೇ ನಿಮಗಿಲ್ಲ. ಜಗತ್ತಿನಲ್ಲೆಲ್ಲ ಇದೇ ನಡೆದಿದೆ.

ಸಂದರ್ಶಕ : ಈ ಸ್ಥಿತಿಯನ್ನು ಸರಿ ಪಡಿಸುವುದು ಹೇಗೆ ?

ಶ್ರೀಲ ಪ್ರಭುಪಾದ : ಕೃಷ್ಣನು ಪರಮ ದೇವೋತ್ತಮ ಪುರುಷನು ಕೃಷ್ಣನು ಪರಮಾತ್ಮನು ಎಂಬುದನ್ನು ನೀವು ಅಂಗೀಕರಿಸದಿದ್ದರೆ ಅದನ್ನು ಮೊದಲು ತಿಳಿಯಲು ಯತ್ನಿಸಿ. ಅದೇ ನಿಜವಾದ ಶಿಕ್ಷಣ. ಪರಮನಿಯಾಮಕನೊಬ್ಬನಿದ್ದಾನೆ. ಕೃಷ್ಣ ಭಾರತೀಯ ನಲ್ಲ. ಅವನು ದೇವರು. ಸೂರ್ಯನು ಮೊದಲು ಭಾರತದಲ್ಲಿ ಉದಯಿಸುತ್ತಾನೆ. ಹಾಗೆಂದ ಮಾತ್ರದಿಂದ ಅವನು ಭಾರತೀಯನೆಂದಲ್ಲ. ಹಾಗೆಯೇ ಕೃಷ್ಣನು ಭಾರತದಲ್ಲಿ ಅವತರಿಸಿದ್ದರೂ ಈಗ ಕೃಷ್ಣ ಪ್ರಜ್ಞಾ ಆಂದೋಲನದ ಮೂಲಕ ಪಾಶ್ಚಾತ್ಯ ದೇಶಗಳಿಗೆ ಬಂದಿದ್ದಾನೆ.



# ಪರೋಪಕಾರ : ಅನಿತ್ಯ ಮತ್ತು ನಿತ್ಯ

**1972ರಲ್ಲಿ ದಕ್ಷಿಣ ಭಾರತದ ರಾಜ್ಯವಾದ ಆಂಧ್ರಪ್ರದೇಶದಲ್ಲಿ ತೀವ್ರ ಕ್ಷಾಮದಿಂದ ಲಕ್ಷಾವಧಿಜನ ಪೀಡೆಗೊಳಗಾದರು. ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾ ಸಂಘವು ಸಹಾಯ ನೀಡುವುದೆಂಬ ನಿರೀಕ್ಷೆಯಿಂದ ಆಂಧ್ರಪ್ರದೇಶ್ ಪರಿಹಾರ ನಿಧಿ ಸಮಿತಿಯ ಕಾರ್ಯದರ್ಶಿಯಾದ ಟಿ. ಎಲ್. ಕಟಡಿಯಾ, ಶ್ರೀಲಪ್ರಭು ಪಾದರಿಗೆ ಪತ್ರ ಬರೆದರು. ಪ್ರಭುಪಾದರು ಅವರಿಗೆ ಆಶ್ಚರ್ಯಗೊಳಿಸುವಂಥ ಉತ್ತರ ನೀಡಿದರು.**

**ಪೂಜ್ಯ ಸ್ವಾಮೀಜಿ,**

ಈ ಎರಡು ನಗರಗಳ ಜನ ನಿಮ್ಮನ್ನು ಮತ್ತು ನಿಮ್ಮ ಗೌರವಾನ್ವಿತ ಅನುಯಾಯಿಗಳನ್ನು ಕಾಣುವ ಸದವಕಾಶ ದೊರೆತುದಕ್ಕೆ ಸಂತೋಷಿಸುತ್ತಾರೆ. ಕಳೆದ ಎರಡು ವರ್ಷಗಳಲ್ಲಿ ಸಾಕಷ್ಟು ಮಳೆ ಬೀಳದ್ದರಿಂದ ಮತ್ತು ಈ ವರ್ಷ ಮಳೆಯೇ ಇಲ್ಲದ್ದರಿಂದ ನಮ್ಮ ಆಂಧ್ರ ಪ್ರದೇಶ ರಾಜ್ಯವು ತೀವ್ರ ಬರಗಾಲಕ್ಕೆ ತುತ್ತಾಗಿದೆ. ಈ ಆಪತ್ತನ್ನು ಎದುರಿಸುವಲ್ಲಿ ಸರಕಾರದ ಪ್ರಯತ್ನಕ್ಕೆ ಪೂರಕವಾಗಿ ಜೀವನದ ವಿವಿಧ ಕ್ಷೇತ್ರಗಳಿಗೆ ಸೇರಿದ ನಾಗರಿಕರಿಂದ ಕೂಡಿದ ಒಂದು ಕೇಂದ್ರ ಸ್ವಯಂಸೇವಕ ಸಂಸ್ಥೆಯನ್ನು ಏರ್ಪಡಿಸಲಾಗಿದೆ. ಈ ಸಂಘದ ಸದಸ್ಯರು ಬರಗಾಲ ಪೀಡಿತ ಪ್ರದೇಶಗಳನ್ನು ಪರಿಶೀಲಿಸಿಕೊಂಡು ಬಂದಿದ್ದಾರೆ. ಸ್ಥಿತಿ ಚಿಂತಾಜನಕವಾಗಿದೆ. ಕೆಲವು ಹಳ್ಳಿಗಳಲ್ಲಿ ಮೈಲುಗಳಷ್ಟು ದೂರಹೋದರೂ ಕುಡಿಯುವ ನೀರು ಸಿಗುತ್ತಿಲ್ಲ. ಮೇವಿನ ಅಭಾವದಿಂದಾಗಿ ದನಕರುಗಳ ಮಾಲಿಕರು ಕೇಳಿದಬೆಲೆಗೆ ಅವುಗಳನ್ನು ಮಾರುತ್ತಿದ್ದಾರೆ. ಮೇವು ನೀರಿನ ಅಭಾವದಿಂದಾಗಿ ಅನೇಕ ಬಿಡಿದನಗಳು ಸಾಯುತ್ತಿವೆ. ಆಹಾರಸಮಸ್ಯೆಯೂ ಬಲು ಗಂಭೀರವಾಗಿದೆ. ಮಾರುಕಟ್ಟೆಗಳಲ್ಲಿ ಆಹಾರಧಾನ್ಯ ಬೆಲೆಗಳು ಬಹಳ ಏರಿರುವುದರಿಂದು ಬಡವರು ಮಾರುಕಟ್ಟೆಯ ಬೆಲೆಗಳಿಗೆ ಧಾನ್ಯಗಳನ್ನು ಕೊಳ್ಳುವುದು ಸಾಧ್ಯವಾಗುತ್ತಿಲ್ಲ. ಪರಿಣಾಮವಾಗಿ ಐದಾರುಲಕ್ಷ ಜನರಿಗೆ ಒಪ್ಪತ್ತು ಊಟವೂ ಸಿಗುತ್ತಿಲ್ಲ. ಅನೇಕರು ಉಪವಾಸದ ಅಂಚಿನಲ್ಲಿದ್ದಾರೆ. ಇಡೀ ಪರಿಸ್ಥಿತಿಯು ಅತ್ಯಂತ ಶೋಚನೀಯವೂ ಹೃದಯ ವಿದ್ರಾವಕವೂ ಆಗಿದೆ.

ತಮ್ಮ ಸಂಘವು ಈ ಲಕ್ಷಾವಧಿ ಜನಗಳಿಗೆ ಯಾವ ರೀತಿಯಲ್ಲಿ ಅತಿಹೆಚ್ಚು ಸಹಾಯ ನೀಡಬಹುದೆಂಬುದನ್ನು ತಮ್ಮಗಮನಕ್ಕೆ ತರಬಯಸುತ್ತೇವೆ. ಈ ಜನ ವಿಚಾರಕ್ಕೆ ನಿಲುಕದಷ್ಟು

ದುಃಖಪೀಡಿತರಾಗಿದ್ದಾರೆ. ತಮ್ಮ ಉಪನ್ಯಾಸಗಳಿಗೆ ಬರುವಭಕ್ತಾದಿಗಳು ಆಂಧ್ರಪ್ರದೇಶ ಪರಿಹಾರನಿಧಿಗೆ ತಮ್ಮ ಕೈಲಾದ ಕೊಡುಗೆಯನ್ನು ನೀಡುವಂತೆ, ತಮ್ಮ ಸಂಘದ ಸದಸ್ಯರು ಸಲಹೆ ನೀಡಬೇಕೆಂಬುದನ್ನು ನಮ್ಮ ಸಮಿತಿಯು ತಮ್ಮನ್ನು ಪ್ರಾರ್ಥಿಸುತ್ತದೆ.

ಈ ರಾಜ್ಯದ ಹಸಿದ ಲಕ್ಷಾವಧಿಜನರಿಗೆ ತಾವು ಪ್ರಸಾದಹಂಚಲು ಹೋದಲ್ಲೆಲ್ಲಾ ತಮ್ಮ ಸಂಘದ ಸದಸ್ಯರೊಂದಿಗೆ ತನ್ನ ಕೆಲವು ಪ್ರತಿನಿಧಿಗಳನ್ನು ಕಳಿಸಲುಕೂಡ ಈ ಸಮಿತಿ ಸಿದ್ಧವಿದೆ.

ಮಾನವಸೇವೆಯೇ ಮಾಧವಸೇವೆ ಆಗಿರುವುದರಿಂದ ತಮ್ಮ ಕೃಷ್ಣಮಯ ಸಂಘದ ಅಲ್ಪ ಪ್ರಯತ್ನ ಕೂಡ ಸಹಸ್ರಾರು ಜನರ ಬವಣೆ ನಿವಾರಣೆಯಲ್ಲಿ ಬಹಳಷ್ಟು ಪರಿಣಾಮಕಾರಿಯಾಗುವುದೆಂದು ನಮ್ಮ ಸಮಿತಿಯು ನಂಬಿದೆ.

ಭಗವತ್ ಸೇವೆಯಲ್ಲಿ ಸದಾ ನಿಮ್ಮವರೇ ಆದ
**ಟಿ. ಎಲ್. ಕಟಿಡಿಯೊ**
ಕಾರ್ಯದರ್ಶಿ, ಆಂಧ್ರಪ್ರದೇಶ ಪರಿಹಾರ ನಿಧಿ ಸಮಿತಿ.
ಹೈದರಾಬಾದ್, ಭಾರತ

ಪ್ರಿಯ ಕಟಿಡಿಯೊ ಅವರೆ,

ಧನ್ಯವಾದಗಳು. ನಿಮ್ಮ ಪತ್ರ ನಿಮ್ಮ ಭೇಟಿಯ ಸಂಬಂಧದಲ್ಲಿ, ನಾನು ನಿಮಗೆ ತಿಳಿಸುವುದೇನೆಂದರೆ ಪರಮ ದೇವೋತ್ತಮ ಪುರುಷನಾದ ಭಗವಂತನನ್ನು ಸಂತೋಷ ಪಡಿಸದೆ ಯಾರೂ ಸಂತೋಷ ಹೊಂದುವುದು ಸಾಧ್ಯವಿಲ್ಲ. ದುರ್ದೈವದಿಂದ ದೇವರು ಯಾರು, ಅವನನ್ನು ಹೇಗೆ ಸಂತೋಷ ಪಡಿಸಬೇಕು ಎಂಬುದನ್ನು ಜನತಿಳಿದಿಲ್ಲ. ಆದು ದರಿಂದ ನಮ್ಮ ಕೃಷ್ಣಪ್ರಜ್ಞಾ ಆಂದೋಲನವು ನೇರವಾಗಿ ಜನತೆಗೆ ಪರಮದೇವೋತ್ತಮ ಪುರುಷನನ್ನು ಪರಿಚಯಿಸಲು ಹೊರಟಿದೆ. ಶ್ರೀಮದ್ಭಾಗವತದ ಆರನೆಯ ಅಧ್ಯಾದ ಏಳ ನೆಯ ಸ್ಕಂಧದಲ್ಲಿ, ತುಷ್ಟೇಚ ತತ್ರಕಿಂ ಅಲಭ್ಯಂ ಅನಂತ ಆದ್ಯೇ ಕಿಂ ತೈರ್ ಗುಣ ವ್ಯತಿಕರಾದಿಹ ಏ ಸ್ವ ಸಿದ್ಧಾಃ ಎಂದು ಹೇಳಲಾಗಿದೆ.

ಈ ಶ್ಲೋಕದಲ್ಲಿ ವ್ಯಕ್ತಪಟ್ಟಿರುವ ವಿಚಾರವೆಂದರೆ ಪರಮ ದೇವೋತ್ತಮ ಪುರುಷನನ್ನು ತೃಪ್ತಿಪಡಿಸುವ ಮೂಲಕ ನಾವು ಎಲ್ಲರನ್ನೂ ತುಷ್ಟಿ ಪಡಿಸಬಹುದು. ಅಭಾವದ ಪ್ರಶ್ನೆಯೇ ಇಲ್ಲ. ಜನ ಈ ಯಶಸ್ಸಿನ ರಹಸ್ಯ ವನ್ನೇ ಅರಿತಿಲ್ಲ. ಅಂತೆಯೇ ಸುಖಪಡಲು ಅವರು ಸ್ವತಂತ್ರವಾದ ಮತ್ತು ತಮ್ಮದೇ ಆದ ಯೋಜನೆಗಳನ್ನು ಮಾಡುತ್ತಿದ್ದಾರೆ. ಈ ಮಾರ್ಗದಿಂದ ಸುಖಲಭಿಸುವುದು ಅಸಾಧ್ಯ. ಜನತೆಯ ಕಷ್ಟ ನಿವಾರಣೆ ಮಾಡಲು ಆಸಕ್ತರಾಗಿರುವ ಈ ದೇಶದ ಅನೇಕ ಮಹತ್ವದ ವ್ಯಕ್ತಿಗಳ ಹೆಸರುಗಳನ್ನು ನಿಮ್ಮ ಪತ್ರ ಶೀರ್ಷಿಕೆಯ ಮೇಲೆ ನಾನು ಕಂಡೆ. ಪರಮ ದೇವೋತ್ತಮ ಪುರುಷನನ್ನು ತುಷ್ಟಿ ಪಡಿಸದೇ ಹೋದರೆ ಅವರ ಈ ಎಲ್ಲ ಪ್ರಯತ್ನಗಳೂ ನಿರರ್ಥಕ ಎಂಬುದನ್ನು ಅವನು ಖಚಿತವಾಗಿ ತಿಳಿದುಕೊಳ್ಳಬೇಕು. ಒಬ್ಬ ರೋಗಗ್ರಸ್ತ ಮನುಷ್ಯನು ಕೇವಲ ಒಬ್ಬ ತಜ್ಞ ವೈದ್ಯನ ಮತ್ತು ಔಷಧಿಯ ಸಹಾಯದಿಂದಲೇ ಬದುಕಿರಲು

ಸಾಧ್ಯವಿದ್ದರೆ ಯಾವ ಶ್ರೀಮಂತನೂ ಸಾಯುತ್ತಿರಲಿಲ್ಲ. ಪರಮ ದೇವೋತ್ತಮ ಪುರುಷನಾದ ಕೃಷ್ಣನ ಅನುಗ್ರಹ ಬೇಕೇಬೇಕು.

ನೀವು ಕೇವಲ ನಿಧಿ ಸಂಗ್ರಹಣೆ ಮಾಡುವ ಮೂಲಕ ಪರಿಹಾರಕಾರ್ಯವನ್ನು ಕೈಗೊಳ್ಳ ಬಯಸುತ್ತಿದ್ದರೆ ಅದು ಯಶಸ್ವಿಯಾಗಲಿಕ್ಕಿಲ್ಲವೆಂಬುದು ನನ್ನ ಭಾವನೆ. ನೀವು ಪರಮಾತ್ಮನನ್ನು ಸಂತೋಷಪಡಿಸಬೇಕು. ಅದೇ ಯಶಸ್ಸಿಗೆ ದಾರಿ ಉದಾಹರಣೆಗೆ ಎರಡು ವರ್ಷಗಳಿಂದಲೂ ಕ್ಷಾಮವಿದ್ದ ಇಲ್ಲಿ ಸಂಕೀರ್ತನೆ ನಡೆದ ಮೇಲೆ ಮಳೆ ಬೀಳಲು ಪ್ರಾರಂಭಿಸಿದೆ. ಕಳೆದ ಸಲ ನಾವು ದಿಲ್ಲಿಯಲ್ಲಿ ಹರೇ ಕೃಷ್ಣ ಉತ್ಸವ ಆಚರಿಸಿದೆವು. ಆಗ ಪಾಕಿಸ್ತಾನವು ಯುದ್ಧ ಘೋಷಣೆ ಮಾಡುವ ಅಪಾಯಕಾರಿಸ್ಥಿತಿ ಇತ್ತು. ಒಬ್ಬ ವೃತ್ತ ಪತ್ರಿಕಾಕರ್ತನು ನನ್ನ ಅಭಿಪ್ರಾಯಕ್ಕಾಗಿ ನನ್ನ ಬಳಿ ಬಂದನು. ಪ್ರತಿಪಕ್ಷವು ಆಕ್ರಮಣಕಾರಿ ಪ್ರವೃತ್ತಿಯಿಂದ ಕೂಡಿರುವುದರಿಂದ ಕದನ ನಡೆಯಲೇಬೇಕು. ಆದರೆ ನಮ್ಮ ಸಂಕೀರ್ತನ ಕಾರ್ಯಕ್ರಮ ದಿಂದಾಗಿ ಭಾರತವು ಜಯಶಾಲಿಯಾಯಿತು. ಅದೇ ಪ್ರಕಾರ ನಾವು ಕಲ್ಕತ್ತದಲ್ಲಿ ಉತ್ಸವವನ್ನು ಆಚರಿಸಿದಾಗ ನಕ್ಸಲೈಟ್ (ಕಮುನಿಸ್ಟ್) ಚಟುವಟಿಕೆಗಳು ನಿಂತವು. ಇವು ಸತ್ಯಸಂಗತಿಗಳಾಗಿವೆ. ಸಂಕೀರ್ತನ ಆಂದೋಲನದ ಮೂಲಕ ಜೀವನಕ್ಕೆ ಬೇಕಾದ ಅನುಕೂಲಗಳು ದೊರೆಯುವುದಷ್ಟೇ ಅಲ್ಲದೆ ಕೊನೆಯಲ್ಲಿ ನಾವು ಮರಳಿ ಧಾಮಕ್ಕೆ ಎಂದರೆ ದೇವತ್ವದೆಡೆಗೆ ಹೋಗುವೆವು. ಅಸುರಿ ಸ್ವಭಾವದವರು ಇದನ್ನು ಅರ್ಥ ಮಾಡಿಕೊಳ್ಳುವುದಿಲ್ಲ, ಆದರೆ ಇದು ಸತ್ಯ ಸಂಗತಿ.

ಆದುದರಿಂದ ನೀವು ಸಂಘದ ಮುಂದಾಳು ಸದಸ್ಯರಾಗಿ ನಮ್ಮ ಆಂದೋಲನವನ್ನು ಸೇರಿರಿ. ಹರೇಕೃಷ್ಣ ಮಂತ್ರ ಕೀರ್ತನೆಯಿಂದ ಯಾರಿಗೂ ನಷ್ಟವಿಲ್ಲ. ಬದಲಾಗಿ ದೊಡ್ಡ ಲಾಭವೇ ಉಂಟು. ಭಗವದ್ಗೀತೆಯ ಪ್ರಕಾರ ಶ್ರೇಷ್ಠರು ಯಾವುದನ್ನು ಆಚರಿಸುವರೋ ಜನ ಸಾಮಾನ್ಯರೂ ಅದನ್ನೇ ಮಾಡುತ್ತಾರೆ :

ಯದ್, ಯದ್ ಆಚರತಿ ಶ್ರೇಷ್ಠಸ್ ತತ್ ತತ್ ಏವೇತರೋ ಜನ ಃ
ಸಯತ್ ಪ್ರಮಾಣಂ ಕುರುತೇ ಲೋಕಸ್ತದ್ ಅನುವರ್ತತೇ

"ದೊಡ್ಡವರು ಏನು ಮಾಡುತ್ತಾರೋ ಅದನ್ನು ನೋಡಿ ಜನಸಾಮಾನ್ಯರೂ ಅವರ ಹೆಜ್ಜೆಗಳನ್ನೇ ಹಿಂಬಾಲಿಸುತ್ತಾರೆ. ದೊಡ್ಡವರು ತಮ್ಮ ಶ್ರೇಷ್ಠ ಆಚರಣೆಗಳಿಂದ ಯಾವ ಮಟ್ಟವನ್ನು ರೂಪಿಸುತ್ತಾರೋ ಇಡೀ ಜಗತ್ತು ಅದನ್ನೇ ಅನುಸರಿಸುತ್ತದೆ."

ಕೃಷ್ಣ ಪ್ರಜ್ಞಾ ಆಂದೋಲನವು ಬಲು ಮಹತ್ವದ್ದಾಗಿದೆ. ನಿಮ್ಮ ಮೂಲಕ ಭಾರತದ ಎಲ್ಲ ಮುಖಂಡ ಜನರೂ ಈ ಆಂದೋಲನವನ್ನು ಬಹಳ ಶ್ರದ್ಧಾಪೂರ್ವಕವಾಗಿ ಅಂಗೀಕರಿಸ ಬೇಕು. ಮತ್ತು ಈ ಆಂದೋಲನವನ್ನು ಇಡೀ ಜಗತ್ತಿನಲ್ಲಿ ಹರಡಲು ನಮಗೆ ಎಲ್ಲ ಅನುಕೂಲ ಗಳನ್ನು ನೀಡಬೇಕು. ಆಗ ಭಾರತದಲ್ಲಷ್ಟೇ ಅಲ್ಲ ಇಡೀ ವಿಶ್ವದಲ್ಲಿ ಸುಖಮಯ ವಾತಾವರಣವು ಮೂಡುತ್ತದೆ.

ನೀವು ಆರೋಗ್ಯವಾಗಿದ್ದೀರಿ ಎಂದು ನಂಬಿದ್ದೇನೆ.

ಸದಾ ನಿಮ್ಮ ಹಿತೈಷಿ

**ಎ. ಸಿ. ಭಕ್ತಿವೇದಾಂತಸ್ವಾಮಿ**



# ದೇವರ ಮೇಲೆ ನಮ್ಮ ಅವಲಂಬನೆಯ ಘೋಷಣೆ

**ಅನೇಕರಿಗೆ ಅಮೆರಿಕದ ದ್ವಿಶತಮಾನೋತ್ಸವವು ಬಹುದೊಡ್ಡ ಸಮಾರಂಭ. 1976ರ ಮಾರ್ಚ್ ತಿಂಗಳಲ್ಲಿ ಭಾರತದ ಮಾಯಾಪುರದಲ್ಲಿ ಮುರಳಿದೇವತ್ವದೆಡೆಗೆ ಪತ್ರಿಕೆಯ ಸಂಪಾದಕರು ಶ್ರೀಲ ಪ್ರಭುಪಾದರೊಂದಿಗೆ ವಿಶೇಷ ಸಂದರ್ಶನ ನಡೆಸಿದರು. ಆಗ ಅಮೆರಿಕನ್ನರು ಕೂಗುತ್ತಿದ್ದ " ಎಲ್ಲ ಮಾನವರು ಸಮಾನರು" "ನಾವು ದೇವರಲ್ಲಿ ನಂಬಿಕೆ ಇಡುತ್ತೇವೆ" ಮತ್ತು "ದೇವರ ನೇತೃತ್ವದಲ್ಲಿ ಒಂದೇ ರಾಷ್ಟ್ರ" ಎಂಬ ಘೋಷಣೆಗಳನ್ನು ಕೇಳಿ ಪ್ರಭುಪಾದರು ಅವರಕಡೆಗೆ ತೀಕ್ಷ್ಣದೃಷ್ಟಿಯನ್ನು ಬೀರಿದರು.**

ಮುರಳಿದೇವತ್ವದೆಡೆಗೆ : ಥಾಮಸ್ ಜೆಫರ್‌ಸನ್‌ನು ಅಮೆರಿಕದ ಕ್ರಾಂತಿಯ ಮೂಲತತ್ವವನ್ನು ಸ್ವಾತಂತ್ರ ಘೋಷಣೆಯಲ್ಲಿ ಅಡಕಗೊಳಿಸಿದ್ದನು. ಈ ಘೋಷಣೆಗೆ ಸಹಿಹಾಕಿದ್ದ ಅಂದಿನ ಪ್ರಮುಖ ಜನರೆಲ್ಲ, ಕೆಲವೊಂದು ಸ್ಪಷ್ಟವಾದ ಅಥವಾ ಸ್ವಯಂ ವಿದಿತವಾದ ಸತ್ಯಗಳಿವೆ, ಎಲ್ಲ ಮಾನವರು ಸಮಾನವಾಗಿ ಹುಟ್ಟಿದ್ದಾರೆ ಎಂಬುದು ಅವು ಗಳಲ್ಲಿ ಒಂದು ಎಂಬುದನ್ನು ಒಪ್ಪಿಕೊಂಡಿದ್ದಾರೆ. ಇದರಿಂದ ಎಲ್ಲ ಮಾನವರು ಕಾನೂನಿನ ದೃಷ್ಟಿಯಲ್ಲಿ ಸಮಾನರು. ಮತ್ತು ಕಾನೂನಿನ ರಕ್ಷಣೆ ಪಡೆಯಲು ಸಮಾನವಾದ ಹಕ್ಕು ಹೊಂದಿದ್ದಾರೆ ಎಂಬ ಅರ್ಥಮೂಡಿ ಬರುತ್ತದೆ.

ಶ್ರೀಲ ಪ್ರಭುಪಾದ: ಹೌದು. ನೀವು ಹೇಳಿದ ಅರ್ಥದಲ್ಲಿ ಮಾನವರೆಲ್ಲ ಸಮಾನರು.

ಮು.ದೇ.: ಸ್ವಾತಂತ್ರ್ಯ ಘೋಷಣೆಯಲ್ಲಿ ಇರುವ ಮತ್ತೊಂದು ಅಂಶವೆಂದರೆ ಎಲ್ಲ ಮಾನವರಿಗೂ ದೇವರು ಕೆಲವೊಂದು ಸ್ವಾಭಾವಿಕವಾದ ಅಧಿಕಾರಗಳನ್ನು ನೀಡಿದ್ದಾನೆ. ಅವುಗಳನ್ನು ಅವರಿಂದ ಕಿತ್ತುಕೊಳ್ಳುವಂತಿಲ್ಲ. ಇವೇ ಜೀವನದ ಮತ್ತು ಸ್ವಾತಂತ್ರ್ಯದ ಹಕ್ಕು; ಮತ್ತು . . . .

ಶ್ರೀಲ ಪ್ರಭುಪಾದ: ಆದರೆ ಜೀವಿಸಲು ಪ್ರಾಣಿಗಳಿಗೂ ಹಕ್ಕು ಉಂಟು. ಜೀವಿಸಲು ಪ್ರಾಣಿಗಳಿಗೆ ಹಕ್ಕು ಏಕೆ ಇರಬಾರದು? ಉದಾಹರಣೆಗೆ ಮೊಲಗಳು ಅರಣ್ಯದಲ್ಲಿ

ತಮ್ಮದೇ ಆದ ರೀತಿಯಲ್ಲಿ ಜೀವಿಸುತ್ತಿವೆ. ಬೇಟೆಗಾರರು ಕಾಡಿಗೆ ಹೋಗಿ ಅವುಗಳನ್ನು ಬೇಟೆಯಾಡಲು ಸರ್ಕಾರದವರು ಏಕೆ ಅನುಮತಿ ನೀಡುತ್ತಾರೆ ?

ಮ. ದೇ : ಅವರು ಕೇವಲ ಮಾನವರ ಬಗ್ಗೆ ಮಾತ್ರ ಮಾತನಾಡುತ್ತಿದ್ದಾರೆ.

ಶ್ರೀಲ ಪ್ರಭುಪಾದರು : ಹಾಗಾದರೆ ಅವರು ನಿಜವಾದ ತಾತ್ವಿಕ ದೃಷ್ಟಿ ಹೊಂದಿಲ್ಲವೆಂದೇ ಅರ್ಥ. ನನ್ನ ಕುಟುಂಬ ಅಥವಾ ಸೋದರರು ಮಾತ್ರ ಒಳ್ಳೆಯವರು. ಇತರರನ್ನು ನಾನು ಕೊಲ್ಲಬಹುದು ಎಂಬುದು ಬಹಳ ಸಂಕುಚಿತವಾದ ವಿಚಾರ. ಅದು ಅಪರಾಧವೇ ಸರಿ. ನನ್ನ ಕುಟುಂಬದ ಹಿತಕ್ಕಾಗಿ ನಾನು ನಿಮ್ಮ ತಂದೆಯನ್ನು ಕೊಂದರೆ ಅದು ಧರ್ಮವೇ ? ನಿಜವಾದ ಧರ್ಮ ಎಂದರೆ **ಸುಹೃದಂ ಸರ್ವ ಭೂತಾನಾಮ.** ಎಲ್ಲ ಜೀವರಾಶಿಗಳು ಮಿತ್ರರೇ. ಇದು ಖಂಡಿತ ಎಲ್ಲ ಮಾನವರಿಗೂ ಅನ್ವಯಿಸುತ್ತದೆ. ಆದುದರಿಂದ ನೀವು ಅನಾವಶ್ಯಕವಾಗಿ ಒಂದು ಪ್ರಾಣಿಯನ್ನು ಕೊಂದರು ಕೂಡ, ನಾನು ಕೂಡಲೇ, "ನೀವು ಎಂಥ ಕೆಟ್ಟ ಕೆಲಸ ಮಾಡುತ್ತಿದ್ದೀರಿ"? ಎಂದು ಪ್ರತಿಭಟಿಸುತ್ತೇನೆ.

ಮ. ದೇ : ಅಮೆರಿಕದ ಸ್ಥಾಪಕರು ಸ್ವಾತಂತ್ರ್ಯದ ಹಕ್ಕು ಮತ್ತೊಂದು ಸ್ವಾಭಾವಿಕ ಹಕ್ಕು ಎಂದಿದ್ದಾರೆ. ಎಂದರೆ ನೀವು ಯಾವ ಕೆಲಸ ಮಾಡಬೇಕೆಂದು ಹೇಳಲು ಸರ್ಕಾರದವರಿಗೆ ಹಕ್ಕಿಲ್ಲ ಎಂಬುದೇ ಆ ಸ್ವಾತಂತ್ರ್ಯದ ಅರ್ಥ.

ಶ್ರೀಲ ಪ್ರಭುಪಾದ : ಸರ್ಕಾರವು ಪರಿಪೂರ್ಣವಾಗಿಲ್ಲದಿದ್ದರೆ, ಜನ ಏನು ಮಾಡಬೇಕೆಂದು ಹೇಳಲು ಅದಕ್ಕೆ ಅವಕಾಶ ಕೊಡಕೂಡದು. ಅದು ಪರಿಪೂರ್ಣವಾದದ್ದಾಗಿದ್ದರೆ ಹಾಗೆ ಮಾಡಬಹುದಾಗಿದೆ.

ಅವರು ಹೇಳಿದ ಮೂರನೆಯ ಸ್ವಾಭಾವಿಕ ಹಕ್ಕೆಂದರೆ ಮಾನವನು ಸುಖದ ಸಾಧನೆಯ ಹಕ್ಕು ಹೊಂದಿದ್ದಾನೆ.

ಶ್ರೀಲಪ್ರಭುಪಾದ: ಹೌದು, ಆದರೆ ನಿಮ್ಮ ಸುಖದ ಮಟ್ಟವು ನನ್ನ ಸುಖದ ಮಟ್ಟದಿಂದ ಭಿನ್ನವಾಗಿರಬಹುದು. ನೀವು ಮಾಂಸ ತಿನ್ನಬಹುದು. ನನಗೆ ಅದು ಅಸಹ್ಯ. ನಿಮ್ಮ ಮತ್ತು ನನ್ನ ಸುಖದ ಕಲ್ಪನೆಗಳು ಸಮಾನವಾಗಿರುವುದು ಹೇಗೆ ಸಾಧ್ಯ ?

ಮ. ದೇ : ಹಾಗಾದರೆ ಪ್ರತಿಯೊಬ್ಬನೂ ತನಗೆ ಇಷ್ಟವೆನಿಸಿದ ಸುಖವನ್ನು ಪಡೆಯಲು ಸ್ವತಂತ್ರನಾಗಿರಬೇಕಷ್ಟೆ ?

ಶ್ರೀಲ ಪ್ರಭುಪಾದ : ಇಲ್ಲ. ವ್ಯಕ್ತಿಯ ಗುಣಾನುಸಾರ ಸುಖದ ಮಟ್ಟವನ್ನು ನಿಯಮಿಸಬೇಕು. ನೀವು ಇಡೀ ಸಮಾಜವನ್ನು ನಾಲ್ಕು ಗುಂಪುಗಳಲ್ಲಿ ವಿಂಗಡಿಸಬೇಕು. ಎಂದರೆ ಬ್ರಾಹ್ಮಣ ಗುಣವುಳ್ಳವರು, ಕ್ಷತ್ರಿಯ ಗುಣವುಳ್ಳವರು, ವೈಶ್ಯ ಗುಣವುಳ್ಳವರು ಮತ್ತು ಶೂದ್ರ

ಗುಣವುಳ್ಳವರು. ಹೀಗೆ[1] ಪ್ರತಿಯೊಬ್ಬನಿಗೂ ತನ್ನ ನೈಸರ್ಗಿಕ ಗುಣಗಳಿಗೆ ಅನುಸಾರವಾಗಿ ದುಡಿಯಲು ಒಳ್ಳೆಯ ಅವಕಾಶವಿರಬೇಕು.

ನೀವು ಒಂದು ಹೋರಿಯನ್ನು ಕುದುರೆಯ ಕೆಲಸಕ್ಕೆ ಅಥವಾ ಕುದುರೆಯನ್ನು ಹೋರಿಯ ಕೆಲಸಕ್ಕೆ ಹೂಡಲು ಬರುವುದಿಲ್ಲ. ಈಗ ಎಲ್ಲರಿಗೂ ಸರ್ವೇ ಸಾಮಾನ್ಯವಾಗಿ ಕಾಲೇಜು ಶಿಕ್ಷಣ ದೊರೆಯುತ್ತಿದೆ. ಆದರೆ ಈ ಕಾಲೇಜುಗಳಲ್ಲಿ ಹೇಳಿಕೊಡುವುದೇನು ? ಹೆಚ್ಚಾಗಿ ತಾಂತ್ರಿಕ ಜ್ಞಾನವೇ ಅಲ್ಲಿ ದೊರೆಯುತ್ತದೆ. ಅದು ಶೂದ್ರ ಶಿಕ್ಷಣ. ನಿಜವಾದ ಶ್ರೇಷ್ಠ ವಿದ್ಯೆಯೆಂದರೆ ವೈದಿಕ ಜ್ಞಾನ. ಇದು ಬ್ರಾಹ್ಮಣರಿಗೆ ಮಾತ್ರ ಮೀಸಲು. ಶೂದ್ರ ಶಿಕ್ಷಣವೊಂದೇ ಗೊಂದಲಕ್ಕೆ ಕಾರಣವಾಗುತ್ತದೆ. ಪ್ರತಿಯೊಬ್ಬನು ಯಾವ ಬಗೆಯ ಶಿಕ್ಷಣಕ್ಕೆ ಅರ್ಹನು ಎಂಬು ದನ್ನು ಪರೀಕ್ಷಿಸಿ ಕಂಡುಕೊಳ್ಳಬೇಕು. ಕೆಲವು ಶೂದ್ರರಿಗೆ ತಾಂತ್ರಿಕ ಶಿಕ್ಷಣ ನೀಡಬಹುದು. ಆದರೆ ಅವರಲ್ಲಿ ಅನೇಕರು ಹೊಲಗದ್ದೆಗಳಲ್ಲಿ ದುಡಿಯಬೇಕು. ಪ್ರತಿಯೊಬ್ಬರು ತಾವು ಹೆಚ್ಚು ಹಣಗಳಿಸಬಹುದು ಎಂಬ ವಿಚಾರದಿಂದ ಶಿಕ್ಷಣಕ್ಕಾಗಿ ನಗರಗಳನ್ನು ಬಂದು ಸೇರುತ್ತಿದ್ದಾರೆ. ಇದರಿಂದ ಕೃಷಿಯನ್ನು ನಿರ್ಲಕ್ಷಿಸಿದಂತಾಗಿದೆ. ಈಗ ಒಳ್ಳೆಯ ಆಹಾರ ಧಾನ್ಯಗಳನ್ನು ಉತ್ಪಾದಿ ಸುವಲ್ಲಿ ಜನ ತೊಡಗಿಲ್ಲ. ಇದರಿಂದ ಅಭಾವವು ತಲೆದೋರಿದೆ. ಈ ಎಲ್ಲ ದೋಷಗಳು ಸರಿಯಾದ ಸರ್ಕಾರವಿಲ್ಲದೆ ಹುಟ್ಟಿಕೊಂಡಿವೆ. ಪ್ರತಿಯೊಬ್ಬನೂ ತನ್ನ ನೈಸರ್ಗಿಕ ಗುಣಗಳಿಗೆ ಅನುಗುಣವಾಗಿ ಕೆಲಸ ಮಾಡುವಂತೆ ನೋಡಿಕೊಳ್ಳುವುದೇ ಒಳ್ಳೆಯ ಸರ್ಕಾರದ ಕರ್ತವ್ಯ. ಆಗ ಜನ ಸುಖಿಗಳಾಗುತ್ತಾರೆ.

ಮ. ದೇ : ಹಾಗಾದರೆ ಸರ್ಕಾರವು ಅನೈಸರ್ಗಿಕವಾಗಿ ಎಲ್ಲ ಜನರನ್ನೂ ಒಂದೇ ವರ್ಗಕ್ಕೆ ಸೇರಿಸಿದರೆ ಸುಖ ದೊರೆಯದು.

ಶ್ರೀಲ ಪ್ರಭುಪಾದ : ಹೌದು. ಅದು ಅಸ್ವಾಭಾವಿಕ. ಅದು ಗೊಂದಲಕ್ಕೆ ಕಾರಣ ವಾಗುತ್ತದೆ.

ಮ. ದೇ : ಅಮೆರಿಕದ ಸ್ಥಾಪಕರು ವರ್ಗ ಸೃಷ್ಟಿಯನ್ನು ಬಯಸಲಿಲ್ಲ. ಆದ್ದರಿಂದ ಅವರಿಗೆ ಕಟು ಅನುಭವ ದೊರೆತಿತ್ತು. ಕ್ರಾಂತಿಗಿಂತ ಮುಂಚೆ ಅಮೆರಿಕನ್ನರು ರಾಜರ ಆಧಿ ಪತ್ಯಕ್ಕೆ ಒಳಪಟ್ಟಿದ್ದರು. ಆ ರಾಜರಾದರೋ ಯಾವಾಗಲೂ ಕ್ರೂರರೂ ಅನ್ಯಾಯಪರರೂ ಆಗಿರುತ್ತಿದ್ದರು.

ಶ್ರೀಲ ಪ್ರಭುಪಾದ: ಅವರು ರಾಜಋಷಿಗಳಾಗಿ ತರಬೇತಿ ಹೊಂದಿರುವುದಿಲ್ಲ. ವೈದಿಕ ಸಂಸ್ಕೃತಿಯ ಕಾಲದಲ್ಲಿ ಮಕ್ಕಳಿಗೆ ಬಾಲ್ಯದಿಂದಲೇ ಅತ್ಯುತ್ತಮ ನೈಷ್ಠಿಕ ಬ್ರಹ್ಮಚಾರಿ ಯಾಗಲು ತರಬೇತಿ ನೀಡಲಾಗುತ್ತಿತ್ತು. ಅವರನ್ನು ಗುರುಕುಲಗಳಿಗೆ ಕಳುಹಿಸಲಾಗುತ್ತಿತ್ತು. ಅಲ್ಲಿ ಅವರು ಶಮ, ದಮ, ಸತ್ಯ, ಶೌಚಾಚಾರ ಮತ್ತು ಇತರ ಅನೇಕ ಸಾತ್ವಿಕ ಗುಣಗಳನ್ನು

---

1 ಬ್ರಾಹ್ಮಣರು ಸಮಾಜದಲ್ಲಿ ವಿದ್ವಾಂಸರು ಮತ್ತು ಪವಿತ್ರರೂ ಆದ ಉಪದೇಶಕರು (ಆಧ್ಯಾತ್ಮ ನೇತಾರರು). ಕ್ಷತ್ರಿಯರು, ಸೈನಿಕರು ಮತ್ತು ಆಡಳಿತಗಾರರು. ವೈಶ್ಯರು ವರ್ತಕರು ಮತ್ತು ಶೂದ್ರರು ದುಡಿಮೆಗಾರರು.

ಕಲಿಯುತ್ತಿದ್ದರು. ಅವರಲ್ಲಿ ಅತ್ಯುತ್ತಮರಾದವರು ಆಮೇಲೆ ದೇಶದ ರಾಜ್ಯಭಾರಕ್ಕೆ ಯೋಗ್ಯರಾಗುತ್ತಿದ್ದರು.

ಅಮೆರಿಕದ ಕ್ರಾಂತಿಯು ವಿಶೇಷ ಮಹತ್ವವನ್ನೇನೂ ಹೊಂದಿಲ್ಲ, ಜನ ಅಸುಖಿಗಳಾದೊಡನೆಯೇ ದಂಗೆ ಏಳುತ್ತಾರೆ. ಇದೇ ಮುಖ್ಯ ಅಂಶ. ಅಮೆರಿಕದಲ್ಲಿ ಹೀಗೆಯೇ ಆಯಿತು. ಇದು ಫ್ರಾನ್ಸಿನಲ್ಲಿಯೂ ನಡೆಯಿತು ಮತ್ತು ಕಷ್ಟದಲ್ಲಿಯೂ ಸಂಭವಿಸಿತು.

ಮ. ದೇ : ಅಮೆರಿಕದ ಕ್ರಾಂತಿಕಾರಿಗಳು ಹೇಳಿದ್ದೇನೆಂದರೆ, ಸರ್ಕಾರವು ಜನರಿಗೆ ಸರಿಯಾದ ಆಡಳಿತ ನೀಡದಿದ್ದರೆ, ಜನ ಅಂಥ ಸರ್ಕಾರವನ್ನು ವಜಾ ಮಾಡಲು ಹಕ್ಕು ಹೊಂದಿರುತ್ತಾರೆ.

ಶ್ರೀಲಪ್ರಭುಪಾದ: ಹೌದು ನಿಕ್ಸನ್ನರಿಗೆ ಹಾಗೇ ಆಯಿತು. ಜನ ಅವರನ್ನು ಉರುಳಿಸಿದರು. ಆದರೆ ಒಬ್ಬ ನಿಕ್ಸನ್ನನ ಬದಲು ಮತ್ತೊಬ್ಬ ನಿಕ್ಸನ್ನನನ್ನು ಕೂರಿಸಿದರೆ ಅದಕ್ಕೆ ಏನು ಬೆಲೆ ? ನಿಕ್ಸನ್ನನ ಸ್ಥಾನದಲ್ಲಿ ಒಬ್ಬ ಸಾಧು ಸ್ವಭಾವದ ನಾಯಕನನ್ನು ಆರಿಸಬೇಕೆಂಬುದನ್ನು ಜನ ತಿಳಿದುಕೊಳ್ಳಬೇಕು. ಜನರಿಗೆ ಆ ಬಗೆಯ ತರಬೇತಿ ಅಥವಾ ಸಂಸ್ಕೃತಿ ಇಲ್ಲದಿರುವುದರಿಂದ, ಅವರು ಒಬ್ಬನ ಅನಂತರ ಮತ್ತೊಬ್ಬ ನಿಕ್ಸನ್ನರನ್ನೇ ಆಯ್ಕೆ ಮಾಡುತ್ತ ಹೋಗುತ್ತಾರೆ. ಇದರಿಂದ ಅವರಿಗೆ ಸುಖ ಸಿಕ್ಕುವುದಿಲ್ಲ. ಆದರೆ ಜನ ಸುಖ ಹೊಂದಬಹುದು. ಸುಖ ಪ್ರಾಪ್ತಿಯ ತತ್ವವನ್ನು ಭಗವದ್ಗೀತೆಯಲ್ಲಿ ಕಾಣಬಹುದು. ಈ ಭೂಮಿ ಭಗವಂತನಿಗೆ ಸೇರಿದ್ದಾಗಿದೆ ಎಂಬುದನ್ನು ಮೊದಲು ಅವರು ತಿಳಿದುಕೊಳ್ಳಬೇಕು. ಈ ಭೂಮಿ ತಮಗೆ ಸೇರಿದ್ದೆಂದು ಅಮೆರಿಕನ್ನರು ಏಕೆ ಹೇಳುತ್ತಾರೆ ? ಅಮೆರಿಕಾದಲ್ಲಿ ಮೊದಲು ನೆಲೆಸಲು ಹೋದವರು "ಇದು ಭಗವಂತನಿಗೆ ಸೇರಿದ ಭೂಮಿ, ಆದುದರಿಂದ ಇಲ್ಲಿ ವಾಸಿಸಲು ನಮಗೆ ಹಕ್ಕಿದೆ" ಎಂದರು. ಈಗ ಬೇರೆಯವರು ಇಲ್ಲಿ ಬಂದು ನೆಲೆಸಲು ಅವರೇಕೆ ಅನುಮತಿ ಕೊಡುತ್ತಿಲ್ಲ ? ಇದರಲ್ಲಿ ಅಡಗಿದ ತತ್ವವೇನು ? ಜಗತ್ತಿನಲ್ಲಿ ಅತಿ ಜನಸಂಖ್ಯೆ ಇರುವ ದೇಶಗಳು ಬೇಕಾದಷ್ಟಿವೆ. ಅಮೆರಿಕ ಸರ್ಕಾರವು ಆ ಜನರಿಗೆ ಅಮೆರಿಕಕ್ಕೆ ಹೋಗಿ ಅಲ್ಲಿ ಭೂಮಿ ಉಳುಮೆ ಮಾಡಿ ಆಹಾರ ಧಾನ್ಯ ಬೆಳೆಯಲು ಅನುಕೂಲ ಒದಗಿಸಬೇಕು. ಅವರೇಕೆ ಇದನ್ನು ಮಾಡುತ್ತಿಲ್ಲ ? ತಾವು ಒತ್ತಾಯದಿಂದ ಇತರರ ಸ್ವತ್ತನ್ನು ಪಡೆದುಕೊಂಡಿದ್ದಾರೆ ಮತ್ತು ಅಲ್ಲಿ ಇತರರು ಹೋಗಲು ಬಲಪ್ರಯೋಗ ಮಾಡಿ ತಡೆಯುತ್ತಿದ್ದಾರೆ. ಇದೆಲ್ಲದರ ಹಿಂದೆ ಅಡಗಿರುವ ತತ್ವವೇನು ?

ಮ. ದೇ : ಇದರಲ್ಲಿ ತತ್ವವೇನೂ ಇಲ್ಲ.

ಶ್ರೀಲ ಪ್ರಭುಪಾದ : ಇದು ದುಂಡಾಳುತನದ ತತ್ವ. ಅವರು ಇತರರ ಸ್ವತ್ತನ್ನು ತಾವು ತೆಗೆದುಕೊಳ್ಳುತ್ತಾರೆ. ಆಮೇಲೆ ಇತರರು ಬೇರೆಯುವರ ಸ್ವತ್ತನ್ನು ಒತ್ತಾಯದಿಂದ ತೆಗೆದುಕೊಳ್ಳಕೂಡದೆಂದು ಕಾನೂನು ಮಾಡುತ್ತಾರೆ. ಆದುದರಿಂದ ಅವರು ಕಳ್ಳರು. ದೇವರ ಭೂಮಿಯಲ್ಲಿ ದೇವರ ಮಕ್ಕಳು ನೆಲೆಸದಂತೆ ಅವರು ನಿರ್ಬಂಧಿಸಲು ಬರುವುದಿಲ್ಲ. ಎಲ್ಲೆಲ್ಲಿ ಸಾಕಷ್ಟು ಭೂಮಿ ಇದೆಯೋ ಅಲ್ಲಿ ಮಾನವರು ನೆಲೆಸಿ ಆಹಾರ ಉತ್ಪಾದಿಸುವಂತೆ ಮಾಡಲು ಅಮೆರಿಕ

ಮತ್ತು ಸಂಯುಕ್ತ ರಾಷ್ಟ್ರದ ಇತರ ದೇಶಗಳು ಒಮ್ಮತಕ್ಕೆ ಬರಬೇಕು. "ಸರಿ, ನಿಮ್ಮಲ್ಲಿ ಜನಸಂಖ್ಯೆ ಹೆಚ್ಚಿದೆ ನೀವು ಇಲ್ಲಿ ಬರಬಹುದು. ನಾವು ಅವರಿಗೆ ಇಲ್ಲಿ ಭೂಮಿ ಕೊಡುತ್ತೇವೆ. ಅವರು ಆಹಾರ ಉತ್ಪಾದಿಸಲಿ" ಎಂದು ಸರ್ಕಾರವು ಹೇಳಬಹುದು. ಇದರಿಂದ ಅದ್ಭುತ ಪರಿಣಾಮವನ್ನು ಕಾಣಬಹುದು. ಆದರೆ ಅವರು ಹೀಗೆ ಮಾಡುವರೆ ? ಇಲ್ಲ. ಹಾಗಾದರೆ ಅವರ ತತ್ವವೇನು ? ಗೂಂಡಾಗಿರಿ ಅಷ್ಟೆ. "ನಾನು ಒತ್ತಾಯದಿಂದ ಭೂಮಿಯನ್ನು ತೆಗೆದುಕೊಳ್ಳುತ್ತೇನೆ. ಆಮೇಲೆ ಯಾರನ್ನೂ ಅಲ್ಲಿ ಬರಲು ಬಿಡುವುದಿಲ್ಲ" ಇದೇ ತಾನೆ ?

ಮ. ದೇ : "ದೇವರ ನೇತೃತ್ವದಲ್ಲಿ ಒಂದೇ ರಾಷ್ಟ್ರ" ಎಂಬುದು ಅಮೆರಿಕದ ಒಂದು ಘೋಷವಾಕ್ಯ.

ಶ್ರೀಲ ಪ್ರಭುಪಾದ : ಹೌದು. ಅದೇ ಕೃಷ್ಣಪ್ರಜ್ಞೆ. ದೇವರ ವಿಶ್ವದಲ್ಲಿ ಒಂದೇ ರಾಷ್ಟ್ರವಿರಬೇಕು. ಮತ್ತು ಒಂದೇ ಸರ್ಕಾರವಿರಬೇಕು. ಎಲ್ಲವೂ ದೇವರಿಗೆ ಸೇರಿದ್ದು. ನಾವೆಲ್ಲರೂ ಅವನ ಮಕ್ಕಳು. ಈ ತತ್ವಬೇಕಾಗಿದೆ.

ಮ. ದೇ : ಅಮೆರಿಕದಲ್ಲಿ ಕೇಂದ್ರ ಸರ್ಕಾರ ಎಂದರೆ ಜನ ಬಹಳ ಹೆದರುತ್ತಾರೆ. ಕೇಂದ್ರದಲ್ಲಿ ಬಲವಾದ ಸರ್ಕಾರ ಇದ್ದರೆ ಅದು ದಬ್ಬಾಳಿಕೆ ನಡೆಸುತ್ತದೆ ಎಂಬುದು ಅವರ ಕಲ್ಪನೆ.

ಶ್ರೀಲ ಪ್ರಭುಪಾದ : ಜನ ನಾಯಕರಿಗೆ ಸರಿಯಾದ ತರಬೇತಿ ನೀಡಿದರೆ ದಬ್ಬಾಳಿಕೆ ಇರುವುದಿಲ್ಲ.

ಮ. ದೇ : ರಾಷ್ಟ್ರ ನಾಯಕನ ಕೈಯಲ್ಲಿ ಅತಿ ಅಧಿಕಾರ ಕೇಂದ್ರೀಕೃತವಾದರೆ ಅವನು ಖಂಡಿತ ಭ್ರಷ್ಟನಾಗುತ್ತಾನೆ ಎಂಬುದು ಅಮೆರಿಕ ಮಾದರಿಯ ಸರ್ಕಾರದ ಒಂದು ನಂಬಿಕೆ.

ಶ್ರೀಲ ಪ್ರಭುಪಾದ : ನೀವು ಅವನನ್ನು ಭ್ರಷ್ಟನಾಗದ ಹಾಗೆ ತರಬೇತಿಗೊಳಿಸಬೇಕು.

ಮ. ದೇ : ಆ ತರಬೇತಿ ಕ್ರಮ ಯಾವುದು ?

ಶ್ರೀಲ ಪ್ರಭುಪಾದ : ಆ ತರಬೇತಿ ಎಂದರೆ ವರ್ಣಾಶ್ರಮ ಧರ್ಮ (ವರ್ಣಾಶ್ರಮ ಎಂದರೆ ಜನರ ಸ್ವಭಾವ ಗುಣಗಳನ್ನನುಸರಿಸಿ ಸಮಾಜವನ್ನು ನಾಲ್ಕು ಸಾಮಾಜಿಕ ಮತ್ತು ನಾಲ್ಕು ಆಧ್ಯಾತ್ಮಿಕ ವರ್ಗಗಳಾಗಿ ವಿಂಗಡಿಸುವ ಪದ್ಧತಿ). ಸಮಾಜವನ್ನು ಗುಣಾನುಸಾರ ವರ್ಗೀಕರಿಸಿ, ಎಲ್ಲವೂ ದೇವರಿಗೆ ಸೇರಿದ್ದು, ಅದನ್ನು ಭಗವಂತನ ಸೇವೆಗೆ ಉಪಯೋಗಿಸಬೇಕು ಎಂದು ಜನತೆಗೆ ತರಬೇತಿ ನೀಡಬೇಕು. ಆಗ ಮಾತ್ರ ದೇವರಡಿಯಲ್ಲಿ ಒಂದು ಜನಾಂಗ ಇರುವುದು ಸಾಧ್ಯ."

ಮ.ದೇ: ಸಮಾಜವನ್ನು ಬೇರೆಬೇರೆ ಗುಂಪುಗಳಲ್ಲಿ ವಿಂಗಡಿಸಿದರೆ ಪರಸ್ಪರ ಅಸೂಯೆ ಉಂಟಾಗುವುದಿಲ್ಲವೆ ?

ಶ್ರೀಲಪ್ರಭುಪಾದ: ಇಲ್ಲ, ಇಲ್ಲ. ನನ್ನದೇಹದಲ್ಲಿ ವಿವಿಧ ಭಾಗಗಳಿದ್ದು ಅವು ಹೇಗೆ ಒಟ್ಟಾಗಿ ಕಾರ್ಯಮಾಡುತ್ತಿವೆಯೊ, ಹಾಗೆಯೆ ಸಮಾಜವು ಕೂಡ ವಿವಿಧ ವರ್ಗಗಳಲ್ಲಿ

ಒಂದೆ ಗುರಿ ಸಾಧನೆಗೆ ಒಟ್ಟಾಗಿ ಕೆಲಸ ಮಾಡಬಹುದು. ನನ್ನಕೈ ಮತ್ತು ಕಾಲು ಬೇರೆ ಬೇರೆ. ಆದರೆ "ನೀರು ತೆಗೆದುಕೊಂಡುಬಾ" ಎಂದು ನಾನು ನನ್ನ ಕೈಗೆ ಹೇಳಿದರೆ ಕಾಲು ತಾನಾಗಿಯೆ ಅದಕ್ಕೆ ಸಹಾಯ ಮಾಡುತ್ತದೆ. ಆ ಕೆಲಸಕ್ಕೆ ಕಾಲುಕೈ ಎರಡೂ ಬೇಕು.

ಮ.ದೇ : ಆದರೆ ಪಾಶ್ಚಾತ್ಯ ಜಗತ್ತಿನಲ್ಲಿ ಒಂದು ಕಾರ್ಮಿಕ ವರ್ಗ. ಮತ್ತೊಂದು ಬಂಡವಾಳ ವರ್ಗ. ಇವರೀರ್ವರ ನಡುವೆ ಸದಾ ಕದನ ನಡದೇ ಇರುತ್ತದೆ.

ಶ್ರೀಲಪ್ರಭುಪಾದ : ಹೌದು. ಬಂಡವಾಳವರ್ಗವೂ ಬೇಕು. ಕಾರ್ಮಿಕವರ್ಗವೂ ಬೇಕು.

ಮ.ದೇ : ಆದರೆ ಅವರು ಜಗಳ ಕಾಯುತ್ತಾರಲ್ಲ?

ಶ್ರೀಲಪ್ರಭುಪಾದ : ಅವರಿಗೆ ಸರಿಯಾದ ತರಬೇತಿ ದೊರೆತಿಲ್ಲ. ಅವರಿಗೆ ಧ್ಯೇಯ ಸಾಮ್ಯವಿಲ್ಲ. ಕೈಕಾಲು ಬೇರೆಬೇರೆ ರೀತಿಯಲ್ಲಿ ಕೆಲಸ ಮಾಡುತ್ತವೆ. ಆದರೆ ದೇಹ ಪೋಷಣೆಯೆ ಅವುಗಳ ಮುಖ್ಯ ಉದ್ದೇಶ. ಹಾಗೆಯೇ ಕಾರ್ಮಿಕರಿಗೂ ಬಂಡವಾಳ ವರ್ಗದವರಿಗೂ ಸಮಾನವಾಗಿ ಹಿತವೆನಿಸುವ ಒಂದು ಧ್ಯೇಯವನ್ನು ನೀವು ನಿರೂಪಿಸಿದರೆ ಆಗ ಅವರಲ್ಲಿ ಕದನವಿರುವುದಿಲ್ಲ. ಆದರೆ ಸಮಾನಧ್ಯೇಯವಿಲ್ಲದಿದ್ದರೆ ಯಾವಾಗಲೂ ಕದನ ನಡೆಯು ತ್ತದೆ.

ಮ. ದೇ : ಕ್ರಾಂತಿ ಅಲ್ಲವೇ ?

ಶ್ರೀಲ ಪ್ರಭುಪಾದ : ಹೌದು.

ಮ.ದೇ : ಹಾಗಾದರೆ ಜನರು ಒಂದಾಗುವಂತೆ ಒಂದು ಸಮಾನ ಹಿತಾಸಕ್ತಿಯನ್ನು ಕಂಡು ಹಿಡಿಯುವುದು ಮಹತ್ವದ್ದಲ್ಲವೆ ?

ಶ್ರೀಲ ಪ್ರಭುಪಾದ : ಹೌದು. ನಾನು ಎಲ್ಲರಿಗೂ ಸಮಾನವಾದ ಒಂದು ಧ್ಯೇಯ ವನ್ನು ಬೋಧಿಸುವುದರಿಂದ, ನಮ್ಮ ಈ ಕೃಷ್ಣಪ್ರಜ್ಞಾ ಸಂಘದಲ್ಲಿ ಪ್ರತಿಯೊಂದು ಕೆಲಸದ ಬಗ್ಗೆ ನನ್ನ ಸಲಹೆ ಕೇಳಲು ಬಂದಹಾಗೆ. ಇಲ್ಲದಿದ್ದರೆ ಕದನ. ಸರ್ಕಾರವು ಎಲ್ಲರಿಗೂ ಸಮಾನವಾದ ಧ್ಯೇಯವಾವುದು ಎಂದರೆ ಜೀವನದ ಗುರಿಯಾವುದು ಎಂಬುದನ್ನು ತಿಳಿದುಕೊಳ್ಳುವಷ್ಟು ಪರಿಶ್ರಮ ಹೊಂದಿರಬೇಕು ಮತ್ತು ಸರ್ಕಾರವು ಆ ಉದ್ದೇಶಕ್ಕಾಗಿ ಕೆಲಸ ಮಾಡುವಂತೆ ಜನಗಳಿಗೆ ತರಬೇತಿ ನೀಡಬೇಕು. ಆಗ ಜನ ಶಾಂತಿಯುತ ಸುಖ ಬಾಳ್ವೆ ನಡೆಸುತ್ತಾರೆ. ಹಾಗಿಲ್ಲದೆ ಜನ ನಿಕ್ಸನ್ನರಂಥ ದುರಾತರನ್ನು ಆಯ್ಕೆ ಮಾಡಿದರೆ ಸಮಾನ ಧ್ಯೇಯ ಎಂಬುದೇ ಇರುವುದಿಲ್ಲ. ಯಾವುದೋ ಒಂದು ಏರ್ಪಾಡು ಮಾಡಿಕೊಂಡು ಯಾವ ದುಷ್ಟನಾದರೂ ಮತಗಳನ್ನು ಗಳಿಸಿಕೊಳ್ಳಬಹುದು. ಆಗ ಅವನು ಸರ್ಕಾರದ ಮುಖ್ಯನಾಗಿ ಬರುತ್ತಾನೆ. ಅಭ್ಯರ್ಥಿಗಳು ಲಂಚ ನೀಡುತ್ತಾರೆ, ಮೋಸಮಾಡುತ್ತಾರೆ ಮತ್ತು ಮತಗಳಿಸಲು ಪ್ರಚಾರ ನಡೆಸುತ್ತಾರೆ. ಯಾವ ಯಾವುದೊ ರೀತಿಯಲ್ಲಿ ಅವರು ಮತಗಳಿಸಿ ಮುಖ್ಯಸ್ಥಾನವನ್ನು ಪಡೆದುಕೊಳ್ಳುತ್ತಾರೆ, ಈ ಪದ್ಧತಿ ಸರಿಯಾದುದಲ್ಲ.

ಮ.ದೇ : ಹಾಗಾದರೆ ನಾವು ನಾಯಕರನ್ನು ಸಾರ್ವಜನಿಕ ಚುನಾವಣೆಗಳ ಮೂಲಕ ಆಯ್ಕೆ ಮಾಡದಿದ್ದರೆ ಸರ್ಕಾರ ನಡೆಸುವುದು ಹೇಗೆ?

ಶ್ರೀಲ ಪ್ರಭುಪಾದ : ಅದಕ್ಕೆ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಬೇಕು. ನೀವು ಕಟ್ಟಡ ನಿರ್ಮಾಣ ಮಾಡಬೇಕೆಂದಾಗ ನಿಮಗೆ ಇಂಜಿನಿಯರರು ಹೇಗೆ ಬೇಕೋ ಹಾಗೆ. ಆಗ ನಿಮಗೆ ಗುಡಿಸುವವರು ಬೇಕಾಗುವುದಿಲ್ಲ ತಾನೆ ? ಆಗ ಗುಡಿಸುವವನು ಏನು ಮಾಡಬಲ್ಲ ? ಪ್ರಯೋಜನವಿಲ್ಲ. ಇಂಜಿನಿಯರರೇ ಬೇಕು. ಹೀಗೆ ನೀವು ವರ್ಣಾಶ್ರಮ ಧರ್ಮವನ್ನನುಸರಿಸಿದರೆ, ಕ್ಷತ್ರಿಯರಿಗೆ ಮಾತ್ರ ಆಡಳಿತ ಒಪ್ಪಿಸಬೇಕಾಗುವುದು. ಶಾಸನ ಸಭೆ–ಸೆನೆಟ್ ಸಭೆಗಳಿಗೆ–ಅರ್ಹ ಬ್ರಾಹ್ಮಣರೇ ಬೇಕು. ಈಗ ಕಸಾಯಿ ಕೆಲಸ ಮಾಡುವವನು ಶಾಸನ ಸಭೆಯಲ್ಲಿದ್ದಾನೆ. ಶಾಸನ ರಚನೆ ಅವನಿಗೇನು ತಿಳಿದಿದೆ ? ಅವನು ಕಸಾಯಿಗ, ಕೇವಲ ಓಟು ಗಿಟ್ಟಿಸಿ ಅವನು ಸೆನೆಟರ್ ಆಗಿ ಬಂದಿದ್ದಾನೆ. ಈಗಿನ ವೊಕ್ಸ್ ಪಾಪುಲಿ ನಿಯಮಾನುಸಾರ ಕಸಾಯಿಗನು ಶಾಸನ ಸಭೆಗೆ ಹೋಗುತ್ತಾನೆ. ಪ್ರತಿಯೊಂದೂ ಒಂದು ವಿಶಿಷ್ಟ ತರಬೇತಿಯನ್ನು ಅವಲಂಬಿಸಿದೆ. ನಾವು ನಮ್ಮ ಕೃಷ್ಣಪ್ರಜ್ಞಾ ಸಂಘದಲ್ಲಿ ವಾಸ್ತವಿಕವಾಗಿ ಈ ತರಬೇತಿಯನ್ನೇ ನೀಡುತ್ತೇವೆ. ಆದರೆ ರಾಜಕೀಯ ಕ್ಷೇತ್ರದಲ್ಲಿ ಅವರು ಇದನ್ನು ಮರೆಯುತ್ತಾರೆ. ಒಂದೇ ಬಗೆಯ ವರ್ಗವಿರುವುದು ಸಾಧ್ಯವಿಲ್ಲ. ನಾವು ಬೇರೆ ಬೇರೆ ಕೆಲಸಗಳಿಗೆ ಬೇರೆ ಬೇರೆ ಬಗೆಯ ಜನರನ್ನು ನಿಯೋಜಿಸುತ್ತೇವೆ. ಹೀಗಿರುವಾಗ ಒಂದೇ ವರ್ಗವಿರುವುದು ಮೂರ್ಖತನ ವಾದೀತು. ನಾವು ಈ ಕಲೆಯನ್ನು ಅರಿಯದಿದ್ದರೆ, ವಿಫಲರಾಗುತ್ತೇವೆ. ಕಾರ್ಯ ವಿಭಜನೆ ಇಲ್ಲದಿದ್ದರೆ ಗೊಂದಲವುಂಟಾಗುತ್ತದೆ. ಶ್ರೀಮದ್ಭಾಗವತದಲ್ಲಿ ನಾವು ಎಲ್ಲ ರಾಜ ಧರ್ಮ ಗಳನ್ನು ಕುರಿತು ಚರ್ಚಿಸಿದ್ದೇವೆ. ದೇಹದ ವಿವಿಧ ಅಂಗಗಳು ಸಹಕರಿಸಿದ ಹಾಗೆ ಸಮಾಜದ ವಿವಿಧ ವರ್ಗಗಳೂ ಸಹಕರಿಸಬೇಕು. ಪ್ರತಿಯೊಂದು ಅಂಗವೂ ವಿಶಿಷ್ಟ ಕೆಲಸಕ್ಕಾಗಿಯೇ ಇದ್ದರೂ ಅವು ಒಟ್ಟಾಗಿ ಸಾಮಾನ್ಯ ಉದ್ದೇಶಕ್ಕಾಗಿಯೇ–ದೇಹ ಪೋಷಣೆಗಾಗಿ–ಕೆಲಸ ಮಾಡುತ್ತವೆ.

ಮ. ದೇ : ಸರ್ಕಾರದ ನಿಜವಾದ ಕರ್ತವ್ಯವೇನು ?

ಶ್ರೀಲ ಪ್ರಭುಪಾದ : ದೇವರು ಏನು ಇಚ್ಛಿಸುತ್ತಾನೆ ಎಂಬುದನ್ನು ಅರಿತುಕೊಳ್ಳಬೇಕು ಮತ್ತು ಆ ಗುರಿಯತ್ತ ಸಮಾಜವು ಸಾಗಬೇಕು. ಆಗ ಜನ ಸುಖಿಗಳಾಗುತ್ತಾರೆ. ಜನ ಸರಿಯಾದ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದಾರೆಂಬುದನ್ನು ನೋಡಿಕೊಳ್ಳುವುದೇ ಸರ್ಕಾರದ ಕರ್ತವ್ಯ. ಸರಿಯಾದ ಮಾರ್ಗ ಎಂದರೆ ದೇವರನ್ನು ಅರಿತುಕೊಳ್ಳುವುದು ಮತ್ತು ಅವನ ಆದೇಶಗಳಿಗನುಸಾರವಾಗಿ ವರ್ತಿಸುವುದು. ಆದರೆ ನಾಯಕರೇ ಭಗವಂತನ ಸಾರ್ವಭೌಮತ್ವ ದಲ್ಲಿ ನಂಬಿಕೆ ಹೊಂದಿಲ್ಲದಿದ್ದರೆ, ಮತ್ತು ದೇವರು ಏನು ಇಚ್ಛಿಸುತ್ತಾನೆಂಬುದನ್ನು ಅಥವಾ ನಾವೇನು ಮಾಡಬೇಕೆಂದು ಅವನು ಬಯಸುತ್ತಾನೆಂಬುದನ್ನು ಅರಿಯದೆ ಹೋದರೆ, ಒಳ್ಳೆಯ ಸರ್ಕಾರ ಇರುವುದು ಹೇಗೆ ಸಾಧ್ಯ ? ನಾಯಕರು ತಪ್ಪುದಾರಿಗೆಳೆಯಲ್ಪಟ್ಟಿದ್ದಾರೆ, ಅವರು ಜನರನ್ನು ತಪ್ಪು ದಾರಿಗೆಳೆಯುತ್ತಿದ್ದಾರೆ. ಇದೇ ಇಂದಿನ ಜಗತ್ತಿನಲ್ಲಿ ಕಾಣಬರುವ ಗೊಂದಲದ ಪರಿಸ್ಥಿತಿ.

ಮ. ದೇ : ಅಮೆರಿಕದಲ್ಲಿ ಧರ್ಮ (ಚರ್ಚ್) ಮತ್ತು ರಾಜ್ಯ ಸಾಂಪ್ರದಾಯಿಕವಾಗಿಯೇ ಬೇರೆ ಬೇರೆಯಾಗಿವೆ.

ಶ್ರೀಲ ಪ್ರಭುಪಾದ : ನಾನು ಚರ್ಚ್ ಬಗ್ಗೆ ಮಾತನಾಡುತ್ತಿಲ್ಲ. ಚರ್ಚ್ ಇರಲಿ ಇಲ್ಲದಿರಲಿ–ಅದು ಮುಖ್ಯ ಅಂಶವಲ್ಲ. ಒಬ್ಬ ಪರಮ ನಿಯಾಮಕನಿದ್ದಾನೆಂಬುದನ್ನು ಮುಖ್ಯವಾಗಿ ಜನನಾಯಕರು ಒಪ್ಪಿಕೊಳ್ಳಬೇಕು. ಅವರು ಅದನ್ನು ನಿರಾಕರಿಸುವುದು ಹೇಗೆ ಸಾಧ್ಯ ? ನಿಸರ್ಗದ ಪ್ರತಿಯೊಂದು ವಸ್ತುವೂ ಪರಮ ನಿಯಾಮಕನ ನಿಯಂತ್ರಣಕ್ಕೊಳಪಟ್ಟು ವರ್ತಿಸುತ್ತದೆ. ಜನನಾಯಕರು ನಿಸರ್ಗವನ್ನು ನಿಯಂತ್ರಿಸಲಾರರು. ಹಾಗಿರುವಾಗ ಅವರು ಒಬ್ಬ ಪರಮ ನಿಯಾಮಕನನ್ನು ಏಕೆ ಒಪ್ಪಿಕೊಳ್ಳುತ್ತಿಲ್ಲ. ಇದೇ ಸಮಾಜದಲ್ಲಿರುವ ದೋಷ. ಪ್ರತಿಯೊಂದು ವಿಷಯದಲ್ಲಿಯೂ ಒಬ್ಬ ಪರಮ ನಿಯಾಮಕನಿದ್ದಾನೆಂಬುದು ಜನ ನಾಯಕರಿಗೆ ಅನಿಸುತ್ತಿದೆ, ಆದರೂ ಅವರು ಅವನನ್ನು ನಿರಾಕರಿಸುತ್ತಿದ್ದಾರೆ.

ಮ. ದೇ : ಸರ್ಕಾರವು ನಾಸ್ತಿಕವಾಗಿದ್ದರೆ . . . .

ಶ್ರೀಲ ಪ್ರಭುಪಾದ : ಆಗ ಒಳ್ಳೆಯ ಸರ್ಕಾರವೆಂಬುದು ಸಾಧ್ಯವಿಲ್ಲ. ದೇವರಲ್ಲಿ ನಂಬಿಕೆ ಇಟ್ಟಿದ್ದೇವೆ ಎಂದು ಅಮೆರಿಕನ್ನರು ಹೇಳುತ್ತಾರೆ. ಆದರೆ ಆಧ್ಯಾತ್ಮ ವಿಜ್ಞಾನವಿಲ್ಲದೆ ಈ ನಂಬಿಕೆ ಕೇವಲ ಕಾಲ್ಪನಿಕವಾಗುತ್ತದೆ. ಮೊದಲು ನೀವು ಆಧ್ಯಾತ್ಮ ವಿಜ್ಞಾನವನ್ನು ಸರಿಯಾಗಿ ತಿಳಿದುಕೊಳ್ಳಿ, ಆಮೇಲೆ ದೇವರಲ್ಲಿ ನಿಮ್ಮ ಶ್ರದ್ಧೆ ಇಡಿ. ಅವರಿಗೆ ದೇವರೆಂದರೇನು ಗೊತ್ತಿಲ್ಲ, ನಮಗೆ ಗೊತ್ತಿದೆ. ನಾವು ನಿಜವಾಗಿ ದೇವರಲ್ಲಿ ಶ್ರದ್ಧೆ ಹೊಂದಿದ್ದೇವೆ.

ಅವರು ತಮ್ಮದೇ ಆದ ಆಡಳಿತ ಕ್ರಮಗಳನ್ನು ರೂಪಿಸುತ್ತಿದ್ದಾರೆ. ಅದೇ ಅವರು ಮಾಡುತ್ತಿರುವ ತಪ್ಪು. ಅವರು ಎಂದೂ ಯಶಸ್ವಿಯಾಗುವುದಿಲ್ಲ. ಅವರು ಅಪರಿಪೂರ್ಣರು, ಅವರು ತಮಗೆ ತಿಳಿದಂತೆ ಮಾರ್ಗೋಪಾಯಗಳನ್ನು ರೂಪಿಸುತ್ತ ಹೋದರೆ, ಅವರು ಅಪರಿಪೂರ್ಣರಾಗಿಯೇ ಉಳಿಯುತ್ತಾರೆ. ಒಂದಾದ ಮೇಲೆ ಮತ್ತೊಂದರಂತೆ ಕ್ರಾಂತಿ ಸಂಭವಿಸುತ್ತಲೇ ಇರುತ್ತವೆ. ಶಾಂತಿ ಇರುವುದಿಲ್ಲ.

ಮ. ದೇ : ಜನರು ಅನುಸರಿಸಬೇಕಾದ ಧಾರ್ಮಿಕ ವಿಧಿನಿಯಮಗಳನ್ನು ನಿರ್ಧರಿಸುವವರು ಯಾರು ?

ಶ್ರೀಲ ಪ್ರಭುಪಾದ : ದೇವರು. ದೇವರು ಪರಿಪೂರ್ಣನು. ಅವನೇ ನಿರ್ಧರಿಸುತ್ತಾನೆ. ವೇದಗಳ ಪ್ರಕಾರ ದೇವರೇ ಸಕಲ ಜೀವರುಗಳಿಗೆ ನಿಯಾಮಕ. **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್.** ನಾವು ಅವನಿಂದ ಭಿನ್ನರು. ಅವನು ಪರಿಪೂರ್ಣನು, ನಾವು ಅಪರಿಪೂರ್ಣರು. ನಾವು ಅತ್ಯಲ್ಪರು. ನಮ್ಮಲ್ಲಿ ದೇವತ್ವದ ಗುಣಗಳಿವೆ ನಿಜ, ಆದರೆ ಬಹು ಅಲ್ಪ ಪ್ರಮಾಣದಲ್ಲಿ. ನಮ್ಮಲ್ಲಿ ಅತ್ಯಲ್ಪ ಜ್ಞಾನವಿದೆ ಅಷ್ಟೆ. ಅಲ್ಪಜ್ಞಾನದಿಂದ ನೀವು 747 ವಿಮಾನವನ್ನು ತಯಾರಿಸಬಹುದು. ಆದರೆ ನೀವು ಒಂದು ಸೊಳ್ಳೆಯನ್ನು ತಯಾರಿಸಲಾರಿರಿ. ದೇವರು ಸೊಳ್ಳೆಯ ದೇಹವನ್ನೂ ರಚಿಸಿದ್ದಾನೆ. ಅದೂ ಒಂದು "ವಿಮಾನವೇ". ದೇವರಿಗೂ ನಮಗೂ ಇದೇ ವ್ಯತ್ಯಾಸ. ನಮಗೆ ಜ್ಞಾನವಿದೆ, ಆದರೆ ಅದು ದೇವರ ಜ್ಞಾನದಷ್ಟು ಪರಿಪೂರ್ಣವಾದುದಲ್ಲ. ಆದುದರಿಂದ ಸರ್ಕಾರ ನಡೆಸುವ ಮುಂದಾಳುಗಳು ಭಗವಂತನ

ಸಲಹೆಯನ್ನು ಕೇಳಬೇಕು ; ಆಗ ಅವರು ಪರಿಪೂರ್ಣವಾದ ಆಡಳಿತವನ್ನು ನಡೆಸಬಹುದು.

ಮ. ದೇ : ಹಾಗಾದರೆ ದೇವರು ಅತ್ಯಂತ ಪರಿಪೂರ್ಣವೆನಿಸುವ ಸರ್ಕಾರವನು ರೂಪಿಸಿರುವನೇ ?

ಶ್ರೀಲ ಪ್ರಭುಪಾದ : ಖಂಡಿತ. ವೇದ ಕಾಲದಲ್ಲಿ ಕ್ಷತ್ರಿಯರೇ ರಾಜ್ಯಭಾರ ಮಾಡ್ತು ತ್ತಿದ್ದರು. ಯುದ್ಧ ನಡೆದರೆ ರಾಜನೇ ಮೊದಲು ಯುದ್ಧಕ್ಕೆ ಧಾವಿಸುತ್ತಿದ್ದನು. ನಿಮ್ಮ ಜಾರ್ಜ್ ವಾಷಿಂಗಟನ್ ಹಾಗೆ ಅವನೇ ಮೊದಲು ಯುದ್ಧಕ್ಕೆ ಸಿದ್ಧನಾಗುತ್ತಿದ್ದನು. ಆದರೆ ಈಗ ಆಡಳಿತ ನಡೆಸುತ್ತಿರುವ ಅಧ್ಯಕ್ಷರು ಎಂಥವರು ? ಈಗ ಯುದ್ಧ ಪ್ರಾರಂಭವಾದರೆ ಅವನು ಹಾಯಾಗಿ ಕುಳಿತುಕೊಂಡು ಟೆಲಿಫೋನ್ ಮೂಲಕ ಆದೇಶಗಳನ್ನು ನೀಡುತ್ತಾನೆ. ಆವನು ಅಧ್ಯಕ್ಷನಾಗಲು ಅನರ್ಹ. ಯುದ್ಧ ಪ್ರಾರಂಭವಾದಾಗ ಅಧ್ಯಕ್ಷನೇ ಯುದ್ಧ ಭೂಮಿಯ ಮುಂಚೂಣಿಯಲ್ಲಿದ್ದು ಮಾರ್ಗದರ್ಶನ ನೀಡಬೇಕು.

ಮ. ದೇ : ಮನುಷ್ಯನು ಅಲ್ಪನೂ ಅಪರಿಪೂರ್ಣನೂ ಆಗಿದ್ದರೆ, ಅವನು ಪರಿಪೂರ್ಣವಾದ ಸರ್ಕಾರದ ದೇವರ ಪರಿಪೂರ್ಣ ಆದೇಶಗಳನ್ನು ನೆರವೇರಿಸುವುದು ಹೇಗೆ ಸಾಧ್ಯ ?

ಶ್ರೀಲ ಪ್ರಭುಪಾದ : ನೀವು ಅಪರಿಪೂರ್ಣರಾಗಿರಬಹದು, ನೀವು ನನ್ನ ಆದೇಶ ಗಳನ್ನು ಈಡೇರಿಸುವಾಗ ನೀವು ಪರಿಪೂರ್ಣರಾಗುವಿರಿ. ನೀವು ನನ್ನನ್ನು ನಿಮ್ಮ ನಾಯಕನೆಂದು ಅಂಗೀಕರಿಸಿದ್ದೀರಿ, ನಾನು ದೇವರು ನನ್ನ ನಾಯಕನೆಂದು ಅಂಗೀಕರಿಸಿದ್ದೇನೆ. ಹೀಗೆ ಸಮಾಜ ವನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಹೋಗಬಹುದು.

ಮ. ದೇ : ಹಾಗಾದರೆ ಒಳ್ಳೆಯ ಸರ್ಕಾರ ಎಂದರೆ ಸರ್ಕಾರದ ನಿಜವಾದ ನಿಯಾಮಕನು ಪರಮಾತ್ಮನೆಂದು ಮೊದಲು ಒಪ್ಪಿಕೊಳ್ಳಬೇಕೆಂದು ಹೇಳಿದ ಹಾಗಾಯಿತು ಅಲ್ಲವೇ ?

ಶ್ರೀಲ ಪ್ರಭುಪಾದ : ನೀವು ಪ್ರತ್ಯಕ್ಷವಾಗಿ ಪರಮಾತ್ಮನನ್ನು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ. ನೀವು ಪರಮಾತ್ಮನ ಸೇವಕರನ್ನು ಎಂದರೆ ಬ್ರಾಹ್ಮಣರನ್ನು ಅಥವಾ ಭಗವಂತನ ಭಕ್ತರಾದ ವೈಷ್ಣವರನ್ನು ನಿಮ್ಮ ಮಾರ್ಗದರ್ಶಕರನ್ನಾಗಿ ಒಪ್ಪಿಕೊಳ್ಳಬೇಕು. ಸರ್ಕಾರ ನಡೆಸುವ ಕ್ಷತ್ರಿಯರು ದ್ವಿತೀಯ ವರ್ಗಕ್ಕೆ ಸೇರಿದವರು. ಕ್ಷತ್ರಿಯರು ಬ್ರಾಹ್ಮಣರಿಂದ ಎಂದರೆ ವೈಷ್ಣವರಿಂದ ಸಲಹೆ ಪಡೆಯಬೇಕು ಮತ್ತು ಆ ಪ್ರಕಾರ ಶಾಸನ ರಚನೆಮಾಡಬೇಕು. ವೈಶ್ಯರು ಕ್ಷತ್ರಿಯರ ಆದೇಶಗಳನ್ನು ಕಾರ್ಯರೂಪಕ್ಕೆ ತರಬೇಕು, ಮತ್ತು ಶೂದ್ರರು ಈ ಮೂರು ವರ್ಗ ದವರಿಗೆ ವಿಧೇಯರಾಗಿ ಕೆಲಸ ಮಾಡಬೇಕು. ಆಗ ಸಮಾಜವು ಪರಿಪೂರ್ಣತೆಯನ್ನು ಪಡೆಯುತ್ತದೆ.

ಮ. ದೇ : ಅಮೆರಿಕದಲ್ಲಿ ಧರ್ಮ (ಚರ್ಚ್) ಮತ್ತು ರಾಜ್ಯ ಸಾಂಪ್ರದಾಯಿಕ ವಾಗಿಯೇ ಬೇರೆ ಬೇರೆಯಾಗಿವೆ.

ಶ್ರೀಲ ಪ್ರಭುಪಾದ : ನಾನು ಚರ್ಚ್ ಬಗ್ಗೆ ಮಾತನಾಡುತ್ತಿಲ್ಲ. ಚರ್ಚ್ ಇರಲಿ ಇಲ್ಲದಿರಲಿ–ಅದು ಮುಖ್ಯ ಅಂಶವಲ್ಲ. ಒಬ್ಬ ಪರಮ ನಿಯಾಮಕನಿದ್ದಾನೆಂಬುದನ್ನು ಮುಖ್ಯವಾಗಿ ಜನನಾಯಕರು ಒಪ್ಪಿಕೊಳ್ಳಬೇಕು. ಅವರು ಅದನ್ನು ನಿರಾಕರಿಸುವುದು ಹೇಗೆ ಸಾಧ್ಯ ? ನಿಸರ್ಗದ ಪ್ರತಿಯೊಂದು ವಸ್ತುವೂ ಪರಮ ನಿಯಾಮಕನ ನಿಯಂತ್ರಣಕ್ಕೊಳಪಟ್ಟು ವರ್ತಿಸುತ್ತದೆ. ಜನನಾಯಕರು ನಿಸರ್ಗವನ್ನು ನಿಯಂತ್ರಿಸಲಾರರು. ಹಾಗಿರುವಾಗ ಅವರು ಒಬ್ಬ ಪರಮ ನಿಯಾಮಕನನ್ನು ಏಕೆ ಒಪ್ಪಿಕೊಳ್ಳುತ್ತಿಲ್ಲ. ಇದೇ ಸಮಾಜದಲ್ಲಿರುವ ದೋಷ. ಪ್ರತಿಯೊಂದು ವಿಷಯದಲ್ಲಿಯೂ ಒಬ್ಬ ಪರಮ ನಿಯಾಮಕನಿದ್ದಾನೆಂಬುದು ಜನ ನಾಯಕರಿಗೆ ಅನಿಸುತ್ತಿದೆ, ಆದರೂ ಅವರು ಅವನನ್ನು ನಿರಾಕರಿಸುತ್ತಿದ್ದಾರೆ.

ಮ. ದೇ : ಸರ್ಕಾರವು ನಾಸ್ತಿಕವಾಗಿದ್ದರೆ . . . .

ಶ್ರೀಲ ಪ್ರಭುಪಾದ : ಆಗ ಒಳ್ಳೆಯ ಸರ್ಕಾರವೆಂಬುದು ಸಾಧ್ಯವಿಲ್ಲ. ದೇವರಲ್ಲಿ ನಂಬಿಕೆ ಇಟ್ಟಿದ್ದೇವೆ ಎಂದು ಅಮೆರಿಕನ್ನರು ಹೇಳುತ್ತಾರೆ. ಆದರೆ ಆಧ್ಯಾತ್ಮ ವಿಜ್ಞಾನವಿಲ್ಲದೆ ಈ ನಂಬಿಕೆ ಕೇವಲ ಕಾಲ್ಪನಿಕವಾಗುತ್ತದೆ. ಮೊದಲು ನೀವು ಆಧ್ಯಾತ್ಮ ವಿಜ್ಞಾನವನ್ನು ಸರಿಯಾಗಿ ತಿಳಿದುಕೊಳ್ಳಿ, ಆಮೇಲೆ ದೇವರಲ್ಲಿ ನಿಮ್ಮ ಶ್ರದ್ಧೆ ಇಡಿ. ಅವರಿಗೆ ದೇವರೆಂದರೇನು ಗೊತ್ತಿಲ್ಲ, ನಮಗೆ ಗೊತ್ತಿದೆ. ನಾವು ನಿಜವಾಗಿ ದೇವರಲ್ಲಿ ಶ್ರದ್ಧೆ ಹೊಂದಿದ್ದೇವೆ.

ಅವರು ತಮ್ಮದೇ ಆದ ಆಡಳಿತ ಕ್ರಮಗಳನ್ನು ರೂಪಿಸುತ್ತಿದ್ದಾರೆ. ಅದೇ ಅವರು ಮಾಡುತ್ತಿರುವ ತಪ್ಪು. ಅವರು ಎಂದೂ ಯಶಸ್ವಿಯಾಗುವುದಿಲ್ಲ. ಅವರು ಅಪರಿಪೂರ್ಣರು, ಅವರು ತಮಗೆ ತಿಳಿದಂತೆ ಮಾರ್ಗೋಪಾಯಗಳನ್ನು ರೂಪಿಸುತ್ತ ಹೋದರೆ, ಅವರು ಅಪರಿಪೂರ್ಣರಾಗಿಯೇ ಉಳಿಯುತ್ತಾರೆ. ಒಂದಾದ ಮೇಲೆ ಮತ್ತೊಂದರಂತೆ ಕ್ರಾಂತಿ ಸಂಭವಿಸುತ್ತಲೇ ಇರುತ್ತವೆ. ಶಾಂತಿ ಇರುವುದಿಲ್ಲ.

ಮ. ದೇ : ಜನರು ಅನುಸರಿಸಬೇಕಾದ ಧಾರ್ಮಿಕ ವಿಧಿನಿಯಮಗಳನ್ನು ನಿರ್ಧರಿಸು ವವರು ಯಾರು ?

ಶ್ರೀಲ ಪ್ರಭುಪಾದ : ದೇವರು. ದೇವರು ಪರಿಪೂರ್ಣನು. ಅವನೇ ನಿರ್ಧರಿಸುತ್ತಾನೆ. ವೇದಗಳ ಪ್ರಕಾರ ದೇವರೇ ಸಕಲ ಜೀವರುಗಳಿಗೆ ನಿಯಾಮಕ. **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್.** ನಾವು ಅವನಿಂದ ಭಿನ್ನರು. ಅವನು ಪರಿಪೂರ್ಣನು, ನಾವು ಅಪರಿ ಪೂರ್ಣರು. ನಾವು ಅತ್ಯಲ್ಪರು. ನಮ್ಮಲ್ಲಿ ದೇವತ್ವದ ಗುಣಗಳಿವೆ ನಿಜ, ಆದರೆ ಬಹು ಅಲ್ಪ ಪ್ರಮಾಣದಲ್ಲಿ. ನಮ್ಮಲ್ಲಿ ಅತ್ಯಲ್ಪ ಜ್ಞಾನವಿದೆ ಅಷ್ಟೆ. ಅಲ್ಪಜ್ಞಾನದಿಂದ ನೀವು 747 ವಿಮಾನವನ್ನು ತಯಾರಿಸಬಹುದು. ಆದರೆ ನೀವು ಒಂದು ಸೊಳ್ಳೆಯನ್ನು ತಯಾರಿಸಲಾರಿರಿ. ದೇವರು ಸೊಳ್ಳೆಯ ದೇಹವನ್ನೂ ರಚಿಸಿದ್ದಾನೆ. ಅದೂ ಒಂದು "ವಿಮಾನವೇ". ದೇವರಿಗೂ ನಮಗೂ ಇದೇ ವ್ಯತ್ಯಾಸ. ನಮಗೆ ಜ್ಞಾನವಿದೆ, ಆದರೆ ಅದು ದೇವರ ಜ್ಞಾನದಷ್ಟು ಪರಿಪೂರ್ಣವಾದುದಲ್ಲ. ಆದುದರಿಂದ ಸರ್ಕಾರ ನಡೆಸುವ ಮುಂದಾಳುಗಳು ಭಗವಂತನ

ಸಲಹೆಯನ್ನು ಕೇಳಬೇಕು ; ಆಗ ಅವರು ಪರಿಪೂರ್ಣವಾದ ಆಡಳಿತವನ್ನು ನಡೆಸಬಹುದು.

ಮ. ದೇ : ಹಾಗಾದರೆ ದೇವರು ಅತ್ಯಂತ ಪರಿಪೂರ್ಣವೆನಿಸುವ ಸರ್ಕಾರವನು ರೂಪಿಸಿರುವನೇ ?

ಶ್ರೀಲ ಪ್ರಭುಪಾದ : ಖಂಡಿತ. ವೇದ ಕಾಲದಲ್ಲಿ ಕ್ಷತ್ರಿಯರೇ ರಾಜ್ಯಭಾರ ಮಾಡ್ತು ತ್ತಿದ್ದರು. ಯುದ್ಧ ನಡೆದರೆ ರಾಜನೇ ಮೊದಲು ಯುದ್ಧಕ್ಕೆ ಧಾವಿಸುತ್ತಿದ್ದನು. ನಿಮ್ಮ ಜಾರ್ಜ್ ವಾಷಿಂಗಟನ್ ಹಾಗೆ ಅವನೇ ಮೊದಲು ಯುದ್ಧಕ್ಕೆ ಸಿದ್ಧನಾಗುತ್ತಿದ್ದನು. ಆದರೆ ಈಗ ಆಡಳಿತ ನಡೆಸುತ್ತಿರುವ ಅಧ್ಯಕ್ಷರು ಎಂಥವರು ? ಈಗ ಯುದ್ಧ ಪ್ರಾರಂಭವಾದರೆ ಅವನು ಹಾಯಾಗಿ ಕುಳಿತುಕೊಂಡು ಟೆಲಿಫೋನ್ ಮೂಲಕ ಆದೇಶಗಳನ್ನು ನೀಡುತ್ತಾನೆ. ಆವನು ಅಧ್ಯಕ್ಷನಾಗಲು ಅನರ್ಹ. ಯುದ್ಧ ಪ್ರಾರಂಭವಾದಾಗ ಅಧ್ಯಕ್ಷನೇ ಯುದ್ಧ ಭೂಮಿಯ ಮುಂಚೂಣಿಯಲ್ಲಿದ್ದು ಮಾರ್ಗದರ್ಶನ ನೀಡಬೇಕು.

ಮ. ದೇ : ಮನುಷ್ಯನು ಅಲ್ಪನೂ ಅಪರಿಪೂರ್ಣನೂ ಆಗಿದ್ದರೆ, ಅವನು ಪರಿಪೂರ್ಣವಾದ ಸರ್ಕಾರದ ದೇವರ ಪರಿಪೂರ್ಣ ಆದೇಶಗಳನ್ನು ನೆರವೇರಿಸುವುದು ಹೇಗೆ ಸಾಧ್ಯ ?

ಶ್ರೀಲ ಪ್ರಭುಪಾದ : ನೀವು ಅಪರಿಪೂರ್ಣರಾಗಿರಬಹುದು, ನೀವು ನನ್ನ ಆದೇಶ ಗಳನ್ನು ಈಡೇರಿಸುವಾಗ ನೀವು ಪರಿಪೂರ್ಣರಾಗುವಿರಿ. ನೀವು ನನ್ನನ್ನು ನಿಮ್ಮ ನಾಯಕನೆಂದು ಅಂಗೀಕರಿಸಿದ್ದೀರಿ, ನಾನು ದೇವರು ನನ್ನ ನಾಯಕನೆಂದು ಅಂಗೀಕರಿಸಿದ್ದೇನೆ. ಹೀಗೆ ಸಮಾಜ ವನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಹೋಗಬಹುದು.

ಮ. ದೇ : ಹಾಗಾದರೆ ಒಳ್ಳೆಯ ಸರ್ಕಾರ ಎಂದರೆ ಸರ್ಕಾರದ ನಿಜವಾದ ನಿಯಾಮಕನು ಪರಮಾತ್ಮನೆಂದು ಮೊದಲು ಒಪ್ಪಿಕೊಳ್ಳಬೇಕೆಂದು ಹೇಳಿದ ಹಾಗಾಯಿತು ಅಲ್ಲವೇ ?

ಶ್ರೀಲ ಪ್ರಭುಪಾದ : ನೀವು ಪ್ರತ್ಯಕ್ಷವಾಗಿ ಪರಮಾತ್ಮನನ್ನು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ. ನೀವು ಪರಮಾತ್ಮನ ಸೇವಕರನ್ನು ಎಂದರೆ ಬ್ರಾಹ್ಮಣರನ್ನು ಅಥವಾ ಭಗವಂತನ ಭಕ್ತರಾದ ವೈಷ್ಣವರನ್ನು ನಿಮ್ಮ ಮಾರ್ಗದರ್ಶಕರನ್ನಾಗಿ ಒಪ್ಪಿಕೊಳ್ಳಬೇಕು. ಸರ್ಕಾರ ನಡೆಸುವ ಕ್ಷತ್ರಿಯರು ದ್ವಿತೀಯ ವರ್ಗಕ್ಕೆ ಸೇರಿದವರು. ಕ್ಷತ್ರಿಯರು ಬ್ರಾಹ್ಮಣರಿಂದ ಎಂದರೆ ವೈಷ್ಣವರಿಂದ ಸಲಹೆ ಪಡೆಯಬೇಕು ಮತ್ತು ಆ ಪ್ರಕಾರ ಶಾಸನ ರಚನೆಮಾಡಬೇಕು. ವೈಶ್ಯರು ಕ್ಷತ್ರಿಯರ ಆದೇಶಗಳನ್ನು ಕಾರ್ಯರೂಪಕ್ಕೆ ತರಬೇಕು, ಮತ್ತು ಶೂದ್ರರು ಈ ಮೂರು ವರ್ಗ ದವರಿಗೆ ವಿಧೇಯರಾಗಿ ಕೆಲಸ ಮಾಡಬೇಕು. ಆಗ ಸಮಾಜವು ಪರಿಪೂರ್ಣತೆಯನ್ನು ಪಡೆಯುತ್ತದೆ.



# ಶಾಂತಿಸೂತ್ರ

**1966ರ ಕೊನೆಯಲ್ಲಿ ಯುದ್ಧ ವಿರೋಧಿ ಪ್ರತಿಭಟನೆಗಳು ನಡೆದಾಗ ಶ್ರೀಲಪ್ರಪಾದರು ತಮ್ಮ ನ್ಯೂಯಾರ್ಕ್ ಸೆಕೆಂಡ್ ಅವೆನ್ಯೂದಲ್ಲಿದ್ದ ಸಣ್ಣ ಮಳಿಗೆಯ ಮಂದಿರದಿಂದ ಅಚ್ಚು ಒತ್ತಿದ ಕರಪತ್ರ ಒಂದನ್ನು ಹೊರಡಿಸಿದರು. ಶ್ರೀಲಪ್ರಭುಪಾದರ ಅನುಯಾಯಿಗಳು ಮತ್ತು ಅವರ ಬಗ್ಗೆ ಸಹಾನುಭೂತಿ ಪರರು ನ್ಯೂಯಾರ್ಕ್‌ನ ಬೀದಿ ಬೀದಿಗಳಲ್ಲಿ ಈ ಕರಪತ್ರದ ಸಾವಿರಾರು ಪ್ರತಿಗಳನ್ನು ಹಂಚಿದರು. ಆಮೇಲೆ ಸಾನ್‌ಫ್ರಾನ್ಸಿಸ್‌ಕೋ, ಮಾಂಟ್ರಿಯಲ್ ಮತ್ತು ಇತರೆ ನಗರಗಳಲ್ಲಿಯೂ ಹಂಚಿದರು. ಅವರ "ಶಾಂತಿಸೂತ್ರ" ವು ಯುದ್ಧ ವಿರೋಧೀ ಪ್ರಶ್ನೆಗೆ ಸಂಪೂರ್ಣ ಹೊಸದೊಂದು ದೃಷ್ಟಿಯನ್ನೇ ಹೊಂದಿತ್ತು. ಸಹಸ್ರಾರು ಅಮೆರಿಕನ್ನರಿಗೆ ಅದು ಪರಿಪೂರ್ಣವಾದ ಒಂದು ಪರಿಹಾರೋಪಾಯವೆಂದು ಕಂಡುಬಂತು.**

ಇತರರ ಸ್ವತ್ತುಗಳ ಮೇಲೆ ಅದು ತಮ್ಮದೇ ಎಂಬಂತೆ ಆಕ್ರಮಣ ಮಾಡುವುದು ಮತ್ತು ನಿಸರ್ಗನಿಯಮಗಳಿಗೆ ವಿರುದ್ಧವಾಗಿ ಅನಾವಶ್ಯಕದ ಗೊಂದಲವನ್ನು ಸೃಷ್ಟಿಮಾಡುವುದು ಆಧುನಿಕ ನಾಗರಿಕತೆಯ ಒಂದು ದೊಡ್ಡ ದೋಷವಾಗಿದೆ. ಈ ನಿಸರ್ಗ ನಿಯಮಗಳು ಬಲು ಕಠೋರವಾಗಿವೆ. ಯಾವಜೀವಿಯೂ ಈ ನಿಯಮಗಳನ್ನು ಉಲ್ಲಂಘಿಸಲು ಸಾಧ್ಯವಿಲ್ಲ ಕೃಷ್ಣಾಪ್ರಜ್ಞಾವಂತನು ಮಾತ್ರ ಪ್ರತಿನಿಯಮಗಳ ಕಠೋರತೆಯನ್ನು ಸುಲಭವಾಗಿ ದಾಟಬಲ್ಲನು ಮತ್ತು ಈ ಜಗತ್ತಿನಲ್ಲಿ ಶಾಂತ ಸುಖಮಯ ಜೀವನ ನಡೆಸಬಲ್ಲನು.

ಒಂದು ರಾಜ್ಯವು ಕಾನೂನು ಸುವ್ಯವಸ್ಥೆ ನೋಡಿಕೊಳ್ಳುವ ಇಲಾಖೆಯಿಂದ ಹೇಗೆ ರಕ್ಷಿತವಾಗಿರುವುದೋ ಹಾಗೆಯೇ ಈ ಭೂಮಿಯು ವಿಶ್ವದ ಅತ್ಯಲ್ಪ ಭಾಗವಾಗಿದ್ದು, ವಿಶ್ವವು ಪ್ರಕೃತಿ ನಿಯಮಗಳಿಂದ ರಕ್ಷಿತವಾಗಿದೆ. ಈ ಭೌತಿಕ ನಿಸರ್ಗವು ಭಗವಂತನ ವಿವಿಧ ಶಕ್ತಿಗಳಲ್ಲಿ ಒಂದು. ಅವನೇ ಎಲ್ಲ ವಸ್ತುಗಳ ಅಂತಿಮ ಪ್ರಭು. ಆದುದರಿಂದ ಈ ಭೂಮಿಯು ಪರಮಾತ್ಮನ ಸ್ವತ್ತು. ಆದರೆ ನಾವು ವಿಶೇಷವಾಗಿ ನಾಗರಿಕರೆನಿಸಿಕೊಂಡ ಮಾನವರು ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಸುಳ್ಳು ಕಲ್ಪನೆಯ ಮೇರೆಗೆ ದೇವರ ಸ್ವತ್ತನ್ನು ನಮ್ಮದೆಂದು ಹೇಳುತ್ತಿದ್ದೇವೆ. ನಿಮಗೆ ಶಾಂತಿ ಬೇಕಾದರೆ ನೀವು ನಿಮ್ಮ ಮನಸ್ಸಿನಿಂದ ಮತ್ತು ಜಗತ್ತಿನಿಂದ ಈ ಸುಳ್ಳು ಕಲ್ಪನೆಯನ್ನು ನಿವಾರಿಸಬೇಕು. ಮಾನವ ಜನಾಂಗದ ಈ ಭೂಮಿಯ ಒಡೆತನದ

ಮಿಥ್ಯಾ ಕಲ್ಪನೆಯೇ ಈ ಭೂಮಂಡಲದ ಶಾಂತಿಯು ಕದಡುವುದಕ್ಕೆ ಭಾಗಶಃ ಅಥವಾ ಪೂರ್ಣವಾಗಿ ಕಾರಣವಾಗಿದೆ. ಈಗಿನ ನಾಗರಿಕರೆನಿಸಿಕೊಳ್ಳುವ ಮೂರ್ಖ ಮಾನವರು ಈಗ ನಾಸ್ತಿಕರಾಗಿರುವುದರಿಂದ ದೇವರ ಸ್ವತ್ತಿಗೆ ತಾವೇ ಮಾಲೀಕರೆಂದು ಹೇಳುತ್ತಿದ್ದಾರೆ. ನಾಸ್ತಿಕ ಸಮಾಜದಲ್ಲಿ ನೀವು ಶಾಂತಿ ಸುಖಗಳನ್ನು ಪಡೆಯಲಾರಿರಿ. ಭಗವಂತನು ತಾನೇ ಸಕಲ ಜೀವಾತ್ಮರ ಕರ್ಮಗಳ ನಿಜವಾದ ಭೋಕ್ತಾರನು, ಮತ್ತು ಅವನೇ ಎಲ್ಲ ವಿಶ್ವಗಳ ಪರಮ ಪ್ರಭು ಮತ್ತು ಅವನೆಯೇ ಎಲ್ಲ ಜೀವರ ಪರಮ ಹಿತೈಷಿಮಿತ್ರನೆಂದು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ. ಜಗತ್ತಿನ ಜನ ಈ ಶಾಂತಿ ಸೂತ್ರವನ್ನು ಯಾವಾಗ ಅರಿತುಕೊಳ್ಳುವರೋ ಆಗ ಈ ವಿಶ್ವದಲ್ಲಿ ಶಾಂತಿ ನೆಲೆಸುವುದು.

ಆದುದರಿಂದ ನಿಮಗೆ ಶಾಂತಿ ಬೇಕಾಗಿದ್ದರೆ, ನೀವು ಪವಿತ್ರ ಭಗವನ್ನಾಮದ ಸಂಕೀರ್ತನೆಯ ಸರಳ ವಿಧಾನದ ಮೂಲಕ ಸ್ವತಃ ಮತ್ತು ಸಾಮೂಹಿಕವಾಗಿ ನಿಮ್ಮ ಪ್ರಜ್ಞೆಯನ್ನು ಕೃಷ್ಣಪ್ರಜ್ಞೆಯಲ್ಲಿ ಬದಲಾಯಿಸಿಕೊಳ್ಳ ಬೇಕಾಗುವುದು. ಜಗತ್ತಿನಲ್ಲಿ ಶಾಂತಿ ಸಾಧನೆಗೆ ಇದೇ ಶ್ರೇಷ್ಠವಾದ ಮತ್ತು ಅಂಗೀಕೃತವಾದ ವಿಧಾನವಾಗಿದೆ. ಆದುದರಿಂದ ಪ್ರತಿಯೊಬ್ಬರೂ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ। ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂಬ ಮಂತ್ರವನ್ನು ಜಪಿಸಿ. ಎಲ್ಲರೂ ಕೃಷ್ಣ ಪ್ರಜ್ಞಾವಂತರಾಗಬೇಕೆಂದು ನಾವು ಹೇಳುತ್ತೇವೆ.

ಇದು ಕಾರ್ಯಸಾಧ್ಯ, ಸರಳ ಮತ್ತು ಪುಣ್ಯಪ್ರದವಾದದ್ದು. 480 ವರ್ಷಗಳ ಹಿಂದೆ ಭಾರತದಲ್ಲಿ ಶ್ರೀಚೈತನ್ಯರು ಈ ಸೂತ್ರವನ್ನು ಜಾರಿಗೆ ತಂದರು. ಇದು ನಿಮ್ಮ ದೇಶದಲ್ಲಿಯೂ ಲಭ್ಯವಾಗಿದೆ. ಮೇಲೆ ಹೇಳಿದ ಹಾಗೆ ಈ ಮಂತ್ರ ಸಂಕೀರ್ತನೆಯ ಸರಳ ವಿಧಾನವನ್ನನುಸರಿಸಿರಿ ಮತ್ತು ಯಥಾರೂಪ ಭಗವದ್ಗೀತೆಯನ್ನು ಓದುವ ಮೂಲಕ ನಿಮ್ಮ ನಿಜ ಸ್ವರೂಪವನ್ನು ಅರಿತುಕೊಳ್ಳಿರಿ. ನೀವು ಕಳೆದುಕೊಂಡ ಕೃಷ್ಣನ ಸಂಬಂಧವನ್ನು ಮತ್ತೆ ಸ್ಥಾಪಿಸಿಕೊಳ್ಳಿರಿ. ಹೀಗೆ ಮಾಡಿದರೆ ಇಡೀ ವಿಶ್ವಕೈಕ್ಯ ತತ್ವವನ್ನರಿಯಲು ಸಾಧ್ಯವಾಗುವುದು.



## ಶಾಂತಿಸೂತ್ರ

**1966ರ ಕೊನೆಯಲ್ಲಿ ಯುದ್ಧ ವಿರೋಧಿ ಪ್ರತಿಭಟನೆಗಳು ನಡೆದಾಗ ಶ್ರೀಲಪ್ರಭುಪಾದರು ತಮ್ಮ ನ್ಯೂಯಾರ್ಕ್ ಸೆಕೆಂಡ್ ಅವೆನ್ಯೂದಲ್ಲಿದ್ದ ಸಣ್ಣ ಮಳಿಗೆಯ ಮಂದಿರದಿಂದ ಅಚ್ಚು ಒತ್ತಿದ ಕರಪತ್ರ ಒಂದನ್ನು ಹೊರಡಿಸಿದರು. ಶ್ರೀಲಪ್ರಭುಪಾದರ ಅನುಯಾಯಿಗಳು ಮತ್ತು ಅವರ ಬಗ್ಗೆ ಸಹಾನುಭೂತಿ ಪರರು ನ್ಯೂಯಾರ್ಕ್‌ನ ಬೀದಿ ಬೀದಿಗಳಲ್ಲಿ ಈ ಕರಪತ್ರದ ಸಾವಿರಾರು ಪ್ರತಿಗಳನ್ನು ಹಂಚಿದರು. ಆಮೇಲೆ ಸಾನ್‌ಫ್ರಾನ್ಸಿಸ್‌ಕೋ, ಮಾಂಟ್ರಿಯಲ್ ಮತ್ತು ಇತರೆ ನಗರಗಳಲ್ಲಿಯೂ ಹಂಚಿದರು. ಅವರ "ಶಾಂತಿಸೂತ್ರ" ವು ಯುದ್ಧ ವಿರೋಧೀ ಪ್ರಶ್ನೆಗೆ ಸಂಪೂರ್ಣ ಹೊಸದೊಂದು ದೃಷ್ಟಿಯನ್ನೇ ಹೊಂದಿತ್ತು. ಸಹಸ್ರಾರು ಅಮೆರಿಕನ್ನರಿಗೆ ಅದು ಪರಿಪೂರ್ಣವಾದ ಒಂದು ಪರಿಹಾರೋಪಾಯವೆಂದು ಕಂಡುಬಂತು.**

ಇತರರ ಸ್ವತ್ತುಗಳ ಮೇಲೆ ಅದು ತಮ್ಮದೇ ಎಂಬಂತೆ ಆಕ್ರಮಣ ಮಾಡುವುದು ಮತ್ತು ನಿಸರ್ಗನಿಯಮಗಳಿಗೆ ವಿರುದ್ಧವಾಗಿ ಅನಾವಶ್ಯಕದ ಗೊಂದಲವನ್ನು ಸೃಷ್ಟಿಮಾಡುವುದು ಆಧುನಿಕ ನಾಗರಿಕತೆಯ ಒಂದು ದೊಡ್ಡ ದೋಷವಾಗಿದೆ. ಈ ನಿಸರ್ಗ ನಿಯಮಗಳು ಬಲು ಕಠೋರವಾಗಿವೆ. ಯಾವಜೀವಿಯೂ ಈ ನಿಯಮಗಳನ್ನು ಉಲ್ಲಂಘಿಸಲು ಸಾಧ್ಯವಿಲ್ಲ ಕೃಷ್ಣಪ್ರಜ್ಞಾವಂತನು ಮಾತ್ರ ಪ್ರತಿನಿಯಮಗಳ ಕಠೋರತೆಯನ್ನು ಸುಲಭವಾಗಿ ದಾಟಬಲ್ಲನು ಮತ್ತು ಈ ಜಗತ್ತಿನಲ್ಲಿ ಶಾಂತ ಸುಖಮಯ ಜೀವನ ನಡೆಸಬಲ್ಲನು.

ಒಂದು ರಾಜ್ಯವು ಕಾನೂನು ಸುವ್ಯವಸ್ಥೆ ನೋಡಿಕೊಳ್ಳುವ ಇಲಾಖೆಯಿಂದ ಹೇಗೆ ರಕ್ಷಿತವಾಗಿರುವುದೋ ಹಾಗೆಯೇ ಈ ಭೂಮಿಯು ವಿಶ್ವದ ಅತ್ಯಲ್ಪ ಭಾಗವಾಗಿದ್ದು, ವಿಶ್ವವು ಪ್ರಕೃತಿ ನಿಯಮಗಳಿಂದ ರಕ್ಷಿತವಾಗಿದೆ. ಈ ಭೌತಿಕ ನಿಸರ್ಗವು ಭಗವಂತನ ವಿವಿಧ ಶಕ್ತಿಗಳಲ್ಲಿ ಒಂದು. ಅವನೇ ಎಲ್ಲ ವಸ್ತುಗಳ ಅಂತಿಮ ಪ್ರಭು. ಆದುದರಿಂದ ಈ ಭೂಮಿಯು ಪರಮಾತ್ಮನ ಸ್ವತ್ತು. ಆದರೆ ನಾವು ವಿಶೇಷವಾಗಿ ನಾಗರಿಕರೆನಿಸಿಕೊಂಡ ಮಾನವರು ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಸುಳ್ಳು ಕಲ್ಪನೆಯ ಮೇರೆಗೆ ದೇವರ ಸ್ವತ್ತನ್ನು ನಮ್ಮದೆಂದು ಹೇಳುತ್ತಿದ್ದೇವೆ. ನಿಮಗೆ ಶಾಂತಿ ಬೇಕಾದರೆ ನೀವು ನಿಮ್ಮ ಮನಸ್ಸಿನಿಂದ ಮತ್ತು ಜಗತ್ತಿನಿಂದ ಈ ಸುಳ್ಳು ಕಲ್ಪನೆಯನ್ನು ನಿವಾರಿಸಬೇಕು. ಮಾನವ ಜನಾಂಗದ ಈ ಭೂಮಿಯ ಒಡೆತನದ

ಮಿಥ್ಯಾ ಕಲ್ಪನೆಯೇ ಈ ಭೂಮಂಡಲದ ಶಾಂತಿಯು ಕದಡುವುದಕ್ಕೆ ಭಾಗಶಃ ಅಥವಾ ಪೂರ್ಣ ವಾಗಿ ಕಾರಣವಾಗಿದೆ. ಈಗಿನ ನಾಗರಿಕರೆನಿಸಿಕೊಳ್ಳುವ ಮೂರ್ಖ ಮಾನವರು ಈಗ ನಾಸ್ತಿಕ ರಾಗಿರುವುದರಿಂದ ದೇವರ ಸ್ವತ್ತಿಗೆ ತಾವೇ ಮಾಲೀಕರೆಂದು ಹೇಳುತ್ತಿದ್ದಾರೆ. ನಾಸ್ತಿಕ ಸಮಾಜ ದಲ್ಲಿ ನೀವು ಶಾಂತಿ ಸುಖಗಳನ್ನು ಪಡೆಯಲಾರಿರಿ. ಭಗವಂತನು ತಾನೇ ಸಕಲ ಜೀವಾತ್ಮರ ಕರ್ಮಗಳ ನಿಜವಾದ ಭೋಕ್ತಾರನು, ಮತ್ತು ಅವನೇ ಎಲ್ಲ ವಿಶ್ವಗಳ ಪರಮ ಪ್ರಭು ಮತ್ತು ಅವನೆಯೇ ಎಲ್ಲ ಜೀವರ ಪರಮ ಹಿತೈಷಿಮಿತ್ರನೆಂದು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ. ಜಗತ್ತಿನ ಜನ ಈ ಶಾಂತಿ ಸೂತ್ರವನ್ನು ಯಾವಾಗ ಅರಿತುಕೊಳ್ಳುವರೋ ಆಗ ಈ ವಿಶ್ವದಲ್ಲಿ ಶಾಂತಿ ನೆಲೆಸುವುದು.

ಆದುದರಿಂದ ನಿಮಗೆ ಶಾಂತಿ ಬೇಕಾಗಿದ್ದರೆ, ನೀವು ಪವಿತ್ರ ಭಗವನ್ನಾಮದ ಸಂಕೀರ್ತನೆಯ ಸರಳ ವಿಧಾನದ ಮೂಲಕ ಸ್ವತಃ ಮತ್ತು ಸಾಮೂಹಿಕವಾಗಿ ನಿಮ್ಮ ಪ್ರಜ್ಞೆ ಯನ್ನು ಕೃಷ್ಣಪ್ರಜ್ಞೆಯಲ್ಲಿ ಬದಲಾಯಿಸಿಕೊಳ್ಳ ಬೇಕಾಗುವುದು. ಜಗತ್ತಿನಲ್ಲಿ ಶಾಂತಿ ಸಾಧನೆಗೆ ಇದೇ ಶ್ರೇಷ್ಠವಾದ ಮತ್ತು ಅಂಗೀಕೃತವಾದ ವಿಧಾನವಾಗಿದೆ. ಆದುದರಿಂದ ಪ್ರತಿಯೊಬ್ಬರೂ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ। ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂಬ ಮಂತ್ರವನ್ನು ಜಪಿಸಿ. ಎಲ್ಲರೂ ಕೃಷ್ಣ ಪ್ರಜ್ಞಾವಂತ ರಾಗಬೇಕೆಂದು ನಾವು ಹೇಳುತ್ತೇವೆ.

ಇದು ಕಾರ್ಯಸಾಧ್ಯ, ಸರಳ ಮತ್ತು ಪುಣ್ಯಪ್ರದವಾದದ್ದು. 480 ವರ್ಷಗಳ ಹಿಂದೆ ಭಾರತದಲ್ಲಿ ಶ್ರೀಚೈತನ್ಯರು ಈ ಸೂತ್ರವನ್ನು ಜಾರಿಗೆ ತಂದರು. ಇದು ನಿಮ್ಮ ದೇಶದಲ್ಲಿಯೂ ಲಭ್ಯವಾಗಿದೆ. ಮೇಲೆ ಹೇಳಿದ ಹಾಗೆ ಈ ಮಂತ್ರ ಸಂಕೀರ್ತನೆಯ ಸರಳ ವಿಧಾನವನ್ನನುಸರಿಸಿರಿ ಮತ್ತು ಯಥಾರೂಪ ಭಗವದ್ಗೀತೆಯನ್ನು ಓದುವ ಮೂಲಕ ನಿಮ್ಮ ನಿಜ ಸ್ವರೂಪವನ್ನು ಅರಿತುಕೊಳ್ಳಿರಿ. ನೀವು ಕಳೆದುಕೊಂಡ ಕೃಷ್ಣನ ಸಂಬಂಧವನ್ನು ಮತ್ತೆ ಸ್ಥಾಪಿಸಿಕೊಳ್ಳಿರಿ. ಹೀಗೆ ಮಾಡಿದರೆ ಇಡೀ ವಿಶ್ವಕೆಯ್ಕೆ ತತ್ವವನ್ನರಿಯಲು ಸಾಧ್ಯವಾಗುವುದು.

ದೇಹಗತ ಆತ್ಮವು ಈ ದೇಹದಲ್ಲಿ ಬಾಲ್ಯದಿಂದ ಯೌವ್ವನ, ಯೌವ್ವನದಿಂದ ವೃದ್ಧಾಪ್ಯ ಹೀಗೆ ಸಾಗುತ್ತದೆ. ಮನುಷ್ಯರು ಜೀರ್ಣವಸ್ತ್ರಗಳನ್ನು ತ್ಯಜಿಸಿ ಹೊಸದನ್ನು ಸ್ವೀಕರಿಸುವಂತೆ, ಆತ್ಮವು ಹಳೆಯದನ್ನು ಬಿಟ್ಟು ಹೊಸ ದೇಹಗಳನ್ನು ಪಡೆಯುತ್ತದೆ.

